# ಕಂಪಳ

( ಮ್ಯಾಸನಾಯಕರ ಸಂಸ್ಕೃತಿ ಕುರಿತ ಸಂಶೋಧನಾ ಲೇಖನಗಳು)

ಡಾ. ಎಸ್. ಎಂ. ಮುತ್ತಯ್ಯ

ಸಿ.ವಿ.ಜಿ ಇಂಡಿಯಾ
ಬೆಂಗಳೂರು

# ಪರಿವಿಡಿ



# ಮ್ಯಾಸ ಬೇಡರು/ನಾಯಕರು : ಪದ ನಿಷ್ಪತ್ತಿಃ ವಿಚಾರ

ಬಹು ಸಂಸ್ಕೃತಿಗಳ ನಾಡಾದ ಕರ್ನಾಟಕದ ಒಳಗೆ ಹಲವು ವೈವಿದ್ಯಮಯವಾದ ಬುಡಕಟ್ಟುಗಳು ನೆಲೆನಿಂತಿವೆ. ಸಂಸ್ಕೃತಿ, ಜನಸಂಖ್ಯೆ ಪ್ರಮಾಣ ತುಂಬಾ ಶ್ರೀಮಂತವಾಗಿ ಕಂಡು ಬರುವ ಹಲವು ಬುಡುಕಟ್ಟುಗಳಲ್ಲಿ 'ಮ್ಯಾಸಬೇಡರ' ಬುಡಕಟ್ಟು ಕೂಡ ಮುಖ್ಯವಾಗುತ್ತದೆ. ತಜ್ಞರು ಗುರುತಿಸಿರುವಂತೆ ಭದ್ರವಾದ ಅಸ್ತಿತ್ವವನ್ನು ಪಡೆದಿತ್ತು ಎಂಬುದಕ್ಕೆ ಸಂಸ್ಕೃತಿ ಮತ್ತು ಸಾಹಿತ್ಯದೊಳಗೆ ಹಲವು ಆಧಾರಗಳ ದೊರೆಯುತ್ತವೆ. ಅತ್ಯಂತ ವರ್ಣರಂಜಿತ ಬುಡಕಟ್ಟಾದ ಇದಕ್ಕೆ ಪುಳಿಂದ, ಭಿಲ್ಲ, ಕಿರಾತ, ವ್ಯಾದ, ಶಿಬಿರ, ನಿಷಾದ ಎಂಬಿತ್ಯಾದಿ ಹೆಸರುಗಲು ಚಾಲ್ತಿಯಲ್ಲಿದ್ದವು. ಈಗ ಬೇಡರು, ನಾಯಕರು, ಮ್ಯಾಸನಾಯಕರು, ಮ್ಯಾಸಬೇಡರು, ತಳವಾರ, ವಾಲ್ಮೀಕಿ, ಪಾಳೇಗಾರ ಹೆಸರುಗಳಿಂದ ಕರೆಯಲ್ಪಡುತ್ತಿದೆ. ತನ್ನ ಒಡಲಲ್ಲಿ ಅನೇಕ ನಿಗೂಢಗಳನ್ನು ಉದುಗಿಸಿಕೊಂಡ ಈ ಬುಡಕಟ್ಟು ಸಹಜವಾಗಿ ಅಧ್ಯಯನಕಾರರ ಗಮನವನ್ನು ತನ್ನೆಡೆಗೆ ಸಳೆದುಕೊಂಡಿದೆ. ಇದರ ಸೆಳೆತನಕ್ಕೆ ಸಿಕ್ಕು ಅಧ್ಯಯನ ಮಾಡಿದವರ ವಿವರಗಳು ಈ ಮುಂದಿನಂತಿವೆ. ಎಡ್ಗರ್ಥ್‌ರ್ಸ್ಟನ್, ರಂಗಾಚಾರಿ, ಹೆಚ್.ವಿ.ನಂಜುಂಡಯ್ಯ ಮುಂತಾದವರ ಲೇಖನಗಳು, ಎಂ.ರಂಗಪ್ಪ, ಅವರ 'ನುಂಕಿಮಲೆ ಪರಮಾರ್ಥ, ಎಂ. ಜಿ. ಈಶ್ವರಪ್ಪ ಅವರ 'ಮ್ಯಾಸಬೇಡರು', ಆರ್. ರಾಜಣ್ಣ ಅವರ 'ನಾಯಕ ಜನಾಂಗದ ಇತಿಹಾಸ', ಕರಿಶೆಟ್ಟಿರುದ್ರಪ್ಪ ಅವರ 'ಮ್ಯಾಸನಾಯಕರು: ಒಂದು ಅಧ್ಯಯನ' ಮೀರಾಸಾಬಿಹಳ್ಳಿ ಶಿವಣ್ಣ ಅವರ ಕೆಲವಾರು ಲೇಖನಗಳು ಕೃಷ್ಣಮೂರ್ತಿ ಹನೂರು ಅವರ 'ಮ್ಯಾಸಬೇಡರ ಸಂಸ್ಕೃತಿ', ಟಿ ನರಸಿಂಹರಾಜ ಅವರ 'ಮ್ಯಾಸಬೇಡರ ಸಾಂಸ್ಕೃತಿಕ ವೀರರು' ಈಗ ನಡೆದಿರುವ ಅಧ್ಯಯನಗಳು.

ಈವರೆಗೂ ನಡೆದ ಅಧ್ಯಯನಗಳು ಮ್ಯಾಸಬೇಡರು, ನಾಯಕರು ಎಂಬ ಪದಗಳ ನಿಷ್ಪತ್ತಿಯ ಬಗ್ಗೆ ಅಂತಿಮ ಎನ್ನಬಹುದಾದ ತೀರ್ಮಾನಕ್ಕೆ ಬಂದಂತೆ ಕಾಣುವುದಿಲ್ಲ. ಆದ್ದರಿಂದ ಇನ್ನೂ ಅಧ್ಯಯನಗಳು ನಡೆಯಬೇಕಿದೆ.

ಮ್ಯಾಸ – ಬೇಡರು – ನಾಯಕರು :

ಮೇಲಿನ ಮೂರು ಪದಗಳಿಗೂ ದೀರ್ಘವಾದ ಸಾಮಾಜಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆಗಳಿವೆ. ಇವುಗಳಲ್ಲಿ ಬೇಡರು ಪದ ತುಂಬಾ ಪ್ರಾಚೀನವಾದುದು. ಈ ಬುಡಕಟ್ಟು ಮೂಲತಃ ಕಾಡಿನಲ್ಲಿ ವಾಸಿಸುತ್ತಿದ್ದು, ತಮ್ಮ ಆಹಾರಕ್ಕಾಗಿ ಪ್ರಾಣಿ– ಪಕ್ಷಿಗಳನ್ನು ಬೇಟೆಯಾಡುತ್ತಿದ್ದುದು ಸತ್ಯಸಂಗತಿ. ಇದಕ್ಕೆ ಬೇಡ/ನಾಯಕ ಜನಾಂಗದ ಸಾಂಸ್ಕೃತಿಕ ನಾಯಕರೆಂದು ಒಪ್ಪಿಕೊಂಡಿರುವ ಏಕಲವ್ಯ–ವಾಲ್ಮೀಕಿ ಮೂಲತಃ ಬೇಟೆಗಾರಿಕೆಯನ್ನು ಅನುಸರಿಸುತ್ತಿದ್ದವರೇ ಎಂಬುದಕ್ಕೆ ಇತಿಹಾಸದಿಂದ ಆಧಾರಗಳು ದೊರೆಯುತ್ತವೆ. ಪ್ರಾಚೀನ ಶಾಸನ, ಸಾಹಿತ್ಯಗಳಲ್ಲಿ ಬೇಡ–ಬೇಡತಿ ಎನ್ನುವ ಉಲ್ಲೇಖಗಳಿರುವುದನ್ನು ಇಲ್ಲಿ ಸ್ಮರಿಸಬಹುದು. ಈ ನಂಬಿಕೆಗೆ ವಿರುದ್ದವಾದ ಅಂಶಗಳನ್ನೊಳಗೊಂಡ ಕೆಲವು ವಿಷಯಗಳನ್ನು ಕುರಿತಂತೆ ಇದೇ ಸಮುದಾಯಕ್ಕೆ ಸೇರಿದ ಹಿರಿಯರೊಬ್ಬರು (ಚಿತ್ತಯ್ಯಗಳ ಬೋರಜ್ಜ, ನಲಗೇತನಹಟ್ಟಿ, ಚಳ್ಳಕೆರೆ.ತಾ, ಚಿತ್ರದುರ್ಗ.ಜಿ) ಪ್ರಸ್ತಾಪಿಸುವುದನ್ನು ಉಲ್ಲೇಖಿಸಬಹುದು. ಇವರ

ಪ್ರಕಾರ ಬೇಡರು ಎನ್ನುವ ಪದ ಬೇಟೆಗಾರ ಎನ್ನುವ ಪದದಿಂದ ಬಂದಿದ್ದಲ್ಲ. ನಮ್ಮ ಸಾಂಸ್ಕೃತಿಕ ವೀರ ಕಣ್ಣಪ್ಪನನ್ನು ಶಿವ ಏನು ಬೇಕು ಕೇಳು ಎಂದನಂತೆ. ಅದಕ್ಕೆ ಕಣ್ಣಪ್ಪ ನನಗೇನು ಬೇಡ ತಿನ್ನಲು ಸೊಪ್ಪು, ಊಟದ ಗಂಗಳದ ಸುತ್ತಾ ಮಕ್ಕಳನ್ನು ಕೊಡು, ಸಾಕು ಎಂದನಂತೆ. ಅಂದಿನಿಂದ ಏನನ್ನು ಬೇಡದ ಕಣ್ಣಪ್ಪ–ಬೇಡರ ಕಣ್ಣಪ್ಪ ಆಗಿದ್ದಾನೆ. ಆ ಬೇಡರ ಪದ ಇವತ್ತು ಇಡೀ ನಮ್ಮ ಸಮೂಹಕ್ಕೆ ಹರಡಿದೆ" ಹಾಗೆ ಅವರು ಆ ಸಂದರ್ಭದಲ್ಲಿ ಬೇಡರ ಮೂಲವನ್ನು ಹೇಳುತ್ತಾ "ಬೇಡರ ಮೂಲ ಪಶ್ಚಿಮ ದಿಕ್ಕು ಕ್ರೌಂಚ ಕಾಡು ಬೇಡರ ಮೂಲಸ್ಥಳ" ಎಂದರು. ಬೇಡ ಪದನಿಷ್ಪತ್ತಿಯ ವಿಚಾರದಲ್ಲಿ ಶ್ರೀಯುತರ ಅಭಿಪ್ರಾಯ ಸತ್ಯಕ್ಕೆ ಹತ್ತಿರವಿಲ್ಲದುದು. ಆದರೂ ಸ್ವಲ್ಪ ಯೋಚಿಸಬೇಕಾದುದು ಇದ್ದೇ ಇದೆ. ಮೂಲದ ಬಗ್ಗೆ ಅವರು ಹೇಳಿದ ಮಾತು ತುಂಬಾ ಗಂಭೀರವಾಗಿ ಯೋಚಿಸಬೇಕಾದುದು ಎನ್ನುವುದು ಗಮನಾರ್ಹ ಸಂಗತಿ.

'ಬೇಡ' ಪದ ನಿಷ್ಪತ್ತಿಯ ವಿಚಾರದಲ್ಲಿ ಈ ಸಮುದಾಯವನ್ನು ಕುರಿತು ಅಧ್ಯಯನ ನಡೆಸಿರುವ ಡಾ. ಮೀರಾಸಾಬಿಹಳ್ಳಿ ಶಿವಣ್ಣ ಅವರ ಅಭಿಪ್ರಾಯ ಹೀಗಿದೆ : ಗೊಲ್ಲರು–ಬೇಡರು ಮೂಲತಃ ಒಂದೇ ಬುಡಕಟ್ಟಿನ ಜನರಾಗಿದ್ದರು. ಇವರಲ್ಲಿ ಗೊಲ್ಲರು ತುಂಬಾ ಮಡಿವಂತರು. ಗೋಮಾಂಸ ನಿಷೇಧ, ಋತುಸ್ರಾವಕ್ಕೆ ಹೆಣ್ಣುಗಳನ್ನು ದೂರವಿಡುವುದು ಮುಂತಾದ ಪಾವಿತ್ರ್ಯತೆಯ ಮೌಲ್ಯಗಳನ್ನೊತ್ತವರು. ಈ ಮೌಲ್ಯಗಳನ್ನು ಇವರಲ್ಲೇ ಇದ್ದ ಒಂದು ಗುಂಪು ಮುರಿಯಲಾರಂಭಿಸಿತು. ಇದರಿಂದ ರೊಚ್ಚಿಗೆದ್ದ ಗೊಲ್ಲರ ಗುಂಪು ನಿಯಮಪಾಲನೆ ಮಾಡದ ಗುಂಪನ್ನು ಸಮೂಹದಿಂದ ಕಿತ್ತೊಗೆದರು. ಅಂದಿನಿಂದ ಬೇಡರು ಅವರಿಗೆ ಬೇಡವಾದವರು ಆದರು. ಈ ಬೇಡವಾದರೇ ಬೇಡ ಪದಕ್ಕೆ ಮೂಲ. ಬ್ಯಾಡವಾದವರು–ಬ್ಯಾಡರು– ಬೇಡರು ಆಗಿರಲಿಕ್ಕೆ ಸಾಧ್ಯವಿದೆ.

ಮೇಲಿನ ಎರಡು ವಾದಗಳಿಗಿಂತ ಬೇಟೆಗಾರನಿಂದ ಬೇಡ ಪದ ಬಂದಿದೆ ಎಂಬುದೇ ಸತ್ಯಕ್ಕೆ ಹತ್ತಿರವಾದಂತೆ ಕಾಣುತ್ತದೆ. ಬೇಡರಿಗೆ ತಳವಾರ, ವಾಲ್ಮೀಕಿ, ಪಾಳೇಗಾರ, ನಾಯಕ ಎನ್ನುವ ಪದಗಳು ಬಳಕೆಯಾದುದು ಹೇಗೆ? ಇವುಗಳ ಸಂಬಂಧಾಂತರವೇನು? ಎಂಬ ವಿಷಯವನ್ನು ಗಂಭೀರವಾಗಿ ಚಿಂತಿಸಬೇಕಾದ ಅಗತ್ಯವಿದೆ. ತಜ್ಞರು ಹೇಳುವಂತೆ ಬೇಡರು ತಮ್ಮ ಕಾರ್ಯ–ಸಾಹಸಗಳ ಕಾರಣದಿಂದ ಊರಿನ 'ತಳವಾರಿಕೆ' ಮಾಡಲಾರಂಭಿಸಿ 'ತಳವಾರ' ಎನ್ನುವ ಪದವನ್ನು ಪಡೆದಿದ್ದಾರೆ. ಹಾಗೆ 'ವಾಲ್ಮೀಕಿ' ಎನ್ನುವುದು ನಮ್ಮ ಮೂಲವನ್ನು 'ವಾಲ್ಮೀಕಿ ಮಹರ್ಷಿ' ಗಳಿಂದ ಕಂಡುಕೊಳ್ಳುವುದರ ಹಿನ್ನೆಲೆಯಲ್ಲಿ ಬಂದಿದೆ. ಇನ್ನೂ 'ನಾಯಕ' ಎನ್ನುವ ಪದವು ಗೌರವ ಸೂಚಕ ಪದವಾಗಿ ಬಳಸಲಾಗುತ್ತಿದ್ದು, ಈಗ ಜಾತಿಸೂಚಕವಾಗಿ ಬಳಕೆಯಾಗುತ್ತಿದೆ. ಡಾ. ರಂಗರಾಜ ಅವರು ಹೇಳುವಂತೆ "೯ನೇ ಶತಮಾನಕ್ಕಿಂತ ಹಿಂದೆ ನಾಯಕ ಪದವು ಪಾಳೆಪಟ್ಟಿನ ಮುಂದಾಳು, ಶೂರ, ಸೇನಾಪತಿ, ಸೇನಾಮುಖ್ಯಸ್ಥ, ದಳಪತಿ ಎಂಬರ್ಥಗಳು ಮಾತ್ರ ಇವೆಯೇ ಹೊರತು ವ್ಯಕ್ತಿನಾಮಗಳಾಗಿ ದೊರಕುವುದಿಲ್ಲ." ಅಂದರೆ ಬೇಡರಿಗೆ ೯ನೇ ಶತಮಾನಕ್ಕೂ ಹಿಂದಿನಿಂದಲೂ ನಾಯಕ ಎಂಬುದಾಗಿ ಕರೆಯುತ್ತಿರಬಹುದು. ಇತ್ತೀಚಿಗೆ ಹಂಪಿ ವಿಶ್ವವಿದ್ಯಾನಿಲಯ ಪ್ರಕಟಿಸಿದ 'ಕರ್ನಾಟಕ ಚರಿತ್ರೆ' ಭಾಗ ೪

ರಲ್ಲಿ ಕೆ.ಎಸ್. ಶಿವಣ್ಣ ಅವರು 'ವಿಜಯನಗರದ ಕಾಲದಲ್ಲಿ ಅಮರನಾಯಕರ ಆಡಳಿತ' ಎನ್ನುವ ಲೇಖನದೊಳಗೆ ಪಾಳೆಗಾರಿಕೆಯನ್ನು ನಡೆಸಿದ್ದವರು ಹೇಗೆ ನಾಯಕರಾದರು ಎಂಬುದನ್ನು ವಿವರಿಸುತ್ತಾರೆ. ಅವರು ಹೇಳುವಂತೆ ವಿಜಯನಗರದ ಆಡಳಿತಕ್ಕೆ ಸೈನ್ಯ ಮತ್ತು ಆರ್ಥಿಕ ಸಹಾಯಗಳು ಬೇಕಿದ್ದರಿಂದ ಅಂದಿನ ರಾಜರು ಅಧಿಕಾರವನ್ನು ಪಾಳೇಗಾರರಿಗೆ ಮತ್ತು ರೈತರಿಗೆ ಹಂಚುವ ಅಧಿಕಾರ ವಿಕೇಂದ್ರಿಕರಣ ನೀತಿಯನ್ನು ರೂಪಿಸಿಕೊಂಡರು. ಆ ಮೂಲಕ ಪಾಳೇಗಾರರಿಂದ ಸೈನಿಕ ಸಹಾಯವನ್ನು ರೈತರಿಂದ ಧನಸಹಾಯವನ್ನು ಪಡೆಯುವುದು ಇವರ ಮೂಲ ಉದ್ದೇಶವಾಗಿತ್ತು. ಈ ಸಂದರ್ಭದಲ್ಲಿ ಪಾಳೇಗಾರರಾಗಿದ್ದವರಿಗೆ ಅಧಿಕಾರವನ್ನು ಕೊಟ್ಟು (ಸಾಮಂತ ನಾಯಕರಾಗಿಸಿಕೊಂಡರು) ಅವರನ್ನು ನಾಯಕ  ಎಂದು ಕರೆದರು. ಡಾ.ರಂಗರಾಜ ಮತ್ತು ಕೆ.ಎಸ್. ಶಿವಣ್ಣನವರ ಮಾತಗಳ ಆಧಾರದ ಮೇಲೆ ೧೫-೧೬ನೇ ಶತಮಾನದವರೆಗೂ ನಾಯಕ ಪದವು ಸೇನಾಪತಿ, ಮುಖಂಡ ಎನ್ನುವ ಅರ್ಥದೊಳಗೆ ಬಳಕೆಯಾಗಿ, ತದನಂತರದ ಕಾಲಕ್ಕೆ ಜಾತಿಸೂಚಕ ಪದವಾಗಿದೆ ಎಂದು ಊಹಿಸಬಹುದಾಗಿದೆ.  ಮತ್ತೊಂದು ಅಂಶವೇನೆಂದರೆ ಬೇಡರಿಗೆ ನಾಯಕ ಪದ ಅನ್ವಯವಾಗಿರುವುದು ಮಾತ್ರ ವಿಜಯನಗರದ ಆಳ್ವಿಕೆಯ ಕಾಲಕ್ಕೆ ಇರಬಹುದು. ಮೇಲಿನ ಮಾತುಗಳ ಆಧಾರದ ಮೇಲೆ ಬೇಡರು ನಾಯಕರಾದ ಪರಿಯನ್ನು ಹೀಗೆ ಸಮೀಕರಿಸಿ ಹೇಳಬಹುದೇನೋ? ಕ್ಷತ್ರೀಯ -ಬೇಡ-ತಳವಾರ-ಪಾಳೇಗಾರ- ನಾಯಕ ಈ ಬೆಳವಣಿಗೆ ಬರೀ ಪದ ಬದಲಾವಣೆ, ಬೆಳವಣಿಗೆಯಲ್ಲ. ಬದಲಿಗೆ ಸಾಮಾಜಿಕ ಸ್ಥಾನಮಾನಗಳ ಬೆಳವಣಿಗೆಯೂ ಕೂಡ. ಕ್ಷತ್ರೀಯರಾದವರು ಹಲವು ಕಾರಣಗಳಿಂದಾಗಿ ಕಾಡುವಾಸಿಗಳಾಗಿ ಬೇಡರಾದವರು ತಮ್ಮ ಶಕ್ತಿ, ಶೌರ್ಯ, ಚಾತುರ್ಯಗಳಿಂದ ಊರಿನ ತಳವಾರಿಕೆಯನ್ನು ಪಡೆದಿರಬಹುದು.    ತಳವಾರಿಕೆ ವೃತ್ತಿಯಲ್ಲಿ ವಿಶಿಷ್ಟವಾಗಿ ಬೆಳೆದು ತಮ್ಮಲ್ಲೇ ಪಾಳೇಪಟ್ಟುಗಳನ್ನು ಕಟ್ಟಿಕೊಂಡು ಆಳ್ವಿಕೆ ನಡೆಸಲಾರಂಭಿಸಿರಬಹುದು. ಪಾಳೇಗಾರಿಕೆಯನ್ನು ನಡೆಸಿದ್ದ ಈ ಜನರಿಗೆ ವಿಜಯನಗರ ರಾಜರಿಂದ ಹೆಚ್ಚಿನ ಅಧಿಕಾರ ಪ್ರಾಪ್ತವಾಗಿ ನಾಯಕರೆನಿಸಿಕೊಂಡಿರಬಹುದು. ಈ ನಾಯಕ ಸ್ಥಾನಮಾನಗಳು ಕೆಲವು ಪಾಳೇಪಟ್ಟಿನ ಪಾಳೇಗಾರರಿಗೆ ಲಭಿಸಿದ್ದರಿಂದ ಇಂದಿಗೂ ಕೂಡ ಕೆಲವರು ನಾಯಕರೆನಿಸಿಕೊಂಡರೆ ಇನ್ನೂ ಕೆಲವರು ಬೇಡರೆಂದಷ್ಟೇ ಕರೆಯಿಸಿಕೊಳ್ಳುತ್ತಾರೆ. ಈ ಬಗ್ಗೆ ಇನ್ನಷ್ಟು ಆಳವಾದ ಸಂಶೋಧನೆಯ ಅಗತ್ಯವಿದೆ.

ಬೇಡ-ನಾಯಕರಾದ ಪರಿಯನ್ನು ಪ್ರಮೇಯಾತ್ಮಕ ಮಾತುಗಳಿಂದ ತಿಳಿದಂತಾಯಿತು. ಇನ್ನೂ ಈ ಪದಗಳ ಹಿಂದೆ ಬಳಕೆಯಾಗುವ 'ಮ್ಯಾಸ' ಪದದ ಮೂಲ ನಿಷ್ಪತ್ತಿ ಏನು? ಮ್ಯಾಸ ಪದದ ಮೂಲಷ್ಪತ್ತಿ ತುಂಬಾ ನಿಗೂಢ ಹಾಗೂ ಗೊಂದಲವಾಗಿಬಿಟ್ಟಿದೆ. ಬೇಡರ (ನಾಯಕರ) ಬುಡಕಟ್ಟನ್ನು ಕುರಿತು ಅಧ್ಯಯನ ಮಾಡಿದ ಬಹುತ್ತೇಕ ವಿದ್ವಾಂಸರು ಒಂದಲ್ಲಾ ಒಂದು ರೀತಿಯಾಗಿ ಮ್ಯಾಸ ಪದನಿಷ್ಪತ್ತಿಯ ಬಗೆಗೆ ಚರ್ಚಿಸಿದ್ದಾರೆ. ಮೊದಲು ಆ ಚರ್ಚೆಗಳ ಮುಖ್ಯಾಂಶಗಳನ್ನು ಪಟ್ಟಿ ಮಾಡಿಕೊಳ್ಳಬಹುದು.

೧. ಮೇಯಿಸುವವರು ಪದದಿಂದ ಮ್ಯಾಸ ಪದದ ನಿಷ್ಪತ್ತಿಯಾಗಿದೆ. ದ್ರಾವಿಡ ಮೂಲಕ್ಕೆ ಸೇರಿದ ಬೇಡರು ಮೂಲತಃ ಪಶುಪಾಲಕರಲ್ಲದಿದ್ದರೂ ಕೆಲವು ಸಮಯಗಳಲ್ಲಿ ಕೃಷಿ ಮತ್ತು ಪಶುಪಾಲನೆಯನ್ನು ಅನುಸರಿಸಿದ ಸಮುದಾಯ. ಪಶುಪಾಲನೆಯಂತಹ ಕ್ರಿಯೆಯೊಳಗೆ ಮೇಯಿಸುವ ಕ್ರಿಯೆ ತುಂಬಾ ಮುಖ್ಯ. ಈ ಮೇಯಿಸುವ ಕಾರ್ಯ ಮಾಡುವವರು ಮೇಯಿಸುವವರು (ಉಪನ್ಯಾಸ ನೀಡುವವರು ಉಪನ್ಯಾಸಕರು ಆದ್ದಂತೆ) ಆಗಿದ್ದಾರೆ. ಈ ಮೇಯಿಸುವವರು 'ಮ್ಯಾಸ' ಪದಕ್ಕೆ ಮೂಲ ಎನ್ನುತ್ತಾರೆ ಎಂ.ಜಿ.ಈಶ್ವರಪ್ಪ. ಈ ಮೇಯಿಸುವ ಪದದಿಂದ 'ಮ್ಯಾಸ' ಪದನಿಷ್ಪತ್ತಿಯಾಗಿದೆ ಎಂಬುದಾಗಿ ಮೀರಾಸಾಬಿಹಳ್ಳಿ ಶಿವಣ್ಣ ಅವರು ತಮ್ಮ ಆರಂಭಿಕ ಅಧ್ಯಯನಗಳಿಂದಲೂ ಪ್ರತಿಪಾದಿಸಿರುವುದನ್ನು ಇಲ್ಲಿ ವಿಶೇಷವಾಗಿ ಸ್ಮರಿಸಬಹುದು.

೨. ಮೇಲಿನ ವಾದವನ್ನು ತಿರಸ್ಕರಿಸಿ, ಮ್ಯಾಸ ಪದಕ್ಕೆ ಸಂಸ್ಕೃತದ 'ಮೀವರ' ತಮಿಳಿನ 'ಮೀಚರನ್' ಕನ್ನಡದ 'ಮೀಸರು' ಪದಗಳು ಮೂಲ. ಮೀಸರು ಎಂದರೆ 'ಶೂರರು' ಪರಾಕ್ರಮಿಗಳು. ಕಾಡಿನಲ್ಲಿ ಗೆಡ್ಡೆಗೆಣಸು, ಮಾಂಸದಂತಹ ಸತ್ವಯುತ ಆಹಾರ ಸೇವಿಸಿ ದೇಹದ ಶಕ್ತಿಯನ್ನು ವೃದ್ಧಿಸಿಕೊಂಡ ಜನ ಬೇಡರು. ಆದಕಾರಣ ಮೀಸರಬೇಡರು – ಮ್ಯಾಸಬೇಡರು ಆಗಿರಲೂ ಸಾಧ್ಯ ಎನ್ನುತ್ತಾರೆ ಕೃಷ್ಣಮೂರ್ತಿ ಹನೂರು.

೩. ವಕ್ತೃಗಳ ಮಾಹಿತಿಯನ್ನಾಧರಿಸಿ ಮ್ಯಾಸ ಎನ್ನುವುದು ನ್ಯಾಸ ಎಂಬ ಪದದಿಂದ ಬಂದಿದೆ. 'ನ್ಯಾಸ' ಎಂದರೆ ಜ್ಞಾನ ಎಂದರ್ಥ. ಅತಿಜ್ಞಾನವುಳ್ಳ ಜನರು ಬೇಡವಾದ್ದರಿಂದ ನ್ಯಾಸರು– ಮ್ಯಾಸರು– ಮ್ಯಾಸ ಆಗಿದೆ ಎನ್ನುತ್ತಾರೆ ಕರಿಶೆಟ್ಟಿ ರುದ್ರಪ್ಪ.

೪. ವಿಜಯನಗರ ಸಂಸ್ಥಾನದ ಸಾಮಂತರಾಜರಂತಿದ್ದ ನಾಯಕರ ಪಾಳೇಪಟ್ಟುಗಳಲ್ಲಿ ತಮ್ಮ ದೊರೆಯ ರಕ್ಷಣೆಗೆ ಸದಾ ತಯಾರಾಗಿರಬೇಕಿದ್ದ ಮೀಸಲು ಸೈನಿಕ ಪಡೆಗಳು ಇದ್ದವು (ಈಗಿನ ರಿಸರ್ವ್ ಪೋಲೀಸ್ ಇದ್ದಹಾಗೆ) ಈ ಮೀಸಲು ಪದದಿಂದ ಮ್ಯಾಸ ಪದ ಬಂದಿರಬಹುದೆಂದು ಊಹಿಸಿದ್ದಾರೆ. ಡಾ. ರಂಗರಾಜ.

೫. ಕೆಲವು ವಕ್ತೃಗಳು ತಮ್ಮ ಮೂಲಗಳನ್ನು 'ವ್ಯಾಸ' ನಲ್ಲಿ ಗುರುತಿಸಿಕೊಂಡು ನಮ್ಮದು ವ್ಯಾಸಕುಲ ಎಂದು ಹೇಳುತ್ತಾರೆ. ಈ ವ್ಯಾಸ ಪದವೇ ಮ್ಯಾಸ ಪದಕ್ಕೆ ಮೂಲ ಎಂದು ಕೆಲವು ವಿದ್ವಾಂಸರು ಊಹಿಸಿದ್ದಾರೆ.

೬. ಮಾಂಸ ಪ್ರಿಯರಾದ ಬೇಡರು ಹಾಗತಾನೆ ಈದ ಹಸುವಿನ ಮಾಂಸ (ಸತ್ತೆ) ಅನ್ನು ತಿಂದುದ್ದರ ಪರಿಣಾಮವಾಗಿ ಮಾಸುಬೇಡ–ಮಾಸಬೇಡ– ಮ್ಯಾಸಬೇಡ ಎಂಬ ಊಹೆ ಇದೆ. (ಡಾ. ಮೀರಾಸಾಬಿಹಳ್ಳಿ ಶಿವಣ್ಣ–೧೯೯೯, ದುರುಗ ಜಾನಪದ).

ಈ ಎಲ್ಲಾ ಊಹೆಗಳ ಮಧ್ಯೆ 'ಮ್ಯಾಸ' ಪದದ ನಿಷ್ಪತ್ತಿ ವಿಚಾರ ಗೊಂದಲಮಯವಾಗಿರುವುದಂತೂ ಸತ್ಯ. ಮೇಲಿನ ವಾದ ಸರಣಿಯಲ್ಲಿ ಕರಿಶೆಟ್ಟಿ ರುದ್ರಪ್ಪನವರ ವಾದವನ್ನು (ವಕ್ತೃ ಆಧಾರ) ಹೊರತುಪಡಿಸಿ ಉಳಿದಂತೆ ಎಲ್ಲಾ ವಾದಗಳು ಸತ್ಯಕ್ಕೆ ಹತ್ತಿರವಾಗಿದೆ.

(ಅರ್ಥಗಳಲ್ಲಿ). ಮ್ಯಾಸಬೇಡರು ಮೇಯಿಸುವವರು, ಮೀಸಲುಪಡೆ, ಪರಾಕ್ರಮಿ–ಶೂರ–ಧೀರರು, ವ್ಯಾಸಕುಲದವರು ಆಗಿದ್ದಂತೂ ನಿಜ. ಆದರೆ ಮಹಾನ್ ಜ್ಞಾನಿಗಳು ಆಗಿದ್ದರು ಎಂಬುದನ್ನು ಒಪ್ಪಿಕೊಳ್ಳಲು ಕೆಲವು ಸಮಸ್ಯೆಗಳಿವೆ. ಅರ್ಥಗಳಲ್ಲಿ ಸತ್ಯಕ್ಕೆ ಹತ್ತಿರವಾಗಿರುವ ಈ ವಾದಗಳಲ್ಲಿ ಪದ ಬೆಳವಣಿಗೆಯ ಇತಿಹಾಸದ ದೃಷ್ಟಿಯಿಂದ ಯಾವುದು ಸತ್ಯ ಎನ್ನುವ ಅಂಶ ಇಂದು ನಮ್ಮ ಅಧ್ಯಯನಕಾರರ, ವಿದ್ವಾಂಸರ, ಸಂಶೋಧಕರ ಮುಂದಿನ ಬಹುದೊಡ್ಡ ಸವಾಲಾಗಿದೆ. ಈ ಸವಾಲನ್ನು ಭಾಷಾವಿಜ್ಞಾನ ಪಂಡಿತರ ಸಹಾಯ ಪಡೆದು ಬಗೆಹರಿಸಿಕೊಳ್ಳಲು ಸಾಧ್ಯವಿದೆ. ಈ ದಿಕ್ಕಿನಲ್ಲಿ ನಾವೆಲ್ಲ ಪ್ರಯತ್ನಿಸಬೇಕಾಗಿದೆ.

## ಮ್ಯಾಸ ನಾಯಕರ ಕುರಿತ ಅಧ್ಯಯನಗಳ ಸಮೀಕ್ಷೆ

ಕರ್ನಾಟಕದಲ್ಲಿ ನೆಲೆನಿಂತಿರುವ ಬುಡಕಟ್ಟುಗಳಲ್ಲಿ ಮ್ಯಾಸಬೇಡರ ಬುಡಕಟ್ಟು ಹಲವಾರು ವಿಷಯಗಳಲ್ಲಿ ಗಮನಾರ್ಹವಾದುದು. ಚಿತ್ರದುರ್ಗ, ದಾವಣಗೆರೆ, ಬಳ್ಳಾರಿ ಜಿಲ್ಲೆಗಳ ಭೂಭಾಗದಲ್ಲಿ ನೆಲೆನಿಂತಿರುವ ಈ ಮ್ಯಾಸನಾಯಕರು ವಲಸೆಗಾರ ಪಶುಪಾಲಕರು. ವಿಜಯನಗರ ಸಾಮ್ರಾಜ್ಯದ ಪತನದ ನಂತರವೂ ಇವರು ಪಶುಪಾಲನೆ ಮಾಡುತ್ತಾ ವಲಸೆಗಾರರಾಗಿದ್ದರು ಎಂಬುದಕ್ಕೆ ಅನೇಕ ಅಧಾರಗಳಿವೆ. ಹಂಪಿ ಪರಿಸರದಿಂದ ಪಶುಪಾಲನೆಗೆ ಅತ್ಯಂತ ಸೂಕ್ತವೆನಿಸಿದ ಚಿತ್ರದುರ್ಗ ಸುತ್ತಲಿನ ಪರಿಸರಕ್ಕೆ ಬಂದು ಇಲ್ಲಿ ಬಹಳ ದಿನಗಳಾದ ನಂತರ ಒಂದೇ ಕಡೆ ನೆಲೆನಿಲ್ಲುವ ಮೂಲಕ ಕೃಷಿವೃತ್ತಿಯನ್ನು  ಅಧಿಕೃತವಾಗಿ ಪ್ರಾರಂಭಿಸಿದಂತೆ ಕಾಣುತ್ತದೆ. ಒಟ್ಟಾರೆಯಾಗಿ ಈ ಮ್ಯಾಸನಾಯಕ ಬುಡಕಟ್ಟು ತನ್ನ ಮೂಲವನ್ನು ಶ್ರೀಶೈಲದ ಮಲೆಗಳಿಂದ ಗುರುತಿಸಿದರೂ ಈಗ ನಮಗೆ ಆಕರಗಳು ಸಿಗುವುದು ವಿಜಯನಗರ ಕಾಲದಿಂದ ಈಚೆಗೆ ಮಾತ್ರ. ಅದೂ ಈಗಿರುವ ಮಧ್ಯ ಕರ್ನಾಟಕದ ಭಾಗದಲ್ಲಿ ಈ ಸಮುದಾಯದ ವಿವರಗಳಿಗೆ ಗಟ್ಟಿ ಆಧಾರಗಳು ದೊರೆಯುತ್ತವೆ. ಮ್ಯಾಸನಾಯಕರ ಮೌಖಿಕ ಕಥನಗಳಲ್ಲಿ ಪ್ರಚಲಿತವಿರುವ ಕುಲಚರಿತೆಗಳಲ್ಲಿಯೂ ಕೂಡ.  ಇವರ ಪರಂಪರೆ ಕಂಡು ಬರುವುದು ತುಂಬಾ ಈಚೆಗೆ. ಇಂಥ ಪರಂಪರೆಯ ಈ ಬುಡಕಟ್ಟು ತನ್ನ ಬದುಕಿನ ವಿಶಿಷ್ಟ ಆಚಾರ

ವಿಚಾರಗಳಿಂದ ಹೊರಗಿನ ಸಮುದಾಯದ ಜನರನ್ನು ಬಹಳ ಆಕರ್ಷಿಸಿದೆ. ಹೊರಗಿಂದ ನಿಂತು ನೋಡುವ ಜನರಿಗೆ ಈ ಸಮುದಾಯ ಕೌತುಕದ ಸಂಗತಿಯಾಗುತ್ತದೆ. ಮಾನವಶಾಸ್ತ್ರ, ಜಾನಪದ ಮೊದಲಾದ ಅಧ್ಯಯನ ಶಿಸ್ತುಗಳಿಗಂತೂ ಕಡ್ಲೆ ಬೆಲ್ಲ ಸಿಕ್ಕಂತೆ. ಹಾಗಾಗಿ ಈ ಸಮುದಾಯವನ್ನು ಕುರಿತು ಇಲ್ಲಿಯವರೆಗೂ ನಡೆದ ಅಧ್ಯಯನಗಳು ಸಾಕಷ್ಟು. ಈ ಎಲ್ಲಾ ಅಧ್ಯಯನಗಳನ್ನು ಒಂದು ನೆಲೆಯಲ್ಲಿ ಪರಿಶೀಲಿಸುವ ಅಗತ್ಯತೆ ಇದೆ. ಆದ್ದರಿಂದ ಪ್ರಸ್ತುತ ಲೇಖನದಲ್ಲಿ ಇಲ್ಲಿಯವರೆಗೆ ಮ್ಯಾಸನಾಯಕರ ಕುರಿತಂತೆ ಬಂದಿರುವ ಅಧ್ಯಯನಗಳನ್ನು ವಿಮರ್ಶಾತ್ಮಕವಾಗಿ ಪರಿಶೀಲಿಸುವ ಪ್ರಯತ್ನ ಮಾಡಲಾಗುವುದು.

ಮ್ಯಾಸನಾಯಕರ ಕುರಿತ ಅಧ್ಯಯನಗಳ ಸಮೀಕ್ಷೆಗೆ ಮೊದಲು ಇಲ್ಲಿ ಎದುರಾಗುವ ಕೆಲವು ಪರಿಕಲ್ಪನಾತ್ಮಕ ತೊಡಕುಗಳನ್ನು ಪರಿಶಿಲಿಸಿ ಮುಂದೆ ಹೋಗುವುದು ಉತ್ತಮ. ಮೊದಲು ಪರಿಶೀಲಿಸ ಬೇಕಾದುದು ಚಿತ್ರದುರ್ಗ ಭಾಗದಲ್ಲಿ ನೆಲೆನಿಂತಿರುವ ಮ್ಯಾಸನಾಯಕ ಸಮುದಾಯವನ್ನು ಮ್ಯಾಸಬೇಡರು ಎಂದು ಕರೆದು ಅಧ್ಯಯನ ಮಾಡಿರುವವರೇ ಹೆಚ್ಚು. ಆದರೆ ಸಮುದಾಯದ ಒಳಗೆ ಅವರು ಮ್ಯಾಸನಾಯಕರು ಎಂದು ಮಾತ್ರ ಕರೆದುಕೊಳ್ಳುತ್ತಾರೆ.

ಮ್ಯಾಸನಾಯಕರ ಬಗ್ಗೆ ಅಧ್ಯಯನ ಆರಂಭವಾಗಿದ್ದು ೨೦ ನೇ ಶತಮಾನದ ಪ್ರಾರಂಭದಲ್ಲಿ. ಅದರಲ್ಲಿ ಸಾಧ್ಯವಾದಷ್ಟು ಎಲ್ಲಾ ಅಧ್ಯಯನಗಳನ್ನು ಈ ಮುಂದಿನಂತೆ ಪರಿಚಯಿಸಿಕೊಳ್ಳಬಹುದು.

1. ಕ್ರಿ.ಶ.೧೯೦೦ ರಲ್ಲಿ ಎಡ್ಗರ್ ಥರ್‌ಸ್ಟನ್ ಮತ್ತು ಕೆ.ರಂಗಾಚಾರಿ ಅವರ 'ಕ್ಯಾಸ್ಟ್ ಅಂಡ್ ಟ್ರೈಬ್ಸ್ ಆಫ್ ಸೌತ್ ಇಂಡಿಯನ್' ಕೃತಿಯಲ್ಲಿನ ಲೇಖನವೇ ಬೇಡರ ಕುರಿತು ಬಂದ ಮೊದಲ ಲೇಖನವೆನ್ನಬಹುದು. ಒಂದು ಮತ್ತು ಎರಡನೇ ಸಂಪುಟಗಳಲ್ಲಿ ಬೇಡರ ಬಗ್ಗೆ ಹಲವಾರು ಸಂಗತಿಗಳನ್ನು ದಾಖಲಿಸಿದ್ದಾರೆ. ಅದರಲ್ಲಿ ಬೇಡರು ಅಥವಾ ಬೋಯಿಗಳು ಒಂದೇ ಜಾತಿಯವರು ಹಾಗೂ ಇವರು ಮೂಲತಃ ವೈಷ್ಣವರು ಎಂಬಂಥ ಸತ್ಯಕ್ಕೆ ದೂರವಾದ ಸಂಗತಿಗಳನ್ನು ಪ್ರಸ್ತಾಪಿಸಿದ್ದಾರೆ.
2. ಮ್ಯಾಸ ನಾಯಕರ ಕುರಿತಂತೆ ಹೆಚ್ಚಿನ ಮಾಹಿತಿಯನ್ನೊಳಗೊಂಡ ಬರೆಹ ಸಿಗುವುದು ೧೯೨೮ ರಲ್ಲಿ ಮೈಸೂರು ವಿಶ್ವವಿದ್ಯಾನಿಲಯ ದಿಂದ ಪ್ರಕಟವಾದ ಹೆಚ್.ವಿ.ನಂಜುಂಡಯ್ಯ, ಎಲ್.ಕೆ. ಅನಂತಕೃಷ್ಣ ಅಯ್ಯರ್ ಅವರ "ಮೈಸೂರ್ ಕ್ಯಾಸ್ಟ್ಸ್ ಆಂಡ್ ಟ್ರೈಬ್ಸ್" ಗ್ರಂಥದಲ್ಲಿ. ಈ ಕೃತಿಯಲ್ಲಿ ೩೪ ಪುಟಗಳ ದೀರ್ಘವಾದ ಲೇಖನದಲ್ಲಿ ಬೇಡರ ಮೂಲ, ಪ್ರಸರಣ ಮತ್ತು ಸಂಸ್ಕೃತಿಯ ವಿವಿಧ ಆಯಾಮಗಳನ್ನು ವಿವರಸಿಲಾಗಿದೆ.
3. ೧೯೩೨ ರಲ್ಲೇ ಬರೆದು ೧೯೭೧ ರಲ್ಲಿ ಪ್ರಕಟಿಸಿದ "ನುಂಕಿಮಲೆ ಪರಮಾರ್ಥ" ಮೊಳಕಾಲ್ಮುರು ಪ್ರದೇಶದ ಪ್ರಖ್ಯಾತ ಸಾಂಸ್ಕೃತಿಕ ನೆಲೆ ನುಂಕಿಮಲೆಬೆಟ್ಟದ ಬಗ್ಗೆ ಮಾಹಿತಿ ನೀಡುವಾಗ ಅದನ್ನು ನಂಬಿ ಪೂಜಿಸುತ್ತಿರುವ ಮ್ಯಾಸನಾಯಕರ ಬಗ್ಗೆ ಕೆಲವು ಮಾಹಿತಿಗಳನ್ನು ನೀಡಲಾಗಿದೆ.
4. ಹೆಚ್.ವಿ. ವೀರನಾಯಕರ ಕೃತಿ "ಕ್ಷಾತ್ರಾಂಶ ಪ್ರಬೋಧ" (೧೯೪೮) ಕೃತಿಯು ಬೇಡ ಜನಾಂಗದ ಪೌರಾಣಿಕ, ಐತಿಹಾಸಿಕ ಮೂಲದ ಬಗ್ಗೆ ಮಾಹಿತಿ ನೀಡುತ್ತದೆ.

5. ಈಶ್ವರಪ್ಪ ಎಂ.ಜಿ. ಅವರು "ಮ್ಯಾಸಬೇಡರು" ಎಂಬ ತಮ್ಮ ಕಿರು ಹೊತ್ತಗೆಯನ್ನು ಐಬಿಎಚ್ ಪ್ರಕಾಶನದಿಂದ ಪ್ರಕಟಿಸಿದ್ದು, ಅದರಲ್ಲಿ ನಾಯಕರ ಉಪಪಂಗಡಗಳ ಬಗ್ಗೆ ತಿಳಿಸಿ, ನಂತರ ಮ್ಯಾಸನಾಯಕ ಎಂಬ ಹೆಸರು ಬರಲು ಕಾರಣ, ಅದಕ್ಕೆ ಸಂಬಂಧಿಸಿದ ಕಥೆಗಳನ್ನು ನೀಡಿದ್ದಾರೆ. ಮ್ಯಾಸಬೇಡರ ಮೂಲ ವೃತ್ತಿ ಪಶುಪಾಲನೆಯಾಗಿತ್ತು ಎಂಬುದು ಇವರ ಅಭಿಪ್ರಾಯ. ನಾಯಕರಲ್ಲಿ ತಳವಾರ, ಊರನಾಯಕ, ಮ್ಯಾಸನಾಯಕ ಎಂಬ ಪಂಗಡಗಳಿರುವಂತೆ ಮ್ಯಾಸಬೇಡರಲ್ಲಿಯೂ ಊರಮ್ಯಾಸ, ಅಡವಿಮ್ಯಾಸ, ಕಳ್ಳಿಮ್ಯಾಸ ಮತ್ತು ಮ್ಯಾಸ ಎಂಬ ನಾಲ್ಕು ಭೇದಗಳನ್ನು ಗುರುತಿಸಿದ್ದಾರೆ. ಇಲ್ಲಿ ಮ್ಯಾಸಬೇಡರ ವಸತಿ, ಸಮಾಜ, ಸಂಪ್ರದಾಯಗಳ ಬಗ್ಗೆ ಮಾತ್ರ ಸಂಕ್ಷಿಪ್ತ ಮಾಹಿತಿ ನೀಡಿರುವುದನ್ನು ಗಮನಿಸಬಹುದು.
6. ಚಿತ್ರದುರ್ಗ ಜಿಲ್ಲೆ ಚಳ್ಳಕೆರೆಯ ಅರ್.ರಾಜಣ್ಣನವರ ನಾಯಕ ಜನಾಂಗದ ಇತಿಹಾಸ (೧೯೮೩) ವು ಬೇಡರ ಕುರಿತು ಉಪಯುಕ್ತ ಮಾಹಿತಿಯನ್ನು ಒದಗಿಸುತ್ತದೆ. ಬೇಡರ ಮೂಲವನ್ನು ಹಾಗೂ ಮೂಲ ಪುರುಷರ, ಐತಿಹಾಸಿಕ ಪುರುಷರ ಕತೆಗಳನ್ನು ಹೇಳುತ್ತದೆ. ಹಾಗೆಯೇ ಕೃತಿಯ ಆರಂಭದಲ್ಲಿ ನಾಯಕರನ್ನು ಯಾವ ರೀತಿ ಗುರುತಿಸಬೇಕು? ಎಂದು ವಿವರಿಸುವಾಗ ಬೇಡರ ದೈಹಿಕ ಲಕ್ಷಣ, ಅವರ ಉಡುಗೆ-ತೊಡುಗೆ, ಆಚಾರ-ವಿಚಾರ, ಧಾರ್ಮಿಕತೆ ಇತ್ಯಾದಿಗಳನ್ನು ಸ್ಥೂಲವಾಗಿ ಪರಿಚಯಿಸುತ್ತಾರೆ.
7. ಢಂಗ ಡಿ.ಬಿ. ಅವರ "ಜನಾಂಗ ಪರಿಚಯ" (೧೯೮೮) ಕೃತಿಯಲ್ಲಿ ಒಟ್ಟು ಎಂಟು ಜನಾಂಗಗಳ ಪರಿಚಯವನ್ನು ಮಾಡಿಕೊಡಲಾಗಿದೆ. ಇದರಲ್ಲಿ ಮೊದಲ ಲೇಖನವೇ ನಾಯಕ ಜನಾಂಗಕ್ಕೆ ಸಂಬಂಧ ಪಟ್ಟಿದೆ. ನಾಯಕ ಜನಾಂಗವು ವೇದಗಳ ಕಾಲದಿಂದ ಅಸ್ತಿತ್ವದಲ್ಲಿದೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.
8. ಚಿತ್ರಲಿಂಗಯ್ಯಎಂ.ವಿ. ಅವರು ತಮ್ಮ 'ನಾಯಕ ಜನಾಂಗ' ಕೃತಿಯಲ್ಲಿ ನಾಯಕ ಎಂಬ ಪದ ೯ನೆಯ ಶತಮಾನದಿಂದ ಕಂಡುಬರುತ್ತದೆ ಎಂದು ಹೇಳಿರುವರು. ಹಾಗೆಯೇ ಬೇಡ, ನಾಯಕ್, ತಳವಾರ, ವಾಲ್ಮೀಕಿ, ವಾಲ್ಮೀಕಿ ಮಕ್ಕಳು, ಕನ್ನಯ್ಯನ ಮಕ್ಕಳು ಇತ್ಯಾದಿ ಹೆಸರುಗಳ ಹಿಂದಿನ ಕಥೆಗಳನ್ನು ಕೊಟ್ಟಿದ್ದಾರೆ. ಇಂಥ ಕಾರಣಕ್ಕಾಗಿ ಈ ಹೆಸರು ಬಂದಿತು ಎಂದು ವಿವರಿಸಿದ್ದಾರೆ. ಸಮುದಾಯದ ಆಳವಾದ, ವಿವರಣಾತ್ಮಕವಾದ, ವಿಶ್ಲೇಷಣಾತ್ಮಕ ಅಧ್ಯಯನ ಮಾಡಿರುವುದು ಈ ಕೃತಿಯ ಹೆಗ್ಗಳಿಕೆಯಾಗಿದೆ.
9. ಕೃಷ್ಣಮೂರ್ತಿ ಹನೂರು ಅವರು ಮ್ಯಾಸನಾಯಕರ ಮೇಲೆ ಮೊದಲ ಬಾರಿಗೆ ಪಿಎಚ್.ಡಿ ಸಂಶೋಧನಾ ಅಧ್ಯಯನ ನಡೆಸಿದವರು. ಡಾ. ಚಿದಾನಂದಮೂರ್ತಿ ಅವರ ಮಾರ್ಗದರ್ಶನದಲ್ಲಿ ಮ್ಯಾಸಬೇಡರ ಸಂಸ್ಕೃತಿ ಕುರಿತು ಸಿದ್ಧಪಡಿಸಿದ ಮಹಾಪ್ರಬಂಧಕ್ಕೆ ಬೆಂಗಳೂರು ವಿಶ್ವವಿದ್ಯಾಲಯದಿಂದ ಪಿಎಚ್.ಡಿ ಪದವಿ ಪಡೆದಿರುತ್ತಾರೆ. ಇದೇ ಮಹಾಪ್ರಬಂಧ ೧೯೯೩ ರಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿಯಲ್ಲಿ ಅಧ್ಯಕ್ಷರಾಗಿದ್ದ ಬರಗೂರು ರಾಮಚಂದ್ರಪ್ಪ ಅವರ ಚಿಂತನೆಯ ಫಲವಾಗಿ ಆರಂಭವಾದ ಉಪಸಂಸ್ಕೃತಿ ಮಾಲೆಯಲ್ಲಿ "ಮ್ಯಾಸಬೇಡರು" ಎಂಬ

ಹೆಸರಿನಲ್ಲಿ ಪ್ರಕಟವಾಗಿದೆ. ಇದು ಚಿತ್ರದುರ್ಗ ಜಿಲ್ಲೆಯನ್ನೇ ಕೇಂದ್ರವಾಗಿಟ್ಟುಕೊಂಡು ಮಾಡಿದ ಅಧ್ಯಯನ. ವ್ಯಾಪಕ ಕ್ಷೇತ್ರಕಾರ್ಯದ ಮೂಲಕ ಪಡೆದ ಮಾಹಿತಿಯನ್ನಾಧರಿಸಿ ರಚನೆಯಾದ ಈ ಕೃತಿ ಬೇಡರ ಕುರಿತು ಈವರೆಗೂ ಬಂದ ಕೃತಿಗಳಿಗಿಂತ ಹೆಚ್ಚಿನ ವಿವರಣಾತ್ಮಕ ಮಾಹಿತಿಯನ್ನು ಇದು ಒಳಗೊಂಡಿದೆ. ಮ್ಯಾಸ ಎಂಬ ಪದದ ನಿಷ್ಪತ್ತಿ, ಜನಾಂಗದ ಹಿನ್ನೆಲೆ, ಜೀವನ ವಿಧಾನ, ಆಚರಣೆ, ಸಂಸ್ಕಾರ, ಕಲೆ, ಇತ್ಯಾದಿ ವಿಷಯಗಳನ್ನು ನೀಡಲಾಗಿದೆ. ಮ್ಯಾಸಬೇಡರ ನ್ಯಾಯತೀರ್ಮಾನಗಳ ಬಗ್ಗೆ ಹೇಳುತ್ತಾ ಮ್ಯಾಸಬೇಡರ ಹನ್ನೆರಡು ಕಟ್ಟೆಮನೆಗಳನ್ನು ಗುರುತಿಸಿರುವುದನ್ನು ಈ ಕೃತಿಯಲ್ಲಿ ಕಾಣಬಹುದು. ಮ್ಯಾಸಬೇಡರ ಬಗ್ಗೆ ಬಂದಿರುವ ಕೃತಿಗಳಲ್ಲೆ ಈ ಕೃತಿಯು ಮೌಲ್ಯಯುತವಾದುದಾಗಿದೆ. ಇದಲ್ಲದೆ ಹನೂರು ಅವರು ಮ್ಯಾಸನಾಯಕರ ಮೌಖಿಕ ಸಾಹಿತ್ಯವನ್ನು ಸಂಗ್ರಹಿಸಿ ಪ್ರಕಟಿಸುವ ಪ್ರಯತ್ನಮಾಡಿದ್ದಾರೆ. ಅದರಲ್ಲಿ ಮುಖ್ಯವಾಗಿ ಗಮನಿಸಬೇಕಾದುದು "ಜನಪದ ವೀರಗೀತೆಗಳು". ಈ ಸಂಕಲನದಲ್ಲಿ ಮ್ಯಾಸನಾಯಕರ ಗುಂಪಿನಲ್ಲಿ ಪ್ರಚಲಿತವಿರುವ ಕೆಲವಾರು ಹಾಡುಗಳನ್ನು ಪ್ರಕಟಿಸಿದ್ದಾರೆ. ಹಾಗೆಯೇ ಮ್ಯಾಸ ಬೇಡರ ಬಗ್ಗೆ ಹಲವಾರು ಬಿಡಿ ಲೇಖನಗಳನ್ನು ಬರೆದಿದ್ದಾರೆ.

10. ಈ ಸಮುದಾಯವನ್ನು ಕುರಿತಂತೆ ಪಿಎಚ್.ಡಿ ಅಧ್ಯಯನ ಮಾಡಿದವರಲ್ಲಿ ಎರಡನೆಯವರು ಕರಿಶೆಟ್ಟಿ ರುದ್ರಪ್ಪ. ಇವರು "ಮ್ಯಾಸ ನಾಯಕರು ಒಂದು ಜನಾಂಗಿಕ ಅಧ್ಯಯನ". ಎನ್ನುವ ವಿಷಯಕ್ಕೆ ಸಂಬಂಧಿಸಿದಂತೆ ಮಹಾಪ್ರಬಂಧವನ್ನು ರಚಿಸಿ ಬೆಂಗಳೂರು ವಿಶ್ವವಿದ್ಯಾಲಯದಿಂದ ಪಿಎಚ್.ಡಿ ಪದವಿಯನ್ನು ಪಡೆದಿದ್ದಾರೆ. ಈ ಪ್ರಬಂಧ ಕನ್ನಡ ಸಾಹಿತ್ಯ ಪರಿಷತ್ತಿನಿಂದ ೧೯೯೫ ರಲ್ಲಿ ಮ್ಯಾಸನಾಯಕರು ಎನ್ನುವ ಹೆಸರಲ್ಲಿ ಪ್ರಕಟವಾಗಿದೆ. ಈ ಕೃತಿಯಲ್ಲಿ ನಾಯಕ (ಬೇಡ) ಜನಾಂಗದ ವೈಶಿಷ್ಟ್ಯ, ಕೌಟುಂಬಿಕ ಮತ್ತು ಸಾಮಾಜಿಕ ಜೀವನ, ಧಾರ್ಮಿಕ ಜೀವನ ಮತ್ತು ಆಚರಣೆಗಳು, ರಾಜಕೀಯ, ಸಾಹಿತ್ಯ, ಕ್ರೀಡೆ, ಮತ್ತು ವಾದ್ಯಗಳನ್ನು ಕುರಿತಾದ ಮಾಹಿತಿಗಳು ದೊರೆಯುತ್ತವೆ. ಅಲ್ಲದೆ ವಿಶೇಷವಾಗಿ ಮ್ಯಾಸನಾಯಕ ಜನಾಂಗಕ್ಕೆ ಸಂಬಂಧಿಸಿದ ಪೌರಾಣಿಕ, ಐತಿಹಾಸಿಕ, ಧಾರ್ಮಿಕ ವಿಷಯಗಳನ್ನು ಒಳಗೊಂಡಿದೆ. ಈ ಅಧ್ಯಯನವು ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲ್ಲೂಕು, ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ಮತ್ತು ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ತಾಲ್ಲೂಕುಗಳಲ್ಲಿ ವಾಸವಾಗಿರುವ ಮ್ಯಾಸನಾಯಕರ ಸಂಸ್ಕೃತಿಯ ಅಧ್ಯಯನವಾಗಿದೆ.

11. ಮ್ಯಾಸಬೇಡರ ಬಗ್ಗೆ ವಿಶೇಷ ಅಧ್ಯಯನ ಕೈಗೊಂಡವರಲ್ಲಿ ಮೀರಾಸಾಬಿಹಳ್ಳಿ ಶಿವಣ್ಣ ಒಬ್ಬರು. ಇವರು ಮ್ಯಾಸಬೇಡ ಬುಡಕಟ್ಟಿನ ಕ್ಷೇತ್ರಾಧ್ಯಯನ ಆಧಾರಿಸಿ ಬರೆದ ಸಂಶೋಧನ ಲೇಖನಗಳ ಸಂಗ್ರಹ "ಮ್ಯಾಸ ಮಂಡಲ" ಕೃತಿಯನ್ನು ತಂದಿದ್ದಾರೆ. ಇದರಲ್ಲಿ ನಾಯಕ ಜನಾಂಗ: ಒಂದು ನೋಟ, ಪಶುಪಾಲಕ ಮ್ಯಾಸಬೇಡರು, ನಾಯಕನಹಟ್ಟಿ ಪಾಳೆಗಾರರ ವಂಶಾವಳಿ – ಒಂದು ಮರು ಪರಿಶೀಲನೆ, ನಾಯಕನಹಟ್ಟಿ ಪಾಳೆಯಗಾರರ ಕಾಲದ ನ್ಯಾಯಾಡಳಿತ ಹೀಗೆ ಹಲವಾರು ಲೇಖನಗಳಿವೆ.

12. ಇತ್ತೀಚಿನ ದಿನಗಳಲ್ಲಿ ಮ್ಯಾಸಬೇಡರ ಬಗ್ಗೆ ವಿಶೇಷವಾದ ಸಂಶೋಧನೆ ನಡೆಸುತ್ತಿರುವ ವಿರೂಪಾಕ್ಷಿ ಪೂಜಾರಹಳ್ಳಿಯವರು ಬೇಡ ಸಮುದಾಯವನ್ನು ಹಲವಾರು ಬಗೆಯಲ್ಲಿ ಅಧ್ಯಯನ ಕೈಗೊಂಡಿದ್ದಾರೆ. ಇವರ "ಬೇಟೆ ಮತ್ತು ಬೇಡರು" ಕೃತಿಯಲ್ಲಿ ಬೇಟೆಯನ್ನೆ ಬದುಕಾಗಿಸಿಕೊಂಡ ಬೇಡರ ಕುರಿತ ಅಧ್ಯಯನವಾಗಿದೆ. "ಗಾದರಿ ಪಾಲನಾಯಕ" ಕೃತಿ ಮ್ಯಾಸ ಬೇಡರ ಸಾಂಸ್ಕೃತಿಕ ವೀರ ಗಾದರಿ ಪಾಲನಾಯಕನ ಚರಿತ್ರೆಯುಳ್ಳ ಮಹಾಕಾವ್ಯವಾಗಿದೆ. ಇವರ ಮತ್ತೊಂದು ಕೃತಿ "ಕಾಮಗೇತಿ ವಂಶಜರ ಚರಿತ್ರೆ" ಮ್ಯಾಸಬೇಡರ ಉಪಪಂಗಡವಾದ ಕಾಮಗೇತಿಯ ವಂಶದ ಬಗ್ಗೆ ವಿವರವಾದ ಮಾಹಿತಿಯನ್ನು ನೀಡುತ್ತದೆ. ಈ ಕೃತಿಯಲ್ಲಿ ಬೇಡನಾಯಕರ ಬುಡಕಟ್ಟಿನ ಸಾಂಸ್ಕೃತಿಕ ಚರಿತ್ರೆ, ಬೇಡನಾಯಕರ ನ್ಯಾಯ ಪಂಚಾಯಿತಿ ಹಾಗೂ ಕಟ್ಟೆಮನೆಗಳ ಸ್ಥಾಪನೆ ಕಾಮಗೇತನಹಳ್ಳಿ ಆಚಾರದ ಕಟ್ಟೆಮನೆ ಸ್ಥಾಪನೆ, ಕಾಮಗೇತಿ ವಂಶಜರ ರಾಜಕೀಯ ಚರಿತ್ರೆ, ಹೀಗೆ ಹಲವಾರು ವಿಷಯಗಳನ್ನೊಳಗೊಂಡ ಮಹತ್ವದ ಕೃತಿ ಇದಾಗಿದೆ. ಇವುಗಳಲ್ಲದೆ ಈ ಸಮುದಾಯವನ್ನು ಕುರಿತ ವಾಲ್ಮಿಕಿ ಸಿರಿ ಮೊದಲಾದ ಸ್ಮರಣ ಸಂಚಿಕೆಗಳು, ಸಂಪಾದಿಂತ ಕೃತಿಗಳು ಹಾಗೂ ಹಲವಾರು ಬಿಡಿ ಲೇಖನಗಳನ್ನು ಬರೆದು ಮ್ಯಾಸ ನಾಯಕರ ಸಂಸ್ಕೃತಿಯನ್ನು ಅಕ್ಷರ ಜಗತ್ತಿಗೆ ಪರಿಚಯಿಸುವಲ್ಲಿ ಇವರ ಪಾತ್ರ ಹಿರಿದು.
13. ಎ.ಎಸ್. ಪ್ರಭಾಕರ, ಅವರು ನನ್ನಿವಾಳ ಸುತ್ತ ಮುತ್ತಲಿನ ಮ್ಯಾಸನಾಯರಲ್ಲಿ ಪ್ರಚಲಿತವಿರುವ ಕಥನಗೀತೆಗಳನ್ನು ಸಂಗ್ರಹಿಸಿ 'ಮ್ಯಾಬೇಡರ ಕಥನಗಳು' ಎಂಬ ಪುಸ್ತಕವನ್ನು ಸಂಪಾದಿಸಿದ್ದಾರೆ. ಈ ಕೃತಿಗೆ ಇವರು ಬರೆದ ಪ್ರಸ್ತಾವನೆ ಅತ್ಯಂತ ಮೌಲ್ಯಯುತವಾದುದಾಗಿದೆ.
14. ಸಣ್ಣ ಓಬಯ್ಯ. ಎಸ್.ಕೆ., ಅವರು 'ಮ್ಯಾಸಬೇಡರ ಮತ್ತು ಕಾಡುಗೊಲ್ಲರ ಬುಡಕಟ್ಟುಗಳು : ಒಂದು ಸಮಾಜಶಾಸ್ತ್ರೀಯ ಅಧ್ಯಯನ' ಎಂಬ ಪಿಎಚ್.ಡಿ ಮಹಾ ಪ್ರಬಂಧವನ್ನು ಬರೆದು ಕನ್ನಡ ವಿಶ್ವವಿದ್ಯಾಲಯದಿಂದ ಪದವಿ ಪಡೆದಿದ್ದಾರೆ. ಈ ಪ್ರಬಂಧದಲ್ಲಿ ಕಾಡುಗೊಲ್ಲರು ಹಾಗೂ ಮ್ಯಾಸ ನಾಯಕರ ನಡುವಿನ ಸಾಮಾಜಿಕ ಸಂಗತಿಗಳನ್ನು ಪರಿಶೀಲಿಸಿದ್ದಾರೆ.
15. ಸತೀಶ್ ಹೆಚ್. ಅವರು 'ನಾಯಕನಹಟ್ಟಿ ತಿಪ್ಪೇಸ್ವಾಮಿ : ಸಾಂಸ್ಕೃತಿಕ ಅಧ್ಯಯನ ಎಂಬ ಮಹಾ ಪ್ರಂಬಂಧವನ್ನು ಕುವೆಂಪು ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿ ಪಿಎಚ್.ಡಿ ಪದವಿ ಪಡೆದಿದ್ದಾರೆ. ಪ್ರಸ್ತುತ ಮಹಾ ಪ್ರಬಂಧದಲ್ಲಿ ನಾಯಕನಹಟ್ಟಿ ತಿಪ್ಪೇಸ್ವಾಮಿ ಹಾಗೂ ಅಲ್ಲಿ ಜಾತ್ರಯನ್ನು ಮ್ಯಾಸ ನಾಯಕರ ಸಂಸ್ಕೃತಿಯ ಕಣ್ಣಲ್ಲಿ ನೋಡುವ ಪ್ರಯತ್ನ ಮಾಡಿದ್ದಾರೆ.
16. ಡಾ.ಬಿ.ಪಾಪಣ್ಣ ಅವರು 'ನನ್ನಿವಾಳದ ಸುತ್ತಿನ ಮ್ಯಾಸಬೇಡರ ಹಟ್ಟಿಗಳು ಒಂದು ಸಾಂಸ್ಕೃತಿಕ ಅಧ್ಯಯನ' ಎಂಬ ಮಹಾಪ್ರಂಬಂಧವನ್ನು ಬೆಂಗಳೂರು ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿ ಪಿಎಚ್.ಡಿ. ಪದವಿ ಪಡೆದಿದ್ದಾರೆ. ಪ್ರಸ್ತುತ ಮಹಾಪ್ರಬಂಧದಲ್ಲಿ ಮ್ಯಾಸಬೇಡರ ನನ್ನಿವಾಳ ಕಟ್ಟೆಮನೆ ಆಚರಣೆ, ನಂಬಿಕೆ, ಹಟ್ಟಿಗಳ ಮಾಹಿತಿಯನ್ನು ಗುರುತಿಸಿರುವುದು ಕಂಡುಬರುತ್ತದೆ.
17. ಡಾ.ಹೆಚ್.ಆರ್ ತಿಪ್ಪೆಸ್ವಾಮಿ, ಅವರು ಡಾ. ರಂಗರಾಜ ವನದುರ್ಗ ಅವರ ಮಾರ್ಗದರ್ಶನದಲ್ಲಿ 'ಮ್ಯಾಸ ಬೇಡರ ಕಟ್ಟೆ ಮನೆಗಳು' ಎಂಬ ಮಹಾ ಪ್ರಬಂಧವನ್ನು ಕುವೆಂಪು ವಿಶ್ವವದ್ಯಾನಿಲಯಕ್ಕೆ

ಸಲ್ಲಿಸಿ ಪಿ.ಎಚ್.ಡಿ ಪದವಿ ಪಡೆದಿದ್ದಾರೆ. ಇದರಲ್ಲಿ ಮ್ಯಾಸ ನಾಯಕರ ಗೋನೂರು, ನಾಯಕನಹಟ್ಟಿ ಮತ್ತು ನನ್ನಿವಾಳ ಎಂಬ ಮೂರು ಕಟ್ಟೆಮನೆಗಳ ಬಗ್ಗೆ ದೀರ್ಘವಾದ ಅಧ್ಯಯನ ನಡೆಸಿದ್ದಾರೆ. ಈ ಕಟ್ಟೆಮನೆಗಳನ್ನು ಕುರಿತಂತೆ ಇಷ್ಟು ದಿರ್ಘವಾಗಿ ನಡೆದ ಅಧ್ಯಯನ ಇದಾಗಿದ್ದು ಇದಕ್ಕೆ ಒಂದು ಐತಿಹಾಸಿಕ ಮಹತ್ವವಿದೆ.

18. ಬೆಂಗಳೂರಿನ ಬಸವನಗುಡಿ ನ್ಯಾಷಿನಲ್ ಕಾಲೇಜಿನ ಕನ್ನಡ ಅಧ್ಯಾಪಕಿ ಡಾ.ಅನ್ನಪೂರ್ಣ ಅವರು 'ಮ್ಯಾಸಬೇಡರ ಸಂಸ್ಕೃತಿ' ಎಂಬ ವಿಷಯದ ಮೇಲೆ ಮಹಾಪ್ರಬಂಧ ಸಿದ್ಧಪಡಿಸಿ ಬೆಂಗಳೂರು ವಿಶ್ವವಿದ್ಯಾಲಯದಿಂದ ಪಿಎಚ್.ಡಿ ಪದವಿ ಪಡೆದಿದ್ದಾರೆ. ಈ ಪ್ರಬಂಧದಲ್ಲಿ ಅಪಾರವಾದ ಕ್ಷೇತ್ರಕಾರ್ಯದ ಫಲವಾಗಿ ಅನೇಕ ಹೊಸ ವಿಷಯಗಳು ದಾಖಲಾಗಿವೆ.

19. ನರಸಿಂಹ ರಾಜು ಟಿ., ಇವರು 'ಮ್ಯಾಸನಾಯಕರ ಸಾಂಸ್ಕೃತಿಕ ವೀರರು' ಎಂಬ ಎಂಫಿಲ್ ನಿಬಂಧವನ್ನು ಕುವೆಂಪು ವಿಶ್ವವಿದ್ಯಾಲಯದ ಪ್ರಾಧ್ಯಾಪಕರಾಗಿದ್ದ ಡಾ. ತೀನಂ. ಶಂಕರನಾರಾಯಣ ಅವರ ಮಾರ್ಗದರ್ಶನದಲ್ಲಿ ಎಂಫಿಲ್ ನಿಬಂಧ ಸಿದ್ದಪಡಿಸಿ ಪದವಿ ಪಡೆದಿದ್ದಾರೆ. ಈ ನಿಬಂಧದಲ್ಲಿ ಮ್ಯಾಸ ನಾಯಕರ ಸಾಂಸ್ಕೃತಿಕ ನಾಯಕರಾದ ಜಗಲೂರು ಪಾಪನಾಯಕ, ಯರಗಟ್ಟನಾಯಕ, ಗಾದರಿಪಾಲನಾಯಕ ಮೊದಲಾದವರ ಬಗ್ಗೆ ಮಾಹಿತಿ ಸಂಗ್ರಹಿಸಿ ವಿಶ್ಲೇಷಿಸಲಾಗಿದೆ.

20. ಉಮೇಶ ಮಾಳಿಗೆ, ಅವರು ಹಂಪಿ ಕನ್ನಡ ವಿಶ್ವವಿದ್ಯಾಲಯದಲ್ಲಿ ಎಂಫಿಲ್ ಸಂಶೋಧನೆಗಾಗಿ 'ಜಗಲೂರು ಪಾಪನಾಯಕನ ನೆಲೆಗಳು' ನೆಲೆಗಳು ವಿಷಯವನ್ನು ಆರಿಸಿಕೊಂಡು ಸುದೀರ್ಘ ಅಧ್ಯಯನ ನಡೆಸಿದ್ದಾರೆ. ಇದರಲ್ಲಿ ಜಗಲೂರು ಪಾಪನಯಕನ ನೆಲೆಗಳಾದ ಜಗಲೂರು, ಚಳ್ಳಕೆರೆ ಮತ್ತು ಕಂಪಳದೇವರಹಟ್ಟಿ ಮೊದಲಾದ ನೆಲೆಗಳನ್ನು ಪರಿಶೀಲಿಸಿದ್ದಾರೆ.

21. ವೀಣಾ. ಎಂ.ಪಿ., ಅವರು ಮ್ಯಾಸ ನಾಯಕರು ಹಾಗೂ ಊರು ನಾಯಕರ ಮನೆ, ಸಮಾಜ ಮತ್ತು ಸಂಸ್ಕೃತಿಯ ಕುರಿತ ತೌಲನಿಕ ಅಧ್ಯಯನ ನಡೆಸಿದ್ದಾರೆ.

22. ಮಂಜುನಾಥ. ಟಿ., ಎನ್ನುವವರು 'ಚಿತ್ರದುರ್ಗ ಸುತ್ತಮುತ್ತಲಿನ ಪಾಳೆಯಗಾರರ ಸಾಂಸ್ಕೃತಿಕ ಇತಿಹಾಸ' ಎಂಬ ಪಿಎಚ್.ಡಿ ಮಹಾಪ್ರಬಂಧವನ್ನು ರಚಿಸಿ ಕುವೆಂಪು ವಿಶ್ವವಿದ್ಯಾನಿಲಯದಿಂದ ಪಿಎಚ್.ಡಿ ಪದವಿ ಪಡೆದಿದ್ದಾರೆ.

23. ಆಂಜನೇಯ, ಅವರು 'ಮೊಳಕಾಲ್ಮೂರ ತಾಲ್ಲೂಕಿನ ಮ್ಯಾಸನಾಯಕರ ಅಧ್ಯಯನ' ಎನ್ನುವ ಅಧ್ಯಯನ ನಡೆಸಿ ಕನ್ನಡ ವಿಶ್ವವಿದ್ಯಾಲಯದಿಂದ ಪದವಿ ಪಡೆದಿದ್ದಾರೆ. ಈ ಅಧ್ಯಯನದಲ್ಲಿ ಮೊಳಕಾಲ್ಮುರು ತಾಲ್ಲುಕಿನ ಮ್ಯಾಸ ನಾಯಕರ ಸಂಪ್ರದಾಯ ಆಚರಣೆಗಳನ್ನು ದಾಖಲಿಸಿ ವಿಶ್ಲೇಷಿಸಿದ್ದಾರೆ.

24. ಕಲ್ಲಪ್ಪ.ಎನ್., ಅವರು 'ಆಡ್ಲಟ್ಟಿ ಮ್ಯಾಸಬೇಡರು: ಒಂದು ಸಮಾಜಶಾಸ್ತ್ರೀಯ ಅಧ್ಯಯನ' ಎಂಬ ಮಹಾ ಪ್ರಬಂಧವನ್ನು ಸಿದ್ಧಪಡಿಸಿ, ಕನ್ನಡ ವಿಶ್ವವಿದ್ಯಾಲಯದಿಂದ ಪದವಿ ಪಡೆದಿದ್ದಾರೆ. ಈ ಅಧ್ಯಯನದಲ್ಲಿ ಒಂದು ಊರಿನ ಮ್ಯಾಸಬೇಡರ ಸಮಗ್ರ ಸಂಸ್ಕೃತಿಯನ್ನು ಪರಿಚಯಿಸಿದ್ದಾರೆ.

25. ಕೊಟ್ರೇಶ್. ಪಿ., ಇವರು 'ಸಾಮಾಜಿಕ ಬದಲಾವಣೆಯ ಹಾದಿಯಲ್ಲಿ ಬೇಡರು' ಎಂಬ ನಿಬಂಧವನ್ನು ಬರೆದು ಕನ್ನಡ ವಿಶ್ವವಿದ್ಯಾಲಯದಿಂದ ಎಂಫಿಲ್ ಪದವಿ ಪಡೆದಿದ್ದಾರೆ. ಪ್ರಸ್ತುತ ಅಧ್ಯಯನದಲ್ಲಿ ಮ್ಯಾಬೇಡರ ಸಮಕಾಲೀನ ಸ್ಥಿತಿಗತಿಗಳ ಬಗ್ಗೆ ವಿಚಾರಮಾಡಿದ್ದಾರೆ.
26. ಮ್ಯಾಸನಯಕ ಸಮುದಾಯಕ್ಕೆ ಸೇರಿದ ಜಗಲೂರು ತಾ. ಐಯ್ಯನಳ್ಳಿ ಗ್ರಾಮದ ತಿಪ್ಪೇಸ್ವಾಮಿ ಅವರು ೨೦೦ ಪುಟಗಳ ಮ್ಯಾಸ ನಾಯಕರ ಕುಲಚರಿತೆಯನ್ನು ಬರೆದಿದ್ದಾರೆ. ಅದರೆ ಅದು ಇನ್ನೂ ಎಲ್ಲಿಯೂ ಪ್ರಕಟವಾಗಿಲ್ಲ. ಈ ಬರೆಹ ಸಮುದಾಯದ ಚರಿತ್ರೆಯ ಸಂದರ್ಭದಲ್ಲಿ ಅತ್ಯತಂತ ಮಹತ್ವಪಡೆಯಲಿದೆ.
27. ನಾನು ಈ ಕ್ಷೇತ್ರದಲ್ಲಿ ಕೆಲವಾರು ವರ್ಷಗಳಿಂದ ಕೆಲಸಮಾಡುತ್ತಿದ್ದು ಸ್ವಲ್ಪಮಟ್ಟಿನ ಸಂಶೋಧನೆಯನ್ನು ಮಾಡಿರುವೆ. ಈ ದಿಕ್ಕಿನಲ್ಲಿ ದೇವರ ಎತ್ತಿನ ಕಿಲಾರಿ ಬೋರಯ್ಯನ ಆತ್ಮ ಕಥನ 'ಕಿಲಾರಿ' ಎನ್ನು ಹೆಸರಲ್ಲಿ ಪ್ರಕಟವಾಗಿದೆ. ಹಾಗೆಯೇ ಮ್ಯಾಸ ನಾಯಕರ ಕೋಲಾಟದ ಕಲೆಯ ಜೊತೆ ಬಳಕೆಯಲ್ಲಿದ್ದ ಹಾಡುಗಳನ್ನು 'ಬಡಗಿಕಟ್ಟಿದ ಬೆಡಗಿನಮಾಳಿಗೆ' ಎಂಬ ಸಂಪಾದಿತ ಕೃತಿ ಹೊರಬಂದಿದೆ. ಇದರ ಜೊತೆಗೆ ಮ್ಯಾಸನಾಯಕರ ಸಂಸ್ಕೃತಿಯ ವೈಶಿಷ್ಟ್ಯಗಳು, ಪಾರಂಪರಿಕ ಜ್ಞಾನಗಳನ್ನು ಕುರಿತ ಅನೇಕ ಲೇಖನಗಳನ್ನು ರಾಷ್ಟ್ರ ಹಾಗೂ ರಾಜ್ಯಮಟ್ಟದ ವಿಚಾರ ಸಂಕಿರಣಗಳಲ್ಲಿ ಮಂಡಿಸಿ ನಂತರ ಪ್ರಕಟಿಸಿರುವೆ. ಹೀಗೆ ಪ್ರಕಟಗೊಂಡ ಲೇಖನಗಳನ್ನು ಪ್ರಸ್ತುತ ಕೃತಿಯಲ್ಲಿ ಕಾಣಬಹುದಾಗಿದೆ.

ಈ ರೀತಿಯ ಕೃತಿಗಳಲ್ಲದೆ ಅನೇಕ ಸಂಶೋಧಕರು ಹಾಗೂ ಆಸಕ್ತರು ಲೇಖನಗಳ ರೂಪದಲ್ಲಿ ಪ್ರಕಟಿಸಿರುವ ಬರೆಹಗಳು ಹಲವಾರು ಅವುಗಳಲ್ಲಿ ಕೆಲವನ್ನು ಹೆಸರಿಸುವುದಾದರೆ ಪ್ರೊ. ಬಿ.ಪಿ.ವೀರೇಂದ್ರಕುಮಾರ್ ಅವರು ನಾಯಕನಹಟ್ಟಿ ತಿಪ್ಪೇಸ್ವಾಮಿ ಕುರಿತು ಬರೆದ ಲೇಖನ, ಅರುಣ್ ಜೋಳದ ಕೂಡ್ಲಿಗಿ ಅವರ ಗಾದ್ರಿಪಾಲನಾಯಕನನ್ನು ಕುರಿತು ಬರೆದ ಬರೆಹ, ಸಣ್ಣಪಾಪಯ್ಯ ಅವರು ರಚಿಸಿದ ಮ್ಯಾಸನಾಯಕರ ವ್ಯಕ್ತಿ ಮತ್ತು ಸ್ಥಳನಾಮಗಳು ಎಂಬ ಲೇಖನ ಹೀಗೆ ಹತ್ತಾರು ಲೇಖನಗಳು ಪ್ರಕಟವಾಗಿವೆ. ಹಾಗೆಯೇ ರಾಜ್ಯದ ಕುವೆಂಪು ವಿಶ್ವವಿದ್ಯಾಯ, ಕನ್ನಡ ವಿಶ್ವವಿದ್ಯಾನಿಲಯ, ಬೆಂಗಳೂರು ವಿಶ್ವವಿದ್ಯಾನಿಲಯ, ಮೈಸೂರು ವಿಶ್ವವಿದ್ಯಾನಿಯಗಳಲ್ಲಿ ಹೊಸ ತಲೆಮಾರಿನ ಸಂಶೋಧಕರು ಮ್ಯಾಸ ನಾಯಕರ ಕುರಿತಂತೆ ಸಂಶೋಧನೆಗಳನ್ನು ನಡೆಸುತ್ತಿದ್ದಾರೆ.

ಮ್ಯಾಸ ನಾಯಕರ ಕರಿತು ಬಂದ ಬರೆಹಗಳನ್ನು ಈ ಸಮುದಾಯದ ವಿವಿಧ ಸ್ಮರಣೀಯ ಸಂದರ್ಭಗಳಲ್ಲಿ ಪ್ರಕಟಿಸಿದ ಅನೇಕ ಪತ್ರಿಕೆ ಹಾಗೂ ಸ್ಮರಣ ಸಂಚಿಕೆಗಳಲ್ಲಿ ನೋಡಬಹುದು ಅಂಥ ಕೆಲವು ಸಂಚಿಕೆಗಳನ್ನು ಹಾಗೂ ಸಂಪಾದಕರನ್ನು ಈ ಮುಂದಿನಂತೆ ನೀಡಬಹುದು : ಏಕಲವ್ಯ (ಸಂ)ಅಮರೇಶ ಯತಗಲ್, ವಾಲ್ಮೀಕಿ ಕರ್ನಾಟಕ, (ಸಂ) ನರಸಿಂಹಯ್ಯ ಎಂ., ವಾಲ್ಮೀಕಿ ವಾಣಿ, (ಸಂ) ನಾಯಕ ಎಂ.ಕೆ., ವಾಲ್ಮೀಕಿ ಬಂಧು, (ಸಂ) ಪರಮೇಶ್ವರಪ್ಪ ಕಟ್ಟಿಮನಿ, ವಾಲ್ಮೀಕಿ ಜ್ಯೋತಿ, (ಸಂ) ಪ್ರಶಾಂತ ನಾಯಕ. ಜಿ., ವಾಲ್ಮೀಕಿ ಕಿರಣ, ವಾಲ್ಮೀಕಿ ಜ್ಯೋತಿ,(ಸಂ) ಹರ್ತಿಕೋಟೆ ವೀರೇಂದ್ರ ಸಿಂಹ ಇತ್ಯಾದಿ.

ಮಿತಿಗಳು

ಮ್ಯಾಸ ನಾಯಕರ ಕುರಿತಂತೆ ಇಷ್ಟು ಪ್ರಮಾಣದ ಅಧ್ಯಯನಗಳು ನಡೆದಿದ್ದರೂ ಇನ್ನೂ ಅಧ್ಯಯನ ಮಾಡಬೇಕಾದ ಕ್ಷೇತ್ರಗಳು ಬಹಳಷ್ಟಿವೆ. ಅಷ್ಟೇ ಅಲ್ಲದೇ ನಡೆದಿರುವ ಅಧ್ಯಯನಗಳೂ ಹಲವಾರು ಮಿತಿಗಳನ್ನು ಹೊಂದಿದ್ದು ಅವುಗಳನ್ನು ಹೀಗೆ ಪಟ್ಟಿ ಮಾಡಬಹುದು.

೧. ಮ್ಯಾಸ ನಾಯಕರ ಕುರಿತಂತೆ ನಡೆದಿರುವ ಅಧ್ಯಯನಗಳ ಸಂಖ್ಯೆ ಎಷ್ಟು ದೊಡ್ಡದಿದೆ ಎಂದರೆ ಆ ಬಗ್ಗೆ ಅಧ್ಯಯನ ಮಾಡಬೇಕಾದುದು ಏನೂ ಇಲ್ಲವೆಂಬ ಎಂಬ ಭಾವನೆಯನ್ನು ಮೂಡಿಸಿವೆ. ಆದರೆ ನಿಜವಾಗಿ ನಡೆಯಬೇಕಾದ ರೀತಿಯಲ್ಲಿ ಅಧ್ಯಯನಗಳು ನಡದಿಲ್ಲ ಎಂಬುದು ದಿಟ. ಇಷ್ಟೆಲ್ಲ ಅಧ್ಯಯನಗಳು ನಡೆದಿದ್ದಾಗ್ಯೂ ಸಮುದಾಯದ ಬಗ್ಗೆ ಸರಿಯಾದ, ಸಮಗ್ರವಾದ ತಿಳುವಳಿಕೆ ಇಲ್ಲ. ವಿವರಗಳ ದೃಷ್ಟಿಯಿಂದಲಾದರೂ ಅಧ್ಯಯನಗಳು ವ್ಯವಸ್ಥಿತ ಹಾಗೂ ವ್ಯಾಪಕವಾಗಿಲ್ಲ.

೨. ಈ ಬಗ್ಗೆ ನಡೆದಿರುವ ದೊಡ್ಡ ಸಂಖ್ಯೆಯ ಅಧ್ಯಯನಗಳು ಸಮುದಾಯದ ಇರುವಿನ ಸ್ಥಿತಿಯನ್ನು ವಿವರಿಸುವಲ್ಲಿ ಹೆಚ್ಚು ಆಸಕ್ತಿ ವಹಿಸಿವೆ. ಸ್ಥಿತಿಯ ಕಾರ್ಯಾಕಾರಣ ಸಂಬಂಧಗಳನ್ನು, ಸ್ಥಿತಿಯ ರೂಪದ ಹಿಂದಿರುವ ಆಶಯಗಳನ್ನು ಗುರುತಿಸುವ ವೈಜ್ಞಾನಿಕ ಹಾಗು ವೈಚಾರಿಕ ಹಿನ್ನೆಲೆಗಳು ಇಲ್ಲ. ಇದರಿಂದ ಸಂಸ್ಕೃತಿ ಅಧ್ಯಯನಗಳು ತಲುಪಬೇಕಾದ ನಿದಿಷ್ಟ ನೆಲೆಯನ್ನು ತಲುಪಲು ಇಲ್ಲಿನ ಅಧ್ಯಯನಗಳಿಗೆ ಸಾಧ್ಯವಾಗಿಲ್ಲ.

೩. ಈ ಅಧ್ಯಯನಗಳಲ್ಲಿ ಶೀರ್ಷಿಕೆ, ಉದ್ದೇಶ ಮತ್ತು ಗುರಿಗಳಲ್ಲಿ ಸಮುದಾಯದ ಸಮಗ್ರ ಅಧ್ಯಯನದ ಸುಳಿವುಗಳು ಇವೆಯಾದರೂ ಅಂತಿಮವಾಗಿ ಸಂಸ್ಕೃತಿಯ ಆಯಾಮವನ್ನು ವಿವರಿಸುವ ಪ್ರಯತ್ನಗಳು ಮಾತ್ರವಾಗಿವೆ. ಐತಿಹಾಸಿಕ ಹಾಗೂ ಸಾಮಾಜಿಕ ಆಯಾಮಗಳನ್ನು ಗುರುತಿಸುವ ಪ್ರಯತ್ನಗಳು ಅತೀ ವಿರಳ.

೪. ನಡೆದಿರುವ ಅಧ್ಯಯನಗಳಲ್ಲಿ ಬಹುತೇಕ ವಿಶ್ವವಿದ್ಯಾಲಯಗಳ ಶೈಕ್ಷಣಿಕ ಸಂಶೋಧನೆಯ ಭಾಗವಾಗಿ ಮಾತ್ರ ಬಂದಿವೆ. ಈ ಶೈಕ್ಷಣಿಕ ಮಿತಿ ಇಡೀ ಅಧ್ಯಯನಗಳು ಮೇಲ್ನೋಟದಲ್ಲಿ ನಡೆಯುವಂತೆ ಮಾಡಿವೆ.

೫. ಈ ಅಧ್ಯಯನಗಳಲ್ಲಿ ಬಹುತೇಕ ಸಮುದಾಯವನ್ನು ಭಾವನಾತ್ಮಕವಾಗಿ ನೋಡಿರುವುದರಿಂದ ಇಲ್ಲಿ ಅತ್ಯಂತ ಮುಖ್ಯವಾಗಿ ಇರಬೇಕಿದ್ದ ವಿಮರ್ಶಾತ್ಮಕ ದೃಷ್ಟಿ ಇಲ್ಲವಾಗಿದೆ. ಅದರ ಬದಲಿಗೆ ಸಮುದಾಯದ ಸಂಸ್ಕೃತಿಯನ್ನು ಮೆರೆಸುವ ರಮ್ಯ ದೃಷ್ಟಿ ಪ್ರಧಾನವಾಗಿದೆ.

೬. ಸಮುದಾಯದ ಸಾಂಸ್ಕೃತಿಕ ಮೌಖಿಕ ಸಾಹಿತ್ಯವನ್ನು ಪ್ರತ್ಯೇಕವಾಗಿ ಸಂಗ್ರಹಿಸುವ ಪ್ರಯತ್ನಗಳು ಬಹಳಷ್ಟಿಲ್ಲ. ಸಂಶೋಧಕರು ತಮ್ಮ ವಿಷಯಕ್ಕೆ ಪೂರಕವಾದ ಕೆಲವೊಂದು ಮಾಹಿತಿಗಳನ್ನು ಕ್ಷೇತ್ರಕಾರ್ಯಗಳ ಮೂಲಕ ಸಂಗ್ರಹಿಸಿ ಬಳಸಿಕೊಂಡು ಅಲ್ಲಿಗೆ ಮುಗಿಸಿರುವುದು ಇಲ್ಲಿನ ಬಹಳ ದೊಡ್ಡ ಮಿತಿಯೆನಿಸುತ್ತದೆ.

ಸಾಧ್ಯತೆಗಳು

ಮೇಲಿನ ಮಿತಿಗಳನ್ನು ಗಮನಿಸದ ಮೇಲೆ ಇನ್ನೂ ಮುಂದಿನ ದಿನಗಳಲ್ಲಾದರೂ ಈ ಮಿತಿಗಳನ್ನು ಮೀರಿ ಅಧ್ಯಯನಗಳು ನಡೆಯಬೇಕಿದೆ. ಅಂಥ ಪ್ರಯತ್ನಗಳಿಗೆ ಕೆಲವು ಸಾಧ್ಯತೆಗಳನ್ನು ಸೂಚಿಸುವುದಾರೆ–

1. ಸಮುದಾಯದ ಮೌಖಿಕ ಸಾಹಿತ್ಯದ ಸಂಗ್ರಹ ಅಗತ್ಯವಾಗಿ ನಡೆಯಬೇಕಿದೆ.
2. ಸಾಂಸ್ಕೃತಿಕ ವ್ಯಾಪ್ತಿಗೆ ಸೀಮಿತಗೊಂಡಿರುವ ಅಧ್ಯಯನಗಳು ಸಾಮಾಜಿಕ, ಆರ್ಥಿಕ ಆಯಾಮದ ಕಡೆಗೆ ವಿಸ್ತರಿಸಬೇಕಿದೆ
3. ಮ್ಯಾಸ ನಾಯಕರು ಎಂದಾಕ್ಷಣ ಇಡೀ ಸಮುದಾಯ ಒಂದೇ ಚೌಕಟ್ಟಿನೊಳಗೆ ಇಲ್ಲ. ಹಾಗಾಗಿ ಅದರೊಳಗಿನ ಆಂತರಿಕ ವೈವಿಧ್ಯತೆಗಳನ್ನು ಗಮನಿಸಬೇಕಿದೆ.
4. ವಿವರಣಾತ್ಮಕ ನೆಲೆಯಿಂದ ವಿಶ್ಲೇಷಣಾತ್ಮಕ ನೆಲೆಗೆ ಅಧ್ಯಯನಗಳು ವಿಸ್ತಾರಗೊಳ್ಳಬೇಕಿದೆ. ಇದಕ್ಕೆ ಬೇಕಾದ ಅಂತರ್ ಶಿಸ್ತೀಯ ಅಧ್ಯಯನದ ಪರಿಕರಗಳನ್ನು ಬಳಸಿಕೊಳ್ಳಬೇಕಿದೆ.
5. ಸಮುದಾಯದ ಅಧ್ಯಯನಗಳಲ್ಲಿ ಒಳಗಿನ ವ್ಯಕ್ತಿಗಳು ತಜ್ಞತೆಯೊಂದಿಗೆ ಅಧ್ಯಯನ ನಡೆಸಬೇಕಾದ ಅಗ್ಯವಿದ್ದು ಅದನ್ನು ಈ ಸಮುದಾಯದ ವಿದ್ಯಾವಂತರು ನಿಷ್ಟೆಯಿಂದ ಮಾಡಬೇಕಿದೆ.
6. ಮ್ಯಾಸನಾಯಕರು ಪಶುಪಾಲನೆ, ಕೃಷಿ ಮತ್ತಿತರ ವೃತ್ತಿ ಬದುಕಿನಲ್ಲಿ ಕಂಡುಕೊಂಡ ಪಾರಂಪರಿಕ ಜ್ಞಾನ ವ್ಯವಸ್ಥೆಯನ್ನು ಆನ್ವಯಿಕ ದೃಷ್ಟಿಯಿಂದ ಅಧ್ಯಯನ ನಡೆಸಬೇಕಾದ ಅನಿವಾರ್ಯತೆ ಇದೆ.

ಮ್ಯಾಸನಾಯಕರ ಕರಿತ ಅಧ್ಯಯನಗಳ ಪಟ್ಟಿ

೧. ಈಶ್ವರಪ್ಪ . ಎಂ.ಜಿ.,ಮ್ಯಾಸಬೇಡರು,ಐಬಿಹೆಚ್ ಪ್ರಕಾಶನ, ಬೆಂಗಳೂರು. ೧೯೮೨
೨. ಕರಿಶೆಟ್ಟಿ ರುದ್ರಪ್ಪ ,ಮ್ಯಾಸನಾಯಕರು ಒಂದು ಜನಾಂಗಿಕ ಅಧ್ಯಯನ,ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೫
೩. ಕೃಷ್ಣ ಮೂರ್ತಿ ಹನೂರು, ಮ್ಯಾಸಬೇಡರ ಸಂಸ್ಕೃತಿ,ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩
೪. ಪ್ರಭಾಕರ. ಎ.ಎಸ್.,ಮ್ಯಾಸಬೇಡರ ಕಥನಗಳು,ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ,ಹಂಪಿ. ೧೯೯೯
೫. ಮೀರಾಸಾಬಿಹಳ್ಳಿ ಶಿವಣ್ಣ ,ಮ್ಯಾಸಮಂಡಲ,ಕನ್ನಡ ಪುಸ್ತಕ ಪ್ರಾಕಾರ, ಬೆಂಗಳೂರು. ೨೦೦೩
೬. ಮುತ್ತಯ್ಯ. ಎಸ್.ಎಂ.,ಕಿಲಾರಿ (ಮ್ಯಾಸಬೇಡರ ಎತ್ತಿನ ಕಿಲಾರಿ ಬೋರಯ್ಯನ ಆತ್ಮಕಥೆ),ಸೃಷ್ಟಿ ಪ್ರಕಾಶನ, ಬೆಂಗಳೂರು. ೨೦೦೮
೭. ಮಂಜುನಾಥ ಬೇವಿನಕಟ್ಟಿ,(ಸಂ) ವ್ಯಾದ ಚರಿತೆ,ಬೇಡ ಮೂಲದ ಕಥನಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ,ಹಂಪಿ. ೨೦೦೭

೮. ಮಂಜುನಾಥ ಬೇವಿನಕಟ್ಟಿ ಮತ್ತು ತಾರಿಹಳ್ಳಿ ಹನುಮಂತಪ್ಪ,(ಸಂ) ವಾಲ್ಮೀಕಿ ಸಂಪದ, ಶ್ರೀ ವಾಲ್ಮೀಕಿ ಮಹಾಸಂಸ್ಥಾನ, ರಾಜನಹಳ್ಳಿ. ೨೦೦೬

೯. ರಾಜಣ್ಣ . ಆರ್., ನಾಯಕ ಜನಾಂಗದ ಇತಿಹಾಸ, ಚಳ್ಳಕೆರೆ ಚಿತ್ರದುರ್ಗ ಜಿಲ್ಲೆ. ೧೯೮೨

೧೦. ವಿರೂಪಾಕ್ಷಿ ಪೂಜಾರಹಳ್ಳಿ, ಚಿತ್ರದುರ್ಗ ಜಿಲ್ಲೆಯ ಬುಡಕಟ್ಟು ವೀರರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೩

೧೧. ವಿರೂಪಾಕ್ಷಿ ಪೂಜಾರಹಳ್ಳಿ, ಗಾದರಿ ಪಾಲನಾಯಕ, ಪ್ರಸಾರಾಂಗ, ಕನ್ನಡ ವಿಶವಿದ್ಯಾಲಯ, ಹಂಪಿ. ೧೯೯೯

೧೨. ವಿರೂಪಾಕ್ಷಿ ಪೂಜಾರಹಳ್ಳಿ, ಕಾಮಗೇತಿ ವಂಶಜರ ಚರಿತ್ರೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ,ಹಂಪಿ. ೨೦೦೬

೧೩. ವಿರೂಪಾಕ್ಷಿ ಪೂಜಾರಹಳ್ಳಿ, ವಾಲ್ಮೀಕಿ ಸಮುದಾಯದ ಪ್ರಾತಃಸ್ಮರಣೀಯರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ,ಹಂಪಿ. ೨೦೦೬

೧೪. ವಿರೂಪಾಕ್ಷಿ ಪೂಜಾರಹಳ್ಳಿ, ಚಿನ್ನಹಗರಿ ಸಿರಿ, ಚಿನ್ನಹಗರಿ ಪ್ರಕಾಶನ, ಪೂಜಾರಹಳ್ಳಿ. ೨೦೦೬

೧೫. ವಿರೂಪಾಕ್ಷಿ ಪೂಜಾರಹಳ್ಳಿ (ಸಂ), ಬೇಡ ಬುಡಕಟ್ಟಿನ ಚರಿತ್ರೆ ಮತ್ತು ಸಂಸ್ಕೃತಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೮,

೧೬. ವಿರೂಪಾಕ್ಷಿ ಪೂಜಾರಹಳ್ಳಿ, (ಸಂ) ವಾಲ್ಮೀಕಿ ಸಿರಿ, ಚಿನ್ನಹಗರಿ ಪ್ರಕಾಶನ, ಪೂಜಾರಹಳ್ಳಿ. ೨೦೦೬

೧೭. ವೀಣಾ. ಎಂ.ಪಿ., ಮನೆ, ಸಮಾಜ ಮತ್ತು ಸಂಸ್ಕೃತಿ, ನೆಲಮನೆ ಪ್ರಕಾಶನ, ಶ್ರೀರಂಗಪಟ್ಟಣ, ಮಂಡ್ಯ ಜಿಲ್ಲೆ. ೨೦೦೦

೧೮. ಪಾಪಣ್ಣ . ಟಿ. ,ನನ್ನಿವಾಳದ ಸುತ್ತಿನ ಮ್ಯಾಸಬೇಡರ ಹಟ್ಟಿಗಳು ಒಂದು ಸಾಂಸ್ಕೃತಿಕ ಅಧ್ಯಯನ ಅಪ್ರಕಟಿತ ಪಿಎಚ್.ಡಿ ಮಹಾಪ್ರಬಂಧ, ಬೆಂಗಳೂರು ವಿಶ್ವವಿದ್ಯಾನಿಲಯ, ಬೆಂಗಳೂರು. ೨೦೦೮

೧೯. ಮಂಜುನಾಥ. ಟಿ., ಚಿತ್ರದುರ್ಗ ಸುತ್ತಮುತ್ತಲಿನ ಪಾಳೆಯಗಾರರ ಸಾಂಸ್ಕೃತಿಕ ಇತಿಹಾಸ, ಅಪ್ರಕಟಿತ ಪಿಎಚ್.ಡಿ ಮಹಾಪ್ರಬಂಧ, ಕುವೆಂಪು ವಿಶ್ವವಿದ್ಯಾನಿಲಯ, ಶಂಕರಘಟ್ಟ . ೨೦೦೮

೨೦. ಸಣ್ಣ ಓಬಯ್ಯ. ಎಸ್.ಕೆ., ಮ್ಯಾಸಬೇಡರ ಮತ್ತು ಕಾಡುಗೊಲ್ಲರ ಬುಡಕಟ್ಟುಗಳು, ಒಂದು ಸಮಾಜಶಾಸ್ತ್ರೀಯ ಅಧ್ಯಯನ, ಅಪ್ರಕಟಿತ ಪಿಎಚ್.ಡಿ ಮಹಾ ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೬

೨೧. ಸತೀಶ್. ಹೆಚ್., ನಾಯಕನಹಟ್ಟಿ ತಿಪ್ಪೇಸ್ವಾಮಿ : ಸಾಂಸ್ಕೃತಿಕ ಅಧ್ಯಯನ, ಅಪ್ರಕಟಿತ ಪಿಎಚ್.ಡಿ ಮಹಾಪ್ರಬಂಧ, ಕನ್ನಡ ಭಾರತಿ, ಕುವೆಂಪು ವಿಶ್ವವಿದ್ಯಾನಿಲಯ, ಶಂಕರಘಟ್ಟ . ೨೦೦೧

೨೨. ಆಂಜನೇಯ, ಮೊಳಕಾಲ್ಮೂರ ತಾಲ್ಲೂಕಿನ ಮ್ಯಾಸನಾಯಕರ ಅಧ್ಯಯನ, ಬುಡಕಟ್ಟು ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೩

೨೩. ಉಮೇಶ. ಎಂ.ಓ., ಮ್ಯಾಸಬೇಡ ಸಮುದಾಯ ಹಾಗೂ ಜಗಳೂರು ಪಾಪನಾಯಕ, ಬುಡಕಟ್ಟು ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೭

೨೪. ಕಲ್ಲಪ್ಪ . ಎನ್., ಆಡ್ಲಟ್ಟಿ ಮ್ಯಾಸಬೇಡರು: ಒಂದು ಸಮಾಜಶಾಸ್ತ್ರೀಯ ಅಧ್ಯಯನ, ಬುಡಕಟ್ಟು ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೩

೨೫. ಕೊಟ್ರೇಶ್. ಪಿ. , ಸಾಮಾಜಿಕ ಬದಲಾವಣೆಯ ಹಾದಿಯಲ್ಲಿ ಬೇಡರು, ಬುಡಕಟ್ಟು ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೩

೨೬. ನರಸಿಂಹರಾಜ. ಟಿ.,ಮ್ಯಾಸಬೇಡರ ಸಾಂಸ್ಕೃತಿಕ ವೀರರು ಒಂದು ಅಧ್ಯಯನ, ಕನ್ನಡ ಭಾರತಿ, ಕುವೆಂಪು ವಿಶ್ವವಿದ್ಯಾಲಯ, ಶಂಕರಘಟ್ಟ . ೧೯೯೮

೨೭. ಅಮರೇಶ ಯತಗಲ್, (ಸಂ) ಏಕಲವ್ಯ, ವಾಲ್ಮೀಕಿ ನಾಯಕ ಸಂಘ, ಮಸ್ಕಿ, ರಾಯಚೂರು.

೨೮. ನರಸಿಂಹಯ್ಯ ಎಂ.,(ಸಂ) ವಾಲ್ಮೀಕಿ ಕರ್ನಾಟಕ, ಪೀಣ್ಯ ಕೈಗಾರಿಕಾ ಪ್ರದೇಶ, ಬೆಂಗಳೂರು

೨೯. ನಾಯಕ ಎಂ.ಕೆ.,(ಸಂ) ವಾಲ್ಮೀಕಿ ವಾಣಿ , ಸಿ.ಕೆ.ಪುರ ಕೆಳಕೋಟೆ, ಚಿತ್ರದುರ್ಗ

೩೦. ಪರಮೇಶ್ವರಪ್ಪ ಕಟ್ಟಿಮನಿ,(ಸಂ) ವಾಲ್ಮೀಕಿ ಬಂಧು, ಸಪ್ತಾಪುರ, ಧಾರವಾಡ

೩೧. ಪ್ರಶಾಂತ ನಾಯಕ. ಜಿ., (ಸಂ) ವಾಲ್ಮೀಕಿ ಜ್ಯೋತಿ, ಸಮಾವೇಶ ಸಮಿತಿ, ಚಾಮರಾಜ ನಗರ, ಮೈಸೂರು ಜಿಲ್ಲೆ. ೨೦೦೩

೩೨. ಹರ್ತಿಕೋಟೆ ವೀರೇಂದ್ರ ಸಿಂಹ, (ಸಂ) ವಾಲ್ಮೀಕಿ ಕಿರಣ, ಶ್ರೀ ವಾಲ್ಮೀಕಿ ಮಹಾಸಂಸ್ಥಾನ ರಾಜನಹಳ್ಳಿ, ದಾವಣಗೆರೆ ಜಿಲ್ಲೆ. ೧೯೯೮

೩೩. ಹರ್ತಿಕೋಟೆ ವೀರೇಂದ್ರ ಸಿಂಹ, (ಸಂ) ವಾಲ್ಮೀಕಿ ಜ್ಯೋತಿ, ಅಖಿಲ ಕರ್ನಾಟಕ ನಾಯಕ ವಾಲ್ಮೀಕಿ ಜನಾಂಗದ ಮಹಾಸಮ್ಮೇಳನ, ಹುಬ್ಬಳ್ಳಿ. ೧೯೮೯.

## ಸಾಂಸ್ಕೃತಿಕ ಮಹತ್ವದ 'ಮ್ಯಾಸಮಂಡಲ'

ಚಿತ್ರದುರ್ಗ ಜಿಲ್ಲೆಯ 'ಜಾನಪದ' ವನ್ನು ಕುರಿತಂತೆ ಅಧ್ಯಯನ ನಡೆಸಿರುವ ವಿದ್ವಾಂಸರು ಹಲವರು, ಅಂತಹವರಲ್ಲಿ ಡಾ. ಮೀರಾಸಾಬಿಹಳ್ಳಿ ಶಿವಣ್ಣ ಅವರು ಅತೀ ಪ್ರಮುಖರು. ಜಿಲ್ಲೆಯ ಕಾಡುಗೊಲ್ಲರು, ಮ್ಯಾಸನಾಯಕರು, ಕುಂಚಿಟಿಗ ಒಕ್ಕಲಿಗರು ಇದೇ ಮೊದಲಾದ ಬುಡಕಟ್ಟುಗಳ ಸಾಂಸ್ಕೃತಿಕ ವೈಶಿಷ್ಟ್ಯಗಳನ್ನು ಅತ್ಯಂತ ರೋಚಕ ರೀತಿಯಲ್ಲಿ ಅಕ್ಷರ ಲೋಕಕ್ಕೆ ಪರಿಚಯಿಸಿದ ಕೀರ್ತಿ ಇವರದು. ಕಾಡುಗೊಲ್ಲರ ಇಬ್ಬರು ಸಾಂಸ್ಕೃತಿಕ ವೀರರು (ಎತ್ತಪ್ಪ–ಜುಂಜಪ್ಪ) ಎಂಬ ವಿಷಯದ ಮೇಲೆ ಸಂಶೋಧನೆ ನಡೆಸಿ, ಮಹಾಪ್ರಬಂಧ ಬರೆದು ಮೈಸೂರು ವಿಶ್ವವಿದ್ಯಾಲಯದಿಂದ ಪಿಹೆಚ್.ಡಿ. ಪದವಿ ಪಡೆದಿದ್ದಾರೆ. ಶ್ರೀಯುತರು ಕಾಡುಗೊಲ್ಲರ ಅನೇಕ ಹಟ್ಟಿಗಳನ್ನು ತಿರುಗಿ ಅಲ್ಲಿನ ಸಂಸ್ಕೃತಿಯನ್ನು ಅತ್ಯಂತ ಸಮರ್ಥವಾಗಿ ಅರ್ಥೈಸಿದವರು. ಕ್ಷೇತ್ರಕಾರ್ಯ ಮಾಡು ಮಾಡುತ್ತಲೇ ಜಾನಪದದ ಚೈತನ್ಯ

ಮಾರ್ಗಗಳನ್ನು ಕಂಡು ಬೆರಗಾದವರು. ಈ ತರದ ಬೆರಗೇ ಇವರಲ್ಲಿ ಸಂಶೋಧನೆಯ ಹುಚ್ಚು ಬೆಳಸಿ ಕೊರಳಿಗೆ ಒಂದು ಲೆನ್ಸ್ ಕ್ಯಾಮರ, ಕೈಗೆ ಪೆನ್ನು ಮತ್ತು ಪ್ಯಾಡನ್ನು ಹಿಡಿಸಿದವು. ಅವತ್ತಿನಿಂದ ಕಾಡುಗೊಲ್ಲರ ಸಂಸ್ಕೃತಿ ಬಗೆಗೆ ಅಷ್ಟೇ ಅಲ್ಲ. ಅದರ ಜೊತೆ ಜೊತೆಗೆ ಬಾಳುತ್ತಿದ್ದ ಮ್ಯಾಸನಾಯಕರು ಹಾಗೂ ಕುಂಚಟಿಗ ಒಕ್ಕಲಿಗರ ಸಂಸ್ಕೃತಿಗಳ ಬಗೆಗೂ ಗಮನ ಹರಿಸಿದರು. ಪರಿಣಾಮ ಮ್ಯಾಸನಾಯಕ ಸಂಸ್ಕೃತಿಯ ಮೇಲೆ ಅನೇಕ ಸಂಶೋಧನಾತ್ಮಕ ಲೇಖನಗಳನ್ನು ಬರೆದರು. ಆ ಲೇಖನಗಳಲ್ಲಿ ನಾಯಕರ ಸಂಸ್ಕೃತಿಯ ವೈಶಿಷ್ಟ್ಯಗಳನ್ನು ಅಭೂತಪೂರ್ವ ನಂಬಿಕೆ, ಸಂಪ್ರದಾಯ ಮತ್ತು ಆಚರಣೆಗಳನ್ನು ದಾಖಲಿಸಿದರು. ಈ ಲೇಖನಗಳು ಕರ್ನಾಟಕದ ವಿವಿಧ ಪತ್ರಿಕೆ ಮತ್ತು ಸ್ಮರಣ ಸಂಚಿಕೆಗಳಲ್ಲಿ ಪ್ರಕಟಗೊಂಡವು. ಹೀಗೆ ಅಲ್ಲಲ್ಲಿ ಚದುರಿದ್ದ ಲೇಖನಗಳನ್ನು ಇತ್ತೀಚೆಗೆ ಕನ್ನಡ ಪುಸ್ತಕ ಪ್ರಾಧಿಕಾರವು 'ಮ್ಯಾಸಮಂಡಲ' ಎಂಬ ಹೆಸರಿನಲ್ಲಿ ಒಟ್ಟುಗೂಡಿಸಿ ಪ್ರಕಟಿಸಿದೆ. ಇದು ಲೇಖಕರ ಚಲ್ಲಾಪಿಲ್ಲಿ ಚಿಂತನೆಗಳನ್ನು ಕ್ರೋಢೀಕರಿಸಿದ ಪ್ರಯತ್ನವಾಗಿದೆ.

ಮ್ಯಾಸಮಂಡಲ ಕೃತಿಯಲ್ಲಿ ೧೭ ಲೇಖನಗಳಿದ್ದು, ಇದರಲ್ಲಿ ಜಿಲ್ಲೆಯ ಪ್ರತಿಭಾವಂತ ಕಲಾವಿದರನ್ನು ಪರಿಚಯಿಸುವ ಎರಡು ಲೇಖನಗಳು ಹಾಗೂ ಕುಂಚಿಟಿಗ ಒಕ್ಕಲಿಗರ ಮತ್ತು ಕಾಡುಗೊಲ್ಲರ ಸಂಸ್ಕೃತಿಗೆ ಸಂಬಂಧಿಸಿದ ಒಂದೆರಡು ಲೇಖನಗಳು ಸೇರಿವೆ. ಇನ್ನುಳಿದಂತೆ ಎಲ್ಲಾ ಲೇಖನಗಳು ಮ್ಯಾಸನಾಯಕರ ಸಾಂಸ್ಕೃತಿಕ ವೈಶಿಷ್ಟ್ಯಗಳನ್ನು ತಿಳಿಸುವ ಮತ್ತು ಬುಡಕಟ್ಟಿನ ಮೂಲ, ಬೆಳವಣಿಗೆಯನ್ನು ಸೂಚಿಸುವುದಕ್ಕೆ ಮೀಸಲಾಗಿವೆ.

ಕೃತಿಯಲ್ಲಿರುವ 'ನಾಯಕ ಜನಾಂಗ ಒಂದು ನೋಟ' ಲೇಖನ ಅತ್ಯಂತ ಗಮನಾರ್ಹವಾಗಿದೆ. ನಾಯಕರಲ್ಲಿ ಮ್ಯಾಸನಾಯಕರು – ಊರನಾಯಕರು ಎಂಬ ಎರಡು ಪ್ರಮುಖ ಗುಂಪುಗಳಿವೆ. ಆ ಗುಂಪುಗಳು ಮೂಲದಲ್ಲಿ ಒಂದೇ ಆಗಿದ್ದು, ಅನುಸರಿಸಿದ ಬದುಕಿನ ಮಾರ್ಗಗಳಿಂದ ಬೇರೆ ಬೇರೆ ಆಗಿವೆ. ಆಂದ್ರಪ್ರದೇಶಕ್ಕೆ ಸೇರಿದ ಶ್ರೀಶೈಲದ ಪಕ್ಕದ ಕರಿಮಲೆ–ಕೊಮ್ಮು ಮಲೆಗಳ ಮೂಲದ ಈ ಬುಡಕಟಟು ಜನಾಂಗ ಕರ್ನಾಟಕಕ್ಕೆ ವಲಸೆ ಬಂದಿದೆ. ತೆಲಗು ಭಾಷೆಯನ್ನು ಮಾತೃ ಭಾಷೆಯಾಗಿಸಿಕೊಂಡಿದೆ. ಬೇಡರು, ನಾಯಕರು, ತಳವಾರ, ಪಾಳೇಗಾರರು ಇಂಥ ಹತ್ತು ಹಲವು ಹೆಸರುಗಳಿಂದ ಗುರತಿಸಲ್ಪಟ್ಟಿದ್ದಾರೆ. ಗುಗ್ಗರಿ ಹಬ್ಬ–ಡಿಕ್ಕಿ ಹಬ್ಬ – ಎತ್ತಿನ ಹಬ್ಬ ಮೊದಲಾದ ವಿಶಿಷ್ಟ ಹಬ್ಬ–ಹರಿದಿನಗಳನ್ನು ಆಚರಿಸುವ ಇವರು ಹುಟ್ಟಿನಿಂದ ಸಾವಿನವರೆಗೂ ಅತ್ಯಂತ ಅಭೂತಪೂರ್ಣ ಸಂಪ್ರದಾಯಗಳನ್ನು ಹೊಂದಿದ್ದಾರೆ. ಇಷ್ಟೆಲ್ಲ ಸಮೃದ್ಧ ಮಾಹಿತಿಯನ್ನು ಅತ್ಯಂತ ಸಂಕ್ಷಿಪ್ತವಾಗಿ ಆದರೂ ಸಮರ್ಥವಾಗಿ ಪರಿಚಯಿಸಿದ ಈ ಲೇಖನ, ಲೇಖಕರ ಸ್ಪಷ್ಟ ದೃಷ್ಟಿಯನ್ನು ಕಾಣಿಸುತ್ತದೆ. ಮುಂದೆ ಬರುವ ಲೇಖನಗಳ ವಿವರಗಳು ಪ್ರಸ್ತುತ ಲೇಖನದ ವಿಸ್ತರಣೆಯಾಗಿಯೂ ಗೋಚರಿಸುತ್ತವೆ.

ಇಲ್ಲಿಯ ಅನೇಕ ಲೇಖನಗಳಲ್ಲಿ ಮ್ಯಾಸನಾಯಕರ ಕುರಿತು ಬರೆಯುವಾಗ ಸಹಜವಾಗಿಯೇ ಕಾಡುಗೊಲ್ಲರ ಪ್ರಸ್ತಾಪ ಬರುತ್ತದೆ. ಇದಕ್ಕೆ ಕಾರಣ ಕಾಡುಗೊಲ್ಲರು – ಮ್ಯಾಸಬೇಡರು ಒಂದೇ

ಮೂಲದವರೆಂಬ ನಂಬಿಕೆ ಹಲವು ವಿದ್ವಾಂಸರದಾದರೂ ಸಮರ್ಥಿಸಲು ಆಧಾರಗಳನ್ನು ಬಹಳಷ್ಟು ವಿದ್ವಾಂಸರು ಬಳಸಿಲ್ಲ ಎಂಬುದು ಗಮನಾರ್ಹ. ಪ್ರಸ್ತುತ ಕೃತಿಯಲ್ಲಿ ಸಮರ್ಥನೆಗೆ ಹಲವು ಆಧಾರಗಳನ್ನು ಲೇಖಕರು ಹುಡುಕಿದ್ದಾರೆ. ಅಂಥ ಕೆಲವು ಆಧಾರಗಳನ್ನು ಹೀಗೆ ಹೆಸರಿಸಬಹುದು; ಎರಡೂ ಗುಂಪುಗಳಲ್ಲಿ ಊರು–ಮ್ಯಾಸ ಎಂಬ ಎರಡು ಭಾಗಗಳಿವೆ. ನಾಗರೀಕರ ಸ್ಪರ್ಷದಿಂದ ದೂರವಿರಲು ಪ್ರತ್ಯೇಕ ಹಟ್ಟಿಗಳ ನಿರ್ಮಾಣ. ಗಂಡಸರು–ಹೆಂಗಸರು ರವಿಕೆ ತೊಡದೇ ಇರುವುದು; ಕೈಗಳಿಗೆ ಕಡಗ–ಬದ್ದುಗಳನ್ನು ಧರಿಸುವುದು. ಕೋಳಿಯನ್ನು ಮುಟ್ಟುವುದು– ತಿನ್ನುವುದು ನಿಷಿದ್ಧ. ಕಾಟಮಲಿಂಗ–ಚಿತ್ರಲಿಂಗ–ಬೊಮ್ಮಲಿಂಗ ದೇವರುಗಳು ಎರಡೂ ಸಮುದಾಯಗಳಲ್ಲಿ ಪೂಜನೀಯ. ಪಶುಪಾಲನೆ ವೃತ್ತಿ, ಕಿಲಾರಿ ಸಂಪ್ರದಾಯ, ನವಣೆ ಬತ ಇಂಥ ಅನೇಕ ಆಧಾರಗಳ ಮೂಲಕ ಮ್ಯಾಸನಾಯಕರು ಮತ್ತು ಕಾಡುಗೊಲ್ಲರ ಮೂಲ ಒಂದೇ ಎಂಬುದಾಗಿ ಸಮರ್ಥಿಸಿರುವ ಲೇಖಕರ ದೃಷ್ಟಿ ಶ್ಲಾಘನೀಯ.

ಮ್ಯಾಸನಾಯಕರು ಮೂಲತಃ ಬೇಟೆ ಸಂಸ್ಕೃತಿಗೆ ಸೇರಿದವರು ಎಂಬ ವಾದ ವಿದ್ವಾಂಸರ ವಲಯದಲ್ಲಿ ಪ್ರಚಲಿತದಲ್ಲಿದೆ. ಇದನ್ನು ಒಪ್ಪದ ಮೀರಾಸಾಬಿಹಳ್ಳಿ ಶಿವಣ್ಣ ಅವರು ಮ್ಯಾಸ ಬೇಡರು ಬೇಟೆ ಸಂಸ್ಕೃತಿಗೆ ಪೂರ್ಣ ಸೇರದೆ, ಪಶುಪಾಲನೆಯ ಸಂಸ್ಕೃತಿಗೆ ಸೇರಿರುವ ಸಾಧ್ಯತೆ ಇದೆ ಎಂಬುದನ್ನು ತಮ್ಮ ಬರವಣಿಗೆಯ ಆರಂಭದಿಂದಲೂ ವಾದಿಸುತ್ತಾ, ಬಂದಿರುವುದು ಕಂಡು ಬರುತ್ತದೆ. ಇಲ್ಲಿನ ಹಲವು ಲೇಖನಗಳಲ್ಲಿ ಅಂಥ ಮಾತುಗಳು ಕಾಣಿಸುತ್ತವೆ. ಅವೆಲ್ಲವುಗಳ ಕ್ರೋಢೀಕರಣ ಹಾಗೂ ಅವುಗಳ ವಿಸ್ತರಣೆ ಎಂಬಂತೆ 'ಪಶುಪಾಲಕ ಮ್ಯಾಸ ಬೇಡರು' ಎಂಬ ಲೇಖನ ಮೂಡಿ ಬಂದಿದೆ. ಪ್ರಸ್ತುತ ಲೇಖನದಲ್ಲಿ ಮ್ಯಾಸನಾಯಕರು ಪಶುಪಾಲನೆಯ ವೃತ್ತಿಯಲ್ಲೇ ಬೆಳೆದು ಬಂದವರು ಎಂಬುದನ್ನು ಆಧಾರ ಸಹಿತ ಪ್ರತಿಪಾದಿಸಲಾಗಿದೆ. 'ಮ್ಯಾಸ' ಪದದ ಮೂಲ ರೂಪ ಮೇಯಿಸುವ ಎಂಬುದನ್ನು ಗುರುತಿಸುವುದರ ಮೂಲಕ ಆರಂಭಿಸಿ, ನಾಯಕರ ಸಂಸ್ಕೃತಿಯೊಳಗೆ ಬರುವ ಕಿಲಾರಿ ಸಂಪ್ರದಾಯ (ದೇವರ ಎತ್ತುಗಳನ್ನು ಕಾಯುವ ಕಾಯಕ ಮಾಡುವ ಸಾಂಸ್ಕೃತಿಕ ವಾರಸುದಾರರನ್ನು ಕಿಲಾರಿಗಳೆಂದು ಕರೆಯಲಾಗುತ್ತಿದೆ) ಪಶುಪಾಲಕ ಆಗಿದ್ದ ಗಾದ್ರಿಪಾಲನಾಯಕ, ಚಿನ್ನಪಾಲನಾಯಕ, ಕೋರಿ ಯರಮಂಚನಾಯಕ ಮೊದಲಾದ ಸಾಂಸ್ಕೃತಿಕ ನಾಯಕರು, ಇಂಥ ಹಲವು ಆಧಾರಗಳ ಮೂಲಕ ಈ ಸಮುದಾಯ ಪಶುಪಾಲನೆಯ ವೃತ್ತಿಯನ್ನು ಅವಲಂಬಿಸಿರುವುದರ ಬಗೆಗೆ ಬೆಳಕು ಚೆಲ್ಲಲಾಗಿದೆ. ಇಷ್ಟೇ ಅಲ್ಲದೆ ಮ್ಯಾಸನಾಯಕರು ವಾಸಿಸುವ ಸ್ಥಳಗಳು 'ಹಟ್ಟಿ' ಎಂದು ಕರೆಯಿಸಿಕೊಳ್ಳುವುದನ್ನು ಸೂಚಿಸಿ, ಹಟ್ಟಿ ಎಂಬುದು ದೊಡ್ಡಿ ಪದಕ್ಕೆ ಸಂವಾದಿಯಾಗಿದು, ದೊಡ್ಡಿ ಎಂದರೆ ದನಗಳನ್ನು ಕೂಡುವ ಸ್ಥಳಕ್ಕಿರುವ ಹೆಸರು ಎಂಬುದನ್ನು ಸೂಚಿಸುತ್ತಾರೆ. ಈ ಎಲ್ಲಾ ದೃಷ್ಟಿಗಳಿಂದಾಗಿ ಪ್ರಸ್ತುತ ಲೇಖನಕ್ಕೆ ಅಧ್ಯಯನದ ದೃಷ್ಟಿಯಿಂದ ತುಂಬಾ ಮಹತ್ವವಿದೆ.

ಇದರ ಜೊತೆಗೆ 'ಜಾನಪದ ನೆಲೆಯಲ್ಲಿ ಹಟ್ಟಿ ಜಾತ್ರೆ' ಲೇಖನವು ಅನೇಕ ಸಾಂಸ್ಕೃತಿಕ ಒಳನೋಟಗಳನ್ನು ನೀಡುವ ಪ್ರಮುಖ ಲೇಖನವಾಗಿದೆ. ನಾಯಕನ ಹಟ್ಟಿಯ ತಿಪ್ಪೇರುದ್ರಸ್ವಾಮಿಯನ್ನು

ಕುರಿತು ವಿಚಾರ ಮಾಡುವ ಇದು ತಿಪ್ಪೇರುದ್ರಸ್ವಾಮಿಯ ಸಂಪ್ರದಾಯದಲ್ಲಿ ನಡೆಯುವ ಅನೇಕ ಆಚರಣೆಗಳನ್ನು ಗಮನಿಸಿ ತಿಪ್ಪೇಸ್ವಾಮಿ ಅವಧೂತ ಪರಂಪರೆಗೆ ಸೇರಿರುವ ಸಾಧ್ಯತೆ ಇದೆ ಎಂಬುದನ್ನು ಪ್ರತಿಪಾದಿಸುವ ರೀತಿ ಅಚ್ಚರಿ ಮೂಡಿಸುತ್ತದೆ. ಜೊತೆಗೆ ಜಾತ್ರೆಯಲ್ಲಿ ಒಣ ಕೊಬ್ಬರಿ ಸುಡುವ ಸಂಪ್ರದಾಯವಿದ್ದು, ಇದು ತಿಪ್ಪೇಸ್ವಾಮಿಯನ್ನು ಅವಧೂತ ಸಂಪ್ರದಾಯದೊಳಗೆ ಗುರುತಿಸುವಂತೆ ಮಾಡುತ್ತದೆ. ಎಲ್ಲಾ ಶ್ಲೇಷೆಯನ್ನು ಕಳೆದುಕೊಂಡಂತೆ ನೀರು ಹಿಂಗಿಸಿಕೊಂಡ ಕೊಬ್ಬರಿ ಸ್ಥಿತಿ 'ಅವಧೂತ ಸ್ಥಿತಿ' ಯನ್ನು ಸಂಕೇತಿಸುತ್ತದೆಯೇ? ಎಂಬ ಲೇಖಕರ ಊಹೆ ಓದುಗರನ್ನು ಗಂಭೀರ ಚಿಂತನೆಗೆ ಹಚ್ಚುತ್ತದೆ. ಮ್ಯಾಸನಾಯಕರ ಸಮುದಾಯದೊಳಗೆ ತಿಪ್ಪೇಸ್ವಾಮಿ ಪ್ರಮುಖ ದೈವವಾಗಿದ್ದು, ಈತನ ಹೆಸರನ್ನು ಅನೇಕ ಜನರಿಗಿಟ್ಟಿರುವುದನ್ನು ಕಾಣಬಹುದು. ಈ ಪ್ರಯತ್ನದ ಮುಂದುವರೆಕೆಯಾಗಿ 'ಹಟ್ಯಪ್ಪ' ಎಂಬ ಹೆಸರು ಬಂದಿದೆ. ಈ ಹಟ್ಯಪ್ಪ ಹೆಸರು ತಿಪ್ಪೇಸ್ವಾಮಿಯ ಹೆಸರಿನ ಮತ್ತೊಂದು ರೂಪ ಎಂದು ಪ್ರತಿಪಾದಿಸುವ ಲೇಖಕರ ದೃಷ್ಟಿ ವಿಶಿಷ್ಟ ಒಳನೋಟಗಳಿಂದ ಕೂಡಿದ್ದಾಗಿದೆ.

'ಪಾಳೇಗಾರರು' ಗುಂಪು ಕೇವಲ ಬೇಡರು ಅಥವಾ ನಾಯಕರಲ್ಲಿ ಮಾತ್ರ ಇದೆ ಎಂಬುದು ಸಾಮಾನ್ಯ ತಿಳುವಳಿಕೆ. ಆದರೆ ಪ್ರಸ್ತುತ ಪುಸ್ತಕದ ಕೆಲವು ಮಾಹಿತಿಗಳು ಅಂಥ ನಂಬಿಕೆಯನ್ನು ಸುಳ್ಳು ಮಾಡುತ್ತವೆ. ನಾಯಕರು ಅಷ್ಟೇ ಅಲ್ಲದೆ ಲಿಂಗಾಯತ ಮತ್ತು ಇತರೆ ಜಾತಿ ಜನಾಂಗಗಳಲಿಯೂ ಪಾಳೇಗಾರರು ಇದ್ದರೆಂದು ಪ್ರತಿಪಾದಿಸುವ ಲೇಖಕರ ಸೂಕ್ಷ್ಮದೃಷ್ಟಿ ಗಮನಾರ್ಹ. ನಾಯಕನಹಟ್ಟಿಯ ಪಾಳೇಗಾರರ ಕಾಲದ ಬಖೈರೊಂದನ್ನು ಬಹಳಷ್ಟು ಜನರು ಅರ್ಥೈಸಿದ್ದಾಗ್ಯೂ ಅನೇಕ ಅರ್ಥಸಾಧ್ಯತೆಗಳು ಇನ್ನೂ ಉಳಿದಿರುತ್ತವೆ ಎಂಬುದು ಇಲ್ಲಿನ ಬಖೈರಿನ ಮರು ವಿಶ್ಲೇಷಣೆಯ ಪ್ರಯತ್ನದಿಂದ ತಿಳಿದುಬರುತ್ತದೆ.

ಇಡೀ ಕೃತಿಯುದ್ದಕ್ಕೂ ಲೇಖಕರು ಸಂಸ್ಕೃತಿ ಸಂಗತಿಗಳನ್ನು ನಮಗೆ ತಿಳಿಸುವಾಗ ಅವರು ಬಳಸುವ ಭಾಷೆ, ಕೊಡುವ ತೀರ್ಮಾನಗಳು ಅತ್ಯಂತ ಖುಷಿಕೊಡುತ್ತವೆ. ಬುಡಕಟ್ಟಿನ ಸಂಸ್ಕೃತಿಯ ವೈಶಿಷ್ಟ್ಯಗಳನ್ನು ತಿಳಿಸುತ್ತಲೇ ಅಭಿವೃದ್ಧಿ ಕುರಿತ ಚಿಂತನೆಯ ಲೇಖನವೊಂದು ಈ ಕೃತಿಯಲ್ಲಿ ಸೇರಿದ್ದು, ಸಂಸ್ಕೃತಿಯ ಶ್ರೀಮಂತಿಕೆಯೊಂದನ್ನೇ ಸ್ತುತಿಸದೇ ಸಂಸ್ಕೃತಿಯ ನಿರ್ಮಾತೃ ಸಮುದಾಯದ ಆರ್ಥಿಕ ಅಭಿವೃದ್ಧಿಯ ಬಗೆಗೂ ಚಿಂತಿಸಬೇಕೆಂದು ನಮ್ಮನ್ನು ಒತ್ತಾಯಿಸುತ್ತದೆ. ಹೀಗೆ ಸಾಂಸ್ಕೃತಿಕ ಸಂಗತಿಗಳನ್ನು ಜೊತೆಗಿಟ್ಟುಕೊಂಡು ಆರ್ಥಿಕ ಪ್ರಗತಿಯನ್ನು ಸಾಧಿಸಬಹುದಾದ ಮಾರ್ಗಗಳನ್ನು ಇಲ್ಲಿ ಸೂಚಿಸಿರುವುದು ಇಂದಿಗೆ ಅತ್ಯಂತ ಪ್ರಸ್ತುತವಾದುದ್ದಾಗಿದೆ.

ಇಂಥ ಹಲವು ಸಾಂಸ್ಕೃತಿಕ ಒಳನೋಟಗಳಿಂದ ಕೂಡಿರುವ ಪ್ರಸ್ತುತ ಕೃತಿ ಸಂಸ್ಕೃತಿ ಅಧ್ಯಯನದ ಇತಿಹಾಸದಲ್ಲಿ ಒಂದು ವಿಶಿಷ್ಟ ದಾಖಲೆ. ಮ್ಯಾಸನಾಯಕರ ಸಂಸ್ಕೃತಿಯನು ಅರಿಯುವ ಹಂಬಲವಿರುವವರು ಮತ್ತು ಅಧ್ಯಯನ ಮಾಡಲು ಉದ್ದೇಶಿಸಿದವರು ಅಗತ್ಯವಾಗಿ ಓದಬೇಕಾದ ಕೃತಿ ಇದಾಗಿದೆ. ಹಾಗಂತ ಪ್ರಸ್ತುತ ಕೃತಿ ಸಂಪೂರ್ಣ ದೋಷರಹಿತವೆಂದು ಹೇಳಲು ಬರುವುದಿಲ್ಲ.

ಸಹಜವಾಗಿಯೆ ಅಲೋಚನ ವಿಧಾನದಲ್ಲಿ ಹಾಗೂ ತಾಂತ್ರಿಕ ಸ್ವರೂಪದಲ್ಲಿ ಕೆಲವು ದೋಷಗಳಿವೆ. ಅಂಥ ದೋಷಗಳನ್ನು ಗುರುತಿಸದೇ ಇದ್ದರೆ ಇಲ್ಲಿನ ಅಭಿಪ್ರಾಯಗಳು ಏಕಮುಖೀ ಚಿಂತನೆಗೆ ಹಾದಿ ಮಾಡಿಕೊಡುತ್ತವೆ. ಹಾಗಾಗಿ ಕೃತಿಯಲ್ಲಿನ ದೋಷಗಳನ್ನು ಈ ಮುಂದಿನಂತೆ ಪಟ್ಟಿ ಮಾಡಬಹುದು.

೧. ಈ ಕೃತಿ ಬೇರೆ ಬೇರೆ ಕಾಲ ಸಂದರ್ಭಗಳಲಿ ರಚಿತವಾದ ಹಲವು ಲೇಖನಗಳನ್ನು ಹೊಂದಿರುವುದರಿಂದ ಸಹಜವೆಂಬಂತೆ ವಿಷಯಗಳ ಪುನರಾವರ್ತನೆ ಕಂಡು ಬರುತ್ತದೆ.
೨. 'ಮ್ಯಾಸ ಮಂಡಲ' ಎಂಬ ಹೆಸರಿನ ಈ ಪುಸ್ತಕದಲ್ಲಿ ಶೀರ್ಷಿಕೆಗೆ ನೇರವಾಗಿ ಸಂಬಂಧಿಸಿದ ಲೇಖನಗಳು ಸೇರಿರುವುದು ಅಷ್ಟು ಸಮಂಜಸ ಎನಿಸುವುದಿಲ್ಲ. ಏಕೆಂದರೆ ಕೃತಿಗಿರುವ ಒಂದು ಕೇಂದ್ರ ಪ್ರಜ್ಞೆಗೆ ಬೇರೆ ಸಂಸ್ಕೃತಿಗೆ ಸಂಬಂಧಿಸಿದ ಲೇಖನಗಳು ದಕ್ಕೆ ತರುತ್ತವೆ.
೩. ಇಲ್ಲಿನ ಲೇಖನಗಳು ಪ್ರಸ್ತಾಪಿಸುವ ಸಂಗತಿಗಳು ಬಹಳಷ್ಟು ವರ್ಷಗಳ ಹಿಂದಿನ ಕ್ಷೇತ್ರಕಾರ್ಯದ ಫಲವಾಗಿವೆ. ಹಾಗಾಗಿ ಇಂದಿನ ಪ್ರಚಲಿತ ಸಂಗತಿಗಳಿಗೆ ಹೋಲಿಸಿದರೆ ಅಷ್ಟು ಪರಿಣಾಮಕಾರಿಯಾಗುವುದಿಲ್ಲ.
೪. ಕೆಲವು ಸಂಗತಿಗಳ ಬಗ್ಗೆ ಲೇಖಕರ ತೀರ್ಮಾನಗಳು ಪೂರ್ಣ ಒಪ್ಪಿತವಾಗದೆ ಸಣ್ಣ ಪ್ರಮಾಣದ ತಿದ್ದುಪಡಿಗಳನ್ನು ಬಯಸುತ್ತವೆ. ಉದಾ: ಗಣೆ ವಾದ್ಯ ಮ್ಯಾಸ ಬೇಡರಲ್ಲಿ ಹೆಚ್ಚು ಬಳಕೆಯಲಿಲ್ಲ. ಕಾಡುಗೊಲ್ಲರಲ್ಲಿ ತಮ್ಮ ಸಾಂಸ್ಕೃತಿಕ ವೀರರ ಬಗ್ಗೆ ಹೊಂದಿರುವ ಜನಪದ ಮಹಾಕಾವ್ಯ ಪರಂಪರೆಗೆ ಸಾಟಿಯಾಗುವ ಯಾವುದೇ ಜನಪದ ಕಾವ್ಯ ಇವರಲ್ಲಿ ಹುಟ್ಟದಿರುವ ಬಗೆಗೆ ಸಾಂಸ್ಕೃತಿಕ ಶೋಧ ನಡೆಯಬೇಕಿದೆ. ಎನ್ನುವ ಈ ಮಾತುಗಳು ಪೂರ್ಣ ಸರಿಯಲ್ಲ. ಏಕೆಂದರೆ ಮ್ಯಾಸನಾಯಕರ ಅನೇಕ ಹಟ್ಟಿಗಳಲಿ ಮಳೆಯ ಭವಿಷ್ಯ ಕೇಳಲು ಅಥವಾ ಊರಿಗೆ ಯಾವುದಾದರೂ ಎಡರುಗಳು ಬಂದಾಗ ಅದರ ಕಾರ್ಯಕಾರಣ ಸಂಬಂಧಗಳನ್ನು ಕಂಡುಕೊಳ್ಳಲು ಗಣೆಗಳನ್ನು ಬಳಸುವ ಪರಿಪಾಠವಿದೆ. ಹಾಗೆಯೇ ಮ್ಯಾಸನಾಯಕರ ಸಾಂಸ್ಕೃತಿಕ ವೀರರನ್ನು ಕುರಿತು ಒಂದಾದರೂ ಮಹಾಕಾವ್ಯ ಹುಟ್ಟಿಲ್ಲ ಎಂಬುದಕ್ಕಿಂತ ಗುರುತಿಸಿಲ್ಲ ಎಂದು ಹೇಳುವುದು ಉಚಿತ. ಏಕೆಂದರೆ ಸಂಸ್ಕೃತಿಗಳೆಲ್ಲವು ತಮ್ಮ ಅಗತ್ಯಗಳನುಸಾರವಾಗಿ ಒಂದಲ್ಲ ಒಂದು ಮಾದರಿಯ ದೀರ್ಘ ಕಾವ್ಯಗಳನ್ನು ಕಟ್ಟಿಕೊಂಡಿರುತ್ತವೆ. ಸಂಶೋಧಕರು ಒಂದು ಮಹಾಕಾವ್ಯವಿಲ್ಲ ಎಂದು ಹೇಳಿರುವ ಸಮುದಾಯದೊಳಗೇ ಇತ್ತೀಚೆಗೆ ಸುಮಾರು ಆರೇಳು ಮಹಾಕಾವ್ಯಗಳನ್ನು ಗುರುತಿಸಿ ಪ್ರಕಟಿಸಲಾಗಿದೆ. (ವಿರೂಪಾಕ್ಷ ಪೂಜಾರಹಳ್ಳಿ ಅವರ ಗಾದ್ರಿಪಾಲನಾಯಕ ಮಹಾಕಾವ್ಯ ಹಾಗೂ ಎ.ಎಸ್. ಪ್ರಭಾಕರ ಅವರ ಮ್ಯಾಸ ಬೇಡರ ಕಥನಗಳು ಕೃತಿಗಳನ್ನು ಇಲ್ಲಿ ಸ್ಮರಿಸಬಹುದು) ಈ ಪ್ರಕಟಣೆಗಳಲ್ಲಿ ಕಾಣುವ ಕಾವ್ಯಗಳು ಜುಂಜಪ್ಪ – ಎತ್ತಪ್ಪನ ಕಾವ್ಯಗಳ ರೀತಿ ದೀರ್ಘವಾಗಿಲ್ಲದೇ ಇರಬಹುದು ಆದರೆ ಈಗ ದೊರೆತಿರುವ ಕಾವ್ಯಗಳಿಗೆ ಇನ್ನಷ್ಟು ಹೊಸ ಭಾಗಗಳನ್ನು ಸೇರಿಸಿದರೆ ದೀರ್ಘರೂಪ ಪಡೆಯುತ್ತವೆ. ಅಷ್ಟೇ ಅಲ್ಲದೆ ಅಧ್ಯಯನಕಾರರು ಗುರುತಿಸದೇ ಇರುವ ಅನೇಕ ದೀರ್ಘ ಕಾವ್ಯಗಳು ಮ್ಯಾಸನಾಯಕರ ಜನಮಾನಸದಲ್ಲಿ ನೆಲಸಿವೆ. ಚಳ್ಳಕೆರೆ ತಾಲ್ಲೂಕಿನ

ನಲಗೇತನಹಟ್ಟಿಯಲ್ಲಿ ಚನ್ನಯ್ಯ–ಕಾಸಯ್ಯ ಮಾರಮ್ಮ ಅವರನ್ನು ಕುರಿತಂತೆ ಸೋಬಾನೆ ರೂಪದಲ್ಲಿ ಮೂರು–ನಾಲ್ಕು ರಾತ್ರಿಗಳು ಹಾಡುವಷ್ಟ ದೀರ್ಘ ಕಾವ್ಯಗಳಿವೆ.

೫. ನಾಯಕನಹಟ್ಟಿ ತಿಪ್ಪೇಸ್ವಾಮಿ ಕುರಿತಂತೆ ಬರೆದಿರುವ ಲೇಖನದಲ್ಲಿ ಕೆಳವರ್ಗದ ಅಸಾಮಾನ್ಯ ಪುರುಷರನ್ನು ಶೈವೀಕರಣಗೊಳಿಸಿದ ಪರಂಪರೆಯ ಪ್ರಯತ್ನಗಳನ್ನು ಸರಿಯಾಗಿಯೇ ಗುರುತಿಸುತ್ತಾರೆ. ಮಂಟೇದಯ್ಯ, ಮಂಟೇಸ್ವಾಮಿ (ಧರೆಗೆ ದೊಡ್ಡವರು) ಆದದ್ದು, ಮಾದಪ್ಪ ಮಾದೇಶ್ವರನಾದುದು ಶೈವೀಕರಣದ ಪ್ರಕ್ರಿಯೆಯನ್ನು ಸೂಚಿಸುತ್ತದೆ. ಇದೇ ರೀತಿ ತಿಪ್ಪೇಸ್ವಾಮಿ ಕೂಡ ಶೈವೀಕರಣಗೊಂಡ ಕೆಳವರ್ಗದ ತಿಪ್ಪಯ್ಯ–ತಿಪ್ಪಣ್ಣನೇ ಆಗಿದ್ದಾನೆ ಎಂಬುದನ್ನು ಸಮರ್ಥಿಸುತ್ತಾರೆ. ಹಾಗೆಯೇ ಮುಂದೆ ತಿಪ್ಪಯ್ಯ ಹೆಸರು ಮ್ಯಾಸನಾಯಕರಲ್ಲಿ ಪ್ರಚಲಿತವಿದ್ದು ಆ ಹೆಸರು ತಿಪ್ಪೇಸ್ವಾಮಿಯ ಪ್ರಭಾವದಿಂದ ಬಂದದ್ದು ಎಂದು ಹೇಳುವಾಗ ವೈರುಧ್ಯತೆಗಳು ಕಂಡು ಬರುತ್ತವೆ. ಮ್ಯಾಸನಾಯಕರಲ್ಲಿ ತಿಪ್ಪ, ತಿಪ್ಪಯ್ಯ, ತಿಪ್ಪಣ್ಣ ಹೆಸರು ಮೊದಲಿನಿಂದಲೂ ಬಳಕೆಯಲ್ಲಿತ್ತು ಎಂಬುದು ನಿರ್ವಿವಾದ. ಇಂದಿಗೂ ಸಮುದಾಯ ಪ್ರಚಲಿತವಿರುವ ಕಥೆ ಹಾಗೂ ಮೌಖಿಕ ಚರಿತ್ರೆಗಳಲ್ಲಿ ಮ್ಯಾಸನಾಯಕರ ಮೂಲ ಪುರುಷರಲ್ಲಿ 'ತಿಪ್ಪಂಡಪರಾಜು' ಎನ್ನುವ ವ್ಯಕ್ತಿಯಿರುವುದಾಗಿ ತಿಳಿದು ಬರುತ್ತದೆ.

ಕೃತಿ ಹೊಂದಿರುವ ಮೌಲ್ಯಗಳ ಎದುರಿಗೆ ಇಲ್ಲಿ ಗುರುತಿಸಲಾಗಿರುವ ದೋಷಗಳು ಗೌಣವಾಗುತ್ತವೆ ಎಂಬುದು ಕೃತಿಯನ್ನು ಓದಿದ ಯಾರಾದರು ಹೇಳುತ್ತಾರೆ. ಹಾಗಾಗಿ ಈ ದೋಷಗಳು ಕೃತಿಯ ಮೌಲ್ಯಗಳಿಗೆ ದಕ್ಕೆ ತರುವುದರ ಬದಲಿಗೆ ಓದುಗರನ್ನು ಚಿಂತನೆಗೆ ಹಚ್ಚುವ ಸಾಮರ್ಥ್ಯ ಪಡೆದಿವೆ.

ಒಟ್ಟಾರೆ 'ಮ್ಯಾಸ ಮಂಡಲ' ಕೃತಿಯ ಶೀರ್ಷಿಕೆ, ಮುಖಪುಟ ವಿನ್ಯಾಸ, ಒಳಗಿನ ಸಾಂಸ್ಕೃತಿಕ ಒಳನೋಟಗಳು ಇವೇ ಮೊದಲಾದ ಉತ್ತಮ ಗುಣಗಳನ್ನು ಹೊಂದಿ ಒಂದು ಸಾಂಸ್ಕೃತಿಕ ಮಹತ್ವವುಳ್ಳ ಕೃತಿಯಾಗಿ ರೂಪುಗೊಂಡಿದೆ. ಡಾ. ಮೀರಾಸಾಬಿಹಳ್ಳಿ ಶಿವಣ್ಣ ಅವರನ್ನು ಬುಡಕಟ್ಟು ಅಧ್ಯಯನ ಇತಿಹಾಸದಲ್ಲಿ ಅಜರಾಮರವಾಗಿಸುವ ಸಾಮರ್ಥ್ಯವುಳ್ಳ ಕೃತಿ ಇದಾಗಿದೆ. ಅಷ್ಟೇ ಅಲ್ಲ ಸ್ವಂತ ಸಂಸ್ಕೃತಿಗೇ ಅನೇಕ ಮಹತ್ವದ ಪ್ರಯೋಜನವಾಗುವಂತಹ ವಿಚಾರಗಳನ್ನು ಹೊಂದಿದೆ. ಈ ಕಾರಣಕ್ಕಾಗಿ ಜಾನಪದ ಅಧ್ಯಯನಕಾರರು, ಮ್ಯಾಸನಾಯಕ ಬುಡಕಟ್ಟಿನ ಜನತೆ ಸದಾ ಕೃತಜ್ಞರಾಗಿರಬೇಕಾಗುತ್ತದೆ. ಇಂಥ ಮಹತ್ವದ ಕೆಲಸಮಾಡಿದ ಡಾ. ಮೀರಾಸಾಬಿಹಳ್ಳಿ ಶಿವಣ್ಣ, ಅವರಿಗೂ, ಬಿಡಿ ಬಿಡಿಯಾಗಿ ಹಂಚಿಹೋಗಿದ್ದ ಇವರ ಲೇಖನಗಳನ್ನು ಒಂದೆಡೆ ತಂದು ಪ್ರಕಟಿಸಿದ ಪುಸ್ತಕ ಪ್ರಾಧಿಕಾರದ ಅಧ್ಯಕ್ಷರಿಗೂ ಮತ್ತು ಪದಾಧಿಕಾರಿಗಳಿಗೂ ಓದುಗರ ಪರವಾಗಿ ಅನಂತ ಧನ್ಯವಾದಗಳು.

# ಮ್ಯಾಸನಾಯಕರ ಸಂಪ್ರದಾಯ ಮತ್ತು ಆಚರಣೆಗಳು

ಜನಪದ ಸಮುದಾಯಗಳಲ್ಲಿ ಪ್ರಚಲಿತವಿರುವ ಸಂಪ್ರದಾಯ ಆಚರಣೆಗಳು ಕೇವಲ ಕಾಲ್ಪನಿಕವಾದವುಗಳಲ್ಲ. ಅವುಗಳಿಗೆ  ನಿರ್ದಿಷ್ಟವಾದ ಸ್ವರೂಪ, ಕಾರ್ಯಗಳು ಇರುತ್ತವೆ. 'ಮಾನವ ಜೀವನವನ್ನು ರೂಪಿಸುವಲ್ಲಿ ಸಂಸ್ಕೃತಿಯನ್ನು ಪೋಷಿಸುವಲ್ಲಿ, ನಾಗರಿಕತೆಯನ್ನು ಬೆಳೆಸುವಲ್ಲಿ ಇಂಥ ಸಂಪ್ರದಾಯ ಆಚರಣೆಗಳಿಗೆ ವಿಶೇಷ ಮಹತ್ವವಿದೆ'(ದೇ.ಜ.ಗೌ,ಜಾನಪದ ಅಧ್ಯಯನ,೨೦೦೧,ಕ.ಪು.ಪ್ರ, ಬೆಂಗಳೂರು ಪುಟ: ೩೪೨). ಮಾನವನ ಜೀವನದ ನಡವಳಿಕೆ ಹಾಗೂ ವ್ಯವಹಾರಗಳು ಸಂಪ್ರದಾಯಬದ್ಧವಾಗಿಯೇ ನಡೆಯುತ್ತವೆ.  ಈ ಹಿನ್ನೆಲೆಯೊಳಗೆ ಪಶುಪಾಲಕ ಸಮುದಾಯಗಳಲ್ಲಿ ಬಳಕೆಯಲ್ಲಿರುವ ಸಂಪ್ರದಾಯ ಮತ್ತು ಆಚರಣೆಗಳನ್ನು ಗಮನಿಸಿದರೆ ಅವೆಲ್ಲವೂ ಈ ಸಮುದಾಯಗಳ ವೃತ್ತಿಜೀವನ ಹಾಗೂ ಧಾರ್ಮಿಕ ಸಂಗತಿಗಳನ್ನು ಒಳಗೊಂಡಿವೆ. ಚರಿತ್ರೆಯಲ್ಲಿ ಸಮುದಾಯಗಳ ಒಳಗೆ ನಡೆದ ಮಹತ್ವದ ಘಟನೆ ಹಾಗೂ ತೀರ್ಮಾನಗಳನ್ನು ಆಚರಣಾತ್ಮಕ ನೆಲೆಯಲ್ಲಿ ತಮ್ಮ ಸ್ಮೃತಿಯಲ್ಲಿ ಉಳಿಸುವ ಅಷ್ಟೇ ಅಲ್ಲದೆ ಅವುಗಳನ್ನು ಮುಂದಿನ ತಲೆಮಾರಿಗೆ ರವಾನಿಸುವ ಆಶಯಗಳನ್ನು ಹೊಂದಿರುವುದು ಕಾಣುತ್ತದೆ. ಈ ಹಿನ್ನೆಲೆಯೊಳಗೆ ನಮ್ಮ ಈ ಅಧ್ಯಯನ ವ್ಯಾಪ್ತಿಗೆ ಬರುವ ಕಾಡುಗೊಲ್ಲ ಹಾಗೂ ಮ್ಯಾಸ ಬೇಡರ ಸಮುದಾಯಗಳಲ್ಲಿ ಕಂಡುಬರುವ ಸಂಪ್ರದಾಯ ಆಚರಣೆಗಳನ್ನು ಪಶುಪಾಲಕ ಸಂಸ್ಕೃತಿಯ ಸ್ವರೂಪವನ್ನು ತಿಳಿಯುವ ಆಕರಗಳಾಗಿ ಈ ಮುಂದಿನಂತೆ ಪರಿಶೀಲಿಸಬಹುದು.

ಕಿಲಾರಿ ಸಂಪ್ರದಾಯ

ಕಿಲಾರಿ ಸಂಪ್ರದಾಯ ಮ್ಯಾಸ ನಾಯಕರಲ್ಲಿ ಕಂಡು ಬರುವ ವಿಶಿಷ್ಟ ಸಂಪ್ರದಾಯವಿದು. 'ಕಿಲಾರಿ' ಎನ್ನುವುದು ಸಾಮಾನ್ಯ ಪದ. ಈ ಸಮುದಾಯಗಳಲ್ಲಿ ಕುರಿ ಕಿಲಾರಿ, ದನಗಳ ಕಿಲಾರಿ, ಎತ್ತಿನ ಕಿಲಾರಿ ಎನ್ನುವ ಪದ ಬಳಕೆ ಸಾಮಾನ್ಯವಾಗಿದೆ. ಕುರಿ ಕಾಯುವವನಿಗೆ ಕುರಿ ಕಿಲಾರಿ ಅಂದ್ರೆ. ಎತ್ತು ಕಾಯುವವನಿಗೆ ಎತ್ತಿನ ಕಿಲಾರಿ ಎನ್ನುತ್ತಾರೆ. ಇಲ್ಲಿ ಕಿಲಾರಿ ಎಂದ್ರೆ ಕಾಯುವವರು ಎಂದರ್ಥವಾಗುತ್ತದೆ. ಎತ್ತಿನ ಕಿಲಾರಿ ಎನ್ನುವುದು ಒಂದು ಧಾರ್ಮಿಕ ಚೌಕಟ್ಟಿನೊಳಗೆ ಸೇರಿ ಭಕ್ತಿಪೂರ್ವಕವಾದ ಗೌರವವನ್ನು ಪಡೆದುಕೊಂಡಿದೆ. ಅಡವಿ ವಾಸಿಯಾಗಿ ತಿರುಗುವ ಈ ಕಿಲಾರಿತನ ಯಾರಿಗೆ

ಬೇಡವೆನಿಸಿದರೂ ಆ ಕಿಲಾರಿಗಳಿಗೆ ದೇವರುಗಳ ಸಂದರ್ಭದಲ್ಲಿ ಸಿಗುವ ಸ್ಥಾನಮಾನಗಳು ಯಾರನ್ನಾದರೂ ಆಕರ್ಷಿಸುವಂತಹವು. ಕಿಲಾರಿಗಳು ಹೆಚ್ಚು ಮಡಿವಂತಿಕೆಯ ಮನೋಭಾವ ಹೊಂದಿದ್ದಾರೆ. ಅವರು ಬಸ್ ಹತ್ತುವುದಿಲ್ಲ. ಪಟ್ಟಣಗಳಿಗೆ ಹೋಗುವುದಿಲ್ಲ. (ಇತ್ತೀಚಿಗೆ ಹೋಗುತ್ತಾರೆ) ಹೋದ್ರು ಯಾರ ಕೈಯಲ್ಲಿ ಏನೂ ತಿನ್ನುವುದಿಲ್ಲ. ಮೈಗೆ ಅಂಗಿ ಧರಿಸುವುದಿಲ್ಲ. ತಲೆ ಕ್ಷೌರ ಮಾಡಿಸುವುದಿಲ್ಲ. ಬೇರೆ ಯಾವುದೇ ಜಾತಿಯ ಜನರ ಹತ್ತಿರ ಮೈಮುಟ್ಟಿಸಿಕೊಳ್ಳುವುದಿಲ್ಲ.

ದೇವರ ಎತ್ತುಗಳು :

ಮ್ಯಾಸನಾಯಕರಲ್ಲಿ ದೇವರ ಎತ್ತುಗಳನ್ನು ಮುತ್ತಯ್ಯಗಳೆಂದು ಕರೆಯುತ್ತಾರೆ. ಇವರಿಗೆ ಮುತ್ತಯ್ಯಗಳೆ ಗುರುಗಳು. ಮ್ಯಾಸನಾಯಕರಲ್ಲಿ ಹಲವು ಉಪಪಂಗಡಗಳಿದ್ದು ಅವರೆಲ್ಲರ ಹತ್ತಿರವೂ ದೇವರೆತ್ತುಗಳಿರುತ್ತವೆ. ಎಲ್ಲಾ ಗುಂಪಿನ ದೇವರ ಎತ್ತುಗಳನ್ನು ಮುತ್ತಯ್ಯಗಳೆಂದು ಕರೆಯುವುದಿಲ್ಲ. ಈಗಿರುವ ಮ್ಯಾಸ ನಾಯಕರ ದೇವರ ಎತ್ತುಗಳ ಹಲವು ಗುಂಪುಗಳಲ್ಲಿ ಮೂರು ಗುಂಪುಗಳನ್ನು ಬಿಟ್ಟರೆ ಉಳಿದವೆಲ್ಲವು ಬರೀ ದೇವರಎತ್ತುಗಳು ಅನಿಸಿಕೊಂಡಿವೆ. ಮತ್ತಯ್ಯಗಳೆನಿಸಿರುವ ಮೂರು ಗುಂಪುಗಳೆಂದರೆ ನಲಗೇತಲ ಮುತ್ತಯ್ಯಗಳು, ನನ್ನಿವಾಳದ ಮುತ್ತಯ್ಯಗಳು, ಪದಿ ಮುತ್ತಯ್ಯಗಳು. ಇವುಗಳಲ್ಲಿ ನಲಗೇತಲ ಮುತ್ತಯ್ಯಗಳು ಅತ್ಯಂತ ಶಕ್ತಿಶಾಲಿ ಹಾಗೂ ಪವಿತ್ರವಾದವು ಎಂಬುದಾಗಿ ನಂಬುತ್ತಾರೆ. ಇದಕ್ಕೆ ಸಮುದಾಯದ ಹಿರಿಯರು ಕೊಡುವ ಕಾರಣವೆಂದರೆ : “ಈ ಗುಂಪುಗಳ ಮಧ್ಯೆ ಒಂದು ಪಂದ್ಯ ನಡೆಸಿದ್ದರಂತೆ. ಆ ಪಂದ್ಯದಲ್ಲಿ ಪದಿಮುತ್ತಯ್ಯಗಳು, ನನ್ನಿವಾಳದ ಮುತ್ತಯ್ಯಗಳು ಸೋತವಂತೆ. ನಲಗೇತಲ ಮುತ್ತಯಗಳು ಕಷ್ಟಪಟ್ಟು ಗೆದ್ದವಂತೆ. ಈ ಗೆದ್ದ ಮುತ್ತಯ್ಯಗಳೇ ನಮ್ಮವು ನಲಗೇತಲ ಮುತ್ತಯ್ಯಗಳು. ಇವು ಈ ಪಂದ್ಯವನ್ನು ಗೆಲ್ಲದಿದ್ರೆ ಇಡೀ ಮ್ಯಾಸ ಮಂಡಲವೇ ಬೇರೆ ಯಾರೋ ಹಿಡಿತಕ್ಕೆ ಸಿಕ್ಕಿ ಬಿಡ್ತಿತ್ತಂತೆ. ಈ ಪಂದ್ಯ ಎಂಗೆ ನಡೀತು ಅಂದ್ರೆ, ಬೋರೇದೇವರ ಗುಡಿ (ಖುದಾಪುರದ ಹತ್ತಿರ) ಐತಲ್ಲ, ಅಲ್ಲಿ ಒಂದ್ಸಲ ಮೂರು ನಾಮದವನು ಏಳು ಚಪ್ಪರ'ದವನು(ಎರಡು ಬೆಡಗುಗಳು) ಪಂದ್ಯವನ್ನು ಕಟ್ಟಿದ್ರಂತೆ. ಆವಾಗ ಆಗ್ಲೆ ಈ ಮೂರು ಗುಂಪಿನ ಮುತ್ತಯ್ಯಗಳು ಬೇರೆ ಬೇರೆ ಇದ್ವು. ಆವಾಗ ಈ ಪಂದ್ಯವನ್ನು ಹಾಕಿದರು. ನಮ್ಮ ನಲಗೇತಲೋರು ನಮಗೆ ನಮ್ಮ ಮುತ್ತಯ್ಯಗಳೆ ಗುರುಗಳು ಎಂದು ಹೇಳಿದರು. ಆದರೆ ಈ ಮೂರು ನಾಮದವನು, ಏಳು ಆಂದಾಳ್ಲವನು ಎಲ್ಲ ಮ್ಯಾಸ ಮಂಡಲಕ್ಕೆ ಗುರುವಾಗ್ಬೇಕು ಅಂತ, ಮ್ಯಾಸ ಮಂಡಲದವರೆಲ್ಲ ನಮಗೆ ಕಪ್ಪು ಕಾಣಿಕೆ (ಕಪ್ಪ ಕಾಣಿಕೆ) ಕೊಡಬೇಕು ಅಂತ ಅವರ್ದು. ಆಗ ಚಿಂತಗುಂಟ್ಲು ನೋಮಲ್ಲಿ ಪಂದ್ಯ ಕಟ್ಟುತ್ತೇವೆ. ಅವುಗಳಲ್ಲಿ ನಿಮ್ಮ ಮುತ್ತಯ್ಯಗಳು ಗೆದ್ದರೆ ಅವೇ ಗುರುಗಳು ಅಂತ ಮೂರು ನಾಮದವನು, ಏಳು ಚಪ್ಪರದವನು ಅಂದರು. ಆವಾಗ ಮತ್ತೆ ಕಟ್ಟಿ ಅಂದ್ರು, ಕಟ್ಟಿದರು. ಅವರು ಪಂಡಿತರಂತೆ ತಡಿ–ಮುಡಿ ಎಲ್ಲ ಹಾಕಿಕೊಂಡು ಮುತ್ತಯ್ಯಗಳನ್ನು ಪಂದ್ಯಕ್ಕೆ ಬಿಡಿಸಲು ಸಿದ್ಧವಾದರು. ಇದು ಎಂತ ಪಂದ್ಯ ಅಂದ್ರೆ ಮುತ್ತಯ್ಯಗಳನ್ನು ಮೆರೆಸುವ (ಓಡಿಸುವುದು) ಹಾದಿಗೆ ಅಡ್ಡ ವಿಷದ ಕಾಲುವೆ ಹರಿಸುವುದು. ಮತ್ತೆ ಅಡ್ಡ ಗಂಡಕತ್ತರಿಗಳನ್ನು ನಿಲ್ಲಿಸುವುದು. ಇವೆಲ್ಲವನ್ನು ದಾಟಿ ಮುತ್ತಯ್ಯಗಳು ಓಡಬೇಕು, ಆವಾಗ ಗೆದ್ದಂಗೆ. ಪಂದ್ಯದಲ್ಲಿ ಮೊದಲ ದಿನ ಪದಿ ಮುತ್ತಯ್ಯಗಳನ್ನು

ಬಿಟ್ಟರಂತೆ. ಹಿಂಗೆ ಮೂರು ದಿನಗಳ ಕಾಲ ಬಿಟ್ರೂ ದಾಟಿ ಹೋಗಾಕೆ ಆಗದೆ ಹಿಂದಕ್ಕೆ ಬಂದ್ವಂತೆ, ಆಮೇಲೆ ನನ್ನಿವಾಳದ ಮುತ್ತಯ್ಯಗಳನ್ನು ಬಿಟ್ಟರಂತೆ, ಅವೂ ಮೂರು ದಿನ ಹೋಗಿ ಮೂರು ದಿನಾನು ವಾಪಾಸ್ಸು ಬಂದ್ವಂತೆ. ಕೊನೆಗೆ ನಲಗೇತಲ ಮುತ್ತಯ್ಯಗಳನ್ನು ಬಿಟ್ಟರಂತೆ. ಇವು ಕೂಡ ಎರಡು ದಿನ ಹಿಂದಕ್ಕೆ ಬಂದ್ವಂತೆ. ಮೊದಲಿನ ಎರಡು ಗುಂಪು ಸೋತಿದಾವೆ ನಮ್ಮ ಗುಂಪು ಗೆದ್ದೇ ಗೆಲ್ತದೆ. ಅಂತ ಧೈರ್ಯದಿಂದ  ಇದ್ದ ನಲಗೇತಲದವರಿಗೆ ಚಿಂತೆ ಆಯಿತು. ಆವಾಗ ಹಿರೇಕೆರೆ (ನಾಯಕನಹಟ್ಟಿ ಹಿರೇಕೆರೆ) ಹತ್ತಿರ ಇರುವ ಕಕ್ಕೆಮರದ ಹತ್ತಿರ ಗೂಡಾಕಿದ್ದರಂತೆ, ಅವೊತ್ತು ಎತ್ತಿನ ಕಿಲಾರಿ ಯೋಚನೆ ಮಾಡ್ಕೊಂಡು ಕುಂತಿದ್ನಂತೆ. ಅವೊತ್ತು ಬುಡುಬುಡಿಕೆಯವನು ನೇರ್ಲಗುಂಟೆಯಿಂದ ಗೂಡಿಗೆ ಒಳ್ಳೆ ಕಲ್ಲು ಕರಗೋವೊತ್ತಿನಾಗೆ ಬಂದ್ನಂತೆ–ಗೂಡಾಕಿದ್ದ ಜಾಗಕ್ಕೆ. ಅವನತ್ರ ಆಲಕ್ಕಿ ಇತ್ತಂತೆ. ನಾಳೆ ಗೊಂಬೆತ್ತು ಹೊತ್ತು ಹುಟ್ಟೋವೊತ್ತಿಗೆ ನಲಗೇತಲ ಮುತ್ತಯ್ಯಗಳನ್ನು ಪಂದಕ್ಕೆ ಬಿಡಕೆ ಹೇಳು, ಗೆಲ್ಲತ್ವೆ ಅಂಥ ಆಲಕ್ಕಿ ಬುಡುಬುಡಿಕೆಯವನಿಗೆ ಹೇಳ್ತಂತೆ. ಆವಾಗ ಅವನು ಇನ್ನೇನು ನೇರ್ಲಗುಂಟೆಯಿಂದ ಹಿರೇಕೆರೆ ಹತ್ತಿರದ ನಲಗೇತಲ ಮುತ್ತಯ್ಯನ ಗೂಡಿಗೆ ಬಂದ್ನಂತೆ. ಬಂದು ಗೂಡಿನ ಮುಂದೆ ನಿಂತು ಬುಡುಬುಡು ಅಂದ್ನಂತೆ. ಆವಾಗ ಕಿಲಾರಿ ಯಾರವನು ಎಂದ್ನಂತೆ. ನಾನು ಬುಡುಬುಡಿಕೆಯವನು ಕಣಪ್ಪ; ಒಂದು ಸ್ವಲ್ಪ ನೀರನ್ನಾದರೂ ತಾರಪ್ಪ ಅಂದ್ನಂತೆ. ಆವಾಗ ಕಿಲಾರಿ ಹೋಗೋ ನಂದೆ ನನಗಾಗೈತೆ ನಾನೆಲ್ಲಿ ನೀರು ತರಲಿ ಅಂದ. ಆವಾಗ ಬುಡುಬುಡಿಕೆಯವನು ನಿನ್ ಕಷ್ಟವೇನೇ ಬರಲಿ ನಾನು ನಿವಾರಿಸ್ತೀನಿ ನೀರು ತಾರಪ್ಪ ಅಂತ ಅಂದ್ನಂತೆ ಆವಾಗ ಕಿಲಾರಿ ನೀರು ತಂದ್ನಂತೆ. ನಾಳೆ ಎಷ್ಟೊತ್ತಾಗಲಿ ಗೊಂಬೆತ್ತು ಏರುವ ವೊತ್ತಿಗೆ ನೀನು ಈಜು(ಮೆರಿಸುವುದು) ಬಿಡುಬೇಕು ಕಣಪ್ಪ, ನೀನು ಗೆಲ್ತೀಯ ಅಂದ್ನಂತೆ ಬುಡುಬುಡಿಕೆಯವನು. ಅಂಗಾದ್ರೆ ನೀನು ಈ ವೋತ್ತು ಇಲ್ಲೇ ಇರು, ನಾಳೆ ಹೋಗಿಬಿಡವಂತೆ ಅಂದು ಆವೊತ್ತು ಅವುನ್ನ ಅಲ್ಲೇ ಉಳಿಸಿಕೊಂಡು ಬೆಳಗ್ಗೆ ಎದ್ದು ಹೋದ್ರಂತೆ. ಗೊಂಬೆತ್ತು ಏರೂವೊತ್ತಗೆ ಮುತ್ತಯ್ಯಗಳನ್ನು ಪಂದ್ಯದಲ್ಲಿ ಈಜುಬಿಟ್ರಂತೆ. ಅವೊತ್ತು ನಲಗೇತಲ ಮುತ್ತಯ್ಯಗಳು ಪಂದ್ಯದಲ್ಲಿ ಗೆದ್ವಂತೆ. ನಮ್ಮ ನಲಗೇತಲ ಮುತ್ತಯ್ಯಗಳು ಓಡುವ ನಿಬ್ಬರಕ್ಕೆ ಅವರು ಇಟ್ಟ ಗಂಡಕತ್ತರಿಗಳು ಅವೆಲ್ಲ ಹದ್ದುಗಳಾರಿದಂತೆ ಹಾರಿ ಹೋದವಂತೆ. ವಿಷ ಕಲೆಸಿದ ಕಾಲುವೆ ಇತ್ತಲ್ಲ, ಅದರಲ್ಲಿ ಒಂದು ಎತ್ತು ಮತ್ತು ಆಕಳ ನೀರು ಕುಡಿದುಬಿಟ್ವಂತೆ. ಅಷ್ಟೊತ್ತಿಗೆ ಅವುಗಳ ಜೊತೆ ಓಡಿದ ಕಿಲಾರಿಗೆ ಮೊಣಕಾಲ ಚಿಪ್ಪುಗಳು ಹೋಗಿ ಬಿಟ್ವಂತೆ. ಆವಾಗ ಎರಡು ಎತ್ತುಗಳು ಅವನ್ನು ಕೊಂಬಿನಲ್ಲಿ ಎತ್ತಿಕೊಂಡು ಕಾಲುವೆಯನ್ನು ದಾಟಿ ಹೋದವು. ಆವಾಗ ಆ ಕಡೆ ಭೂಮಿ ಇಬ್ಭಾಗವಾಗಿ ಹೋಯಿತು. ಅದರೊಳಗೆ ಆ ಕಿಲಾರಿ ಮತ್ತು ಆ ಎರಡು ಎತ್ತುಗಳು ಒಳಗೆ ಹೋದವು. ಅಂಗೆ ಭೂಮಿ ಮತ್ತೆ ಮುಚ್ಚಿಕೊಳ್ತು. ಆ ಮುಚ್ಚಿಕೊಂಡ ಜಾಗವನ್ನು 'ಮೂಗಮಾಲೆ' ಅಂತ ಕರೆಯುತ್ತಾರೆ. ಆ ಮೂಗಮಾಲೆ ಇರುವ ಜಾಗದಲ್ಲಿ ಒಂದು ಬಂಡೆ ಇದೆ. ಬೋರೇದೇವರಿಗೆ ಹೋಗುವ ನಮ್ಮೂರಿನ ಜನರೆಲ್ಲ ಮೊದಲು 'ಮೂಗಮಾಲೆಗೆ ಮೀಸಲು ಹಾಕಿ ಪೂಜೆ ಮಾಡಿಕೊಂಡು ಬರುತ್ತಾರೆ"(ಕಿಲಾರಿ, ಪುಟ:    )

ಈಗಿರುವ ದೇವರ ಎತ್ತುಗಳಲ್ಲಿ ಕೆಲವು ಪೂರ್ವದಿಂದ ಬಂದವುಗಳಾದರೆ ಇನ್ನು ಕೆಲವು ಇತ್ತೀಚೆಗೆ ಭಕ್ತರು ಬಿಟ್ಟವು. ಭಕ್ತರಿಗೆ ಏನಾದರೂ ಕಷ್ಟ ಬಂತು ಅಂದ್ರೆ ಮುತ್ತಯ್ಯಗಳಿಗೆ ಒಂದು ಸುರುಬು

ಬಿಡುತ್ತೇವೆ ಅಂತ ಹರಕೆ ಕಟ್ಟಿಕೊಳ್ಳುತ್ತಾರೆ. ಹಿಂಗೆ ಭಕ್ತರು ಬಿಡುವ ಎತ್ತುಗಳನ್ನು ಅವರಲ್ಲಿರುವ ತ್ರಿಶೂಲ, ಬಿಲ್ಲು, ಬಾಣ, ಸೂರ್ಯ, ಚಂದ್ರ ಆಕಾರದ ಮುದ್ರೆಕೋಲುಗಳ ಮೂಲಕ ಮುದ್ರೆ ಆಕುವುದರ ಮೂಲಕ ಸಾಮಾನ್ಯ ಎತ್ತುಗಳನ್ನು ದೈವ ಸ್ವರೂಪಿ ಮುತ್ತಯ್ಯಗಳಾಗಿ ಮಾಡಿಕೊಳ್ಳುತ್ತಾರೆ. ಅವುಗಳಲ್ಲಿ ಸೂರ್ಯ–ಚಂದ್ರನ ಮುದ್ರೆಗಳನ್ನು ಎಲ್ಲ ಎತ್ತುಗಳಿಗೂ, ಆಕಳುಗಳಿಗೂ ಹಾಕ್ತಾರೆ. ಬಿಲ್ಲು, ಬಾಣ ತ್ರಿಶೂಲ ಇವುನ್ನೆಲ್ಲ ಬರೀ ಎತ್ತುಗಳಿಗೆ ಮಾತ್ರ ಹಾಕುತ್ತಾರೆ. ಭಕ್ತರು ಬಿಟ್ಟ ಎತ್ತುಗಳಿಗೆ ಅಲ್ಲದೇ ದೇವರ ಎತ್ತುಗಳ ಗುಂಪಿನಲ್ಲೇ ಹುಟ್ಟಿದ ಎತ್ತುಗಳಿಗೂ ಕೂಡ ಈ ಮುದ್ರೆಗಳನ್ನು ಹಾಕ್ತಾರೆ.

ಹೀಗೆ ಮುದ್ರೆ ಹಾಕುವ ಕೆಲಸ ಸಾಮಾನ್ಯವಾಗಿ ನಡೆಯದೇ ಸಂಪ್ರದಾಯ ಬದ್ಧವಾಗಿ ನಡೆಯುತ್ತದೆ. ಈ ಪ್ರಕ್ರಿಯೆಯಲ್ಲಿ ಮುಖ್ಯವಾಗಿ ದೇವರ ಮನೆಮುಂದೆ ಕುಳ್ಳು ಹಾಕಿ ಬೆಂಕಿ ಹಚ್ಚಿ ಅದರಲ್ಲಿ ಈ ಮುದ್ರೆ ಕೋಲುಗಳನ್ನು ಇಟ್ಟು ಕಾಯಿಸುತ್ತಾರೆ. ಬೆಂಕಿಗೆ ಕುಳ್ಳನ್ನು ಚನ್ನಪ್ನೋರು ಕುಲದವರು ತರಬೇಕು ಎಂಬುದು ನಿಯಮ. ಮುದ್ರೆ ಕೋಲುಗಳು ಚನ್ನಾಗಿ ಕಾಯೋವೊತ್ತಿಗೆ ಎತ್ತುಗಳನ್ನು ಕಾಲುರಿ ಹಾಕಿ ಕೆಡವಿ ಕಾಲು ಕಟ್ಟಿಕೊಂಡು ರೆಡಿಯಾಗಿರುತ್ತಾರೆ. ಎತ್ತುಗಳ ಹಿಂದಿನ ಕಾಲುಗಳ ತೊಡೆಯ ಮೇಲೆ ಕಾದ ಮುದ್ರೆಯನ್ನು ಒತ್ತುತ್ತಾರೆ. ಹಿಂಗೆ ಹಾಕಿದಾಗ ಆ ಜಾಗ ಎಲ್ಲ ಸುಟ್ಟಿರುತ್ತೆ. ಅಂಗೆ ಸುಟ್ಟ ಕರಕನ್ನು, ಗಿಡ ಹಾಗೂ ಮಜ್ಜಿಗೆಯನ್ನು ಕಲಸಿದ ಮಗೆಯಲ್ಲಿ ಬೀಳಿಸಿಕೊಳ್ಳುತ್ತಾರೆ. ಗಿಡ, ಮಜ್ಜಿಗೆ ಕಲಸಿದ ರಸವನ್ನು ಸುಟ್ಟ ಆ ಜಾಗದ ಮೇಲೆ ಹೊಯ್ದು ಮತ್ತೆ ಅದನ್ನು ಮಗೆಯೊಳಗೆ ಎಳೆದುಕೊಳುತ್ತಾರೆ. ಆಮೇಲೆ ದೇವರ ಕೆಲಸದ ಮೆಲೆ ಕಾಳಜಿ ಇರುವಂತಹವರ ಹತ್ತಿರ ಸವುರು ಹಾಕಿಸುತ್ತಾರೆ. ಎತ್ತುಗಳು ದೇವರ ಕೆಲಸಕ್ಕೆ ಚೆನ್ನಾಗಿ ಬರಬೇಕು ಎನ್ನುವುದಕ್ಕಾಗಿ ಈ ಸುವುರು ಹಾಕುತ್ತಾರೆ. ಸವುರು ಹಾಕುವುದು ಕೂಡ ಒಂದು ನಿಯಮಬದ್ಧ ಕಾರ್ಯವಾಗಿದು ಅದರ ಪ್ರಕ್ರಿಯೆ ಹೀಗಿರುತ್ತದೆ. “ಕಟ್ಟಿ ಕೆಡಿವಿದ್ದ ಎತ್ತು ಅಂಗೆ ಬಿದ್ದಿರುತ್ತೆ. ನಿಮ್ಮಂಥವರಿಗೆ ಕಂಬ್ಳಿ ಹೊದಿಸಿ ಕೈಗೆ ಸುಟ್ಟ ಕರುಕು, ಗಿಡ, ಮಜ್ಜಿಗೆಯಿಂದ ಮಾಡಿರ್ತಿವಲ್ಲ ಅದು ಇರುವ ಮಗೆಯನ್ನು ಕೊಟ್ಟು, ಜೊತೆಗೆ ಒಂದು ಕೋಲನು ಕೊಡ್ತಾರೆ. ಇವೆಲ್ಲವನ್ನೂ ಹಿಡಿದು ಕೇ...ಅಂಥ ಮೂರು ಸುತ್ತು ಬಿದ್ದ ಎತ್ತಿನ ಸುತ್ತ ತಿರುಗಬೇಕು. ಅಲ್ಲಿ ಸುತ್ತಾ ನಿಂತ ಜನ ಸವುರು ತಿರುಗುವವನ ಬೆನ್ನಿಗೆ ದಫ್ ದಫ್ ಅಂತ ಹೊಡಿತಾರೆ. ಆಗ ಯಜಮಾನ ಅಲ್ಲೇ ಕುಳಿತಿರುತ್ತಾನೆ. ಸಾರು ಹೊತ್ತು ತಿರುಗುವವನು ಹಿಂದಕ್ಕೆ ತಿರುಗಿ ನೋಡಂಗಿಲ್ಲ. ಮುಂದ್ಲ ಮುಖದಾಗೆ ನಡೀಬೇಕು. ಅಲ್ಲಿ ಕುಂತಿದ್ದ ಯಜಮಾನ ತಿರುಗುವವನ ಕೈಯಲ್ಲಿರುವ ಸೌರನ್ನು ಎತ್ತಿನ ಬಾಯಿಗೆ, ಮೂಗು ಸೊಳ್ಳೆಗಳಿಗೆ ಬಿಡ್ತಾರೆ. ಕೊಂಬುಗಳಿಗೆ ಸವುರುತ್ತಾರೆ.” (ಕಿಲಾರಿ, ಪುಟ : )

ಕುಲ ಕೆಟ್ಟವರಿಗೆ ನೀರಾಕುವ ಸಂಪ್ರದಾಯ

ಬುಡಕಟ್ಟುಗಳಲ್ಲಿ ಕುಲದ ಪಾವಿತ್ರ್ಯ ಬಹಳ ಮುಖ್ಯ. ಬೇರಾವುದೇ ವಿಷಯಕ್ಕಿಂತ ಕುಲದ ಶುದ್ಧತೆಯ ಬಗ್ಗೆ ಇವರಿಗೆ ಇನ್ನಿಲ್ಲದ ಕಾಳಜಿ. ಹಾಗಾಗಿ ಗುಂಪಿನಲ್ಲಿ ಯಾವುದಾದರೂ ಕುಲಕ್ಕೆ ವಿರೋಧವಾಗುವ ಕೆಲಸ ನಡೆದರ ಅದನ್ನು ಮಾಡಿದವರನ್ನು ಕುಲದಿಂದಲೇ ಹೊರಗಿಡುವ ಸಂಪ್ರದಾಯವಿರುತ್ತದೆ. ಮ್ಯಾಸನಾಯಕರಲ್ಲೂ ಇಂಥ ಹಲವು ಸಂಪ್ರದಾಯಗಳಿವೆ. ಇಲ್ಲಿ ಗಮನಿಸ ಬೇಕಾದ ಅಂಶವೆಂದರೆ ಕುಲಕೆಟ್ಟು ಹೊರಗಾದವರನ್ನು ಹಾಗೆಯೇ ಹೊರಗಿಡುವ ಪದ್ಧತಿ ಹಲವಾರು ಸಂದರ್ಭಗಳಲ್ಲಿ ಎಷ್ಟೇ ಕಟ್ಟು ನಿಟ್ಟಾದರೂ ಕೆಲವೊಮ್ಮೆ ಅಂಥ ಕುಲದಿಂದ ಹೊರಗಾದವರನ್ನೂ ಒಳಗೆ ಕರೆದುಕೊಳ್ಳುವ ಮಾನವೀಯ ನೆಲಗಳು ಇವೆ. ಇಂಥ ಸಂದರ್ಭದಲ್ಲಿ ಮ್ಯಾಸನಾಯಕರ ಸಂಸ್ಕೃತಿಯಲ್ಲಿ ದೇವರ ಎತ್ತುಗಳ ಗೂಡು ಮತ್ತು ದೇವರೆತ್ತುಗಳ ಗೋ ಮೂತ್ರ ಪ್ರಧಾನ ಪಾತ್ರವಹಿಸುತ್ತದೆ. ಇಂಥ ಪದ್ಧತಿಗಳಲ್ಲಿ ಚಪ್ಪಲಿಯಲ್ಲಿ ಹೊಡೆದಾಡಿ ಕುಲಗೆಟ್ಟವರನ್ನು ಶುದ್ಧೀಕರಿಸಿಕೊಳ್ಳುವ ಸಂಪ್ರದಾಯ ಒಂದರ ಬಗ್ಗೆ ಮ್ಯಾಸನಾಯಕರ ದೇವರೆತ್ತಿನ ಕಿಲಾರಿ ಹೇಳಿದ ಕೆಲವು ಮಾತುಗಳನ್ನು ಇಲ್ಲಿ ಗಮನಿಸಬಹುದು. "ಚಪ್ಪಲಿಯಲ್ಲಿ ಹೊಡೆದಾಡಿದರೆ, ಹೊಡೆದವರು ಹೊಡಿಸಿಕೊಂಡವರು ಕುಲಗೆಟ್ಟಂತೆ, ಹಿಂಗೆ ಕುಲಗೆಟ್ಟವರು ಗೂಡಿಗೆ ಬಂದು ನೀರಾಕಿಸಿಕೊಂಡು ಹೋಗ್ಬೇಕು. ಆವಾಗ ಅವರು ಸಿದ್ಧಿಯಾಗ್ತಾರೆ. ನೀರು ಹಾಕಿ ಸಿದ್ಧಿ ಮಾಡುವವನು ನಾನೆ (ಕಿಲಾರಿ). ಹಿಂಗೆ ಕುಲಗೆಟ್ಟವರನ್ನು ಸಿದ್ಧಿ ಮಾಡುವುದು ಎಂಗೆ ಅಂದ್ರೆ ಚಪ್ಪಲಿಯಲ್ಲಿ ಹೊಡೆದವನು ಭತ್ಯೆ(ಧಾನ್ಯ) –ಬೇಟೆ ದಂಡ ಕೊಡಬೇಕು. ಹಿಂಗೆ ಕೊಟ್ಟ ಬತ್ತೆಯನ್ನು ಬೇಟೆಯನ್ನು ಊರಿನ ಯಜಮಾನರಿಗೆ ತಿಳಿಸಿ ಗೂಡಿಗೆ ತಗೊಂಡು ಬರಬೇಕು. ಅವೊತ್ತು ಗೂಡಲ್ಲ ಅನ್ನ ಮಾಡಿ ಮೂರು ಅಗಲು(ಎಡೆ) ಹಾಕ್ತೀವಿ. ಅಲ್ಲಿ ಪೂಜೆ ಮಾಡಿ ಯಜಮಾನನಿಗೆ ಕಾಯಿ ಕೊಟ್ಟಾಗ ಬೇಟೆ ಕಡಿಯುತ್ತಾನೆ. ಕಡಿದಾಗ ನಾನು ಮುತ್ತಯ್ಯಗಳ ತೀರ್ಥ(ಗಂಜುಲು) ಹಿಡಿದು ಪೂಜೆಗೆ ಇಟ್ಟಿರುತ್ತೇನೆ. ಆ ಮೇಲೆ ಆ ತೀರ್ಥವನ್ನು ಗೌಡರ ಕೈಗೆ ಕೊಡುತ್ತೇನೆ. ಅಲ್ಲಿಯವರೆಗೂ ಕುಲಗೆಟ್ಟವರು ಗೂಡಿನ ಹೊರಗೆ ಇರುತಾರೆ. ಆವಾಗ ಗೌಡ್ರು ಈ ತೀರ್ಥ ತಗೊಂಡು ಹೋಗಿ ಅವನಿಗೆ (ಕುಲಗೆಟ್ಟವನಿಗೆ) ಕುಡಿಸಿ, ಮೈಗೆ ಚಿಮುಕಿಸಿ ಗೂಡಿನ ಒಳಗೆ ಕರೆದುಕೊಳ್ಳುತ್ತಾನೆ. ಆಮೇಲೆ ಮಾಂಸ ಮುದ್ದೆ ಮಾಡಿರುತ್ತೇವೆ. ಆ ಮುದ್ದೆ ಉಣ್ಣುವಾಗ ಎಲ್ಲರ ಜನ್ನೆಗಳಿಂದ ಅಂದರೆ ಏಳು ಜನ ಹಿರಿಯರು ತಮ್ಮ ಜನ್ನೆಯಿಂದ ಒಂದೊಂದು ತುತ್ತನ್ನು ಕುಲಗೆಟ್ಟಿದ್ದವನಿಗೆ ಕೊಡುತಾರೆ. ಅದನ್ನು ಅವನು ತಿಂದು ಶುದ್ಧನಾಗಬೇಕು. ಹೊಡೆಸಿಕೊಂಡವರು, ಹೊಡೆದವರು ಒಂದೇ ದಿನ ಬರುವುದಿಲ್ಲ. ಬೇರೆ ಬೇರೆ ದಿನ ಬಂದು ಶುದ್ಧರಾಗಿ ಹೋಗುತ್ತಾರೆ. ಹಿಂಗೆ ಜೈಲಿಗೆ ಹೋಗಿ ಬಂದವರು ಕೂಡ ಕುಲಗೆಟ್ಟಿರುತ್ತಾರೆ. ಅವರನ್ನು ಕೂಡ ಹಿಂಗೆ ಶುದ್ದ ಮಾಡ್ತೀವಿ.

ಗೂಡಲ್ಲಿ ಮಲಗುವುದು

ದೇವರ ಎತ್ತುಗಳನ್ನು ಕೂಡಲು ಊರಿಂದ ಹೊರಗೆ ಕಳ್ಳೆಯಿಂದ ದೊಡ್ಡಿಯನ್ನು ನಿರ್ಮಿಸಿರುತ್ತಾರೆ. ಆ ದೊಡ್ಡಿಯನ್ನು ಕೇವಲ ದೊಡ್ಡಿಯೆಂದು ಭಾವಿಸುವುದಿಲ್ಲ. ಬದಲಿಗೆ ಅದನ್ನು ಗೌರವದಿಂದ ಗೂಡು ಎಂಬುದಾಗಿ ಕರೆದುಕೊಳ್ಳುತ್ತಾರೆ. ಈ ಗೂಡನ್ನು ತಿರುಪತಿಯ ಸನ್ನಿಧಿಯೆಂಬ

ನಂಬಿಕೆ ಈ ಭಕ್ತರದ್ದು. ಇಂಥ ಪವಿತ್ರ ತಾಣವಾದ ಗೂಡಲ್ಲಿ ಮಲಗುವುದು ಮ್ಯಾಸನಾಯಕರ ಸಂಪ್ರದಾಯ. ಬೇಸಿಗೆ ಕಾಲದಲ್ಲಿ ಊರಿನ ಜನರು ಗೂಡು ಮಲಗಲು ಹೋಗುತ್ತಾರೆ. ಸಾಮಾನ್ಯವಾಗಿ ಸೋಮವಾರ ಗೂಡು ಮಲಗುವುದು ಸಂಪ್ರದಾಯ. ಗೂಡಿಗೆ ಹೋಗುವವರು ಮನೆಯಿಂದ ರೊಟ್ಟಿ, ಅನ್ನ ಮಾಡಿಕೊಂಡು ಹೋಗುತ್ತಾರೆ. ಸಂಜೆ ೬–೭ ಗಂಟೆಯ ಸುಮಾರಿಗೆ ಗೂಡಿಗೆ ಹೋಗಿ ಮೊದಲು ತಾವು ತಂದ ಆಹಾರದಲ್ಲಿ ಸ್ವಲ್ಪ ದೇವರ ಎತ್ತುಗಳಿಗೆ ಕೊಡುತ್ತಾರೆ. ದೇವರ ಎತ್ತುಗಳು ತಿಂದು ಉಳಿಸಿದ ಆಹಾರವನ್ನು ಪ್ರಸಾದವೆಂದು ಭಾವಿಸಿ ಎಲ್ಲರೂ ಸ್ವಲ್ಪ ಸ್ವಲ್ಪ ತಾವು ತಿನ್ನುತ್ತಾರೆ. ಅಂದು ರಾತ್ರಿ ಗೂಡಲ್ಲಿ ಮಲಗುತ್ತಾರೆ. ಬೆಳಗ್ಗೆ ಕಿಲಾರಿ ಏನಾದರೂ ಆಹಾರ ತಯಾರಿಸುತ್ತಾನೆ. ಅದಕ್ಕೆ ಬೇಕಾಗಿರುವ ನುಚ್ಚು, ಹಿಟ್ಟು, ಸಾರಿನ ಕಾಳು, ಮೆಣಸಿನಕಾಯಿ ಮೊದಲಾದ ಪರಿಕರಗಳನ್ನು ಭಕ್ತರೇ ತಂದಿರುತ್ತಾರೆ. ಗೂಡಲ್ಲಿ ತಯಾರಾದ ಆಹಾರವನ್ನು ಉಂಡು ಜನರೆಲ್ಲ ಊರಿಗೆ ಹೋಗುತ್ತಾರೆ. .ಇದು ಪ್ರತೀ ವರ್ಷ ಬೇಸಿಗೆ ಸಮಯದಲ್ಲಿ ಸಾಮಾನ್ಯವಾಗಿ ನಡೆಯುವ ಸಂಪ್ರದಾಯ. ಇದಲ್ಲದೆ ಕೆಲವು ವಿಶೇಷ ಸಂದರ್ಭಗಳಲ್ಲಿ ಗೂಡು ಮಲಗುವುದುಂಟು. ಅಂಥ ವಿಶೇಷ ಸಂದರ್ಭ ಮದುವೆಯದು. ಮದುವೆಯಾದ ಮದಲಿಂಗ, ಮದಲಗಿತ್ತಿ ಮೂಹರ್ತವಾದ ಮೊದಲವಾರ ಗೂಡಿಗೆ ಬರುತ್ತಾರೆ. ಬರುವಾಗ ಮನೆಯಿಂದ ಗೋದಿ,ರವೆ, ಅಕ್ಕಿ ಎಲ್ಲ ತರ್ತಾರೆ. ಅದನ್ನು ಹಾಗೆ ಬೆಳಗ್ಗೆ ಉಗ್ಗಿ ಅನ್ನ ಮಾಡಿ ಉಣಬಡಿಸುತ್ತಾರೆ. ಮನೆಗಳಲ್ಲಿ ಯಾವುದೇ ಒಳ್ಳೆ ಕೆಲಸ ಮಾಡುವಾಗಲೂ ಗೂಡಿಗೆ ಬಂದು ಪೂಜೆ ಮಾಡ್ಸಿಕೊಂಡು ಬರಬೇಕು ಇದರಿಂದ ಮಾಡುವ ಕೆಲಸ ಸುಸೂತ್ರವಾಗಿ ನಡೆಯುತ್ತದೆ ಎಂಬುದು ಇವರ ನಂಬಿಕೆ.

ಎತ್ತಿನ ಹಬ್ಬ

ಪಶುಪಾಲಕ ಸಮುದಾಯಗಳು ಎತ್ತಿಗಳನ್ನೇ ಮುಖ್ಯವಾಗಿಸಿಕೊಂಡು ಮಾಡುವ ಒಂದು ವಿಶಿಷ್ಟ ಹಬ್ಬ ಎತ್ತಿನ ಹಬ್ಬ. ನಾಗರೀಕ ಸಮುದಾಯಗಳಲ್ಲಿ ಮಾಡುವ ಬಸವ ಜಯಂತಿ ಹಬ್ಬಕ್ಕಿಂತಲೂ ಭಿನ್ನವಾದ ಹಬ್ಬವಿದು. ಈ ಎತ್ತಿನ ಹಬ್ಬದ ಕ್ರಿಯೆ ಕಟ್ಟಲೆಗಳನ್ನು ಈ ಮುಂದಿನಂತೆ ವಿವರಿಸಬಹದು. ಈ ಹಬ್ಬಕ್ಕೆ ಹದಿನೈದು ದಿನ ಮೊದಲೇ ಒಂದು ದಿನ ಊರಿನ ಪೆದ್ದಗಳು (ಹಿರಿಯರು), ಕುಲಸಾವಿರದವರು ಸೇರಿ ಹಬ್ಬ ಆಚರಿಸುವ ಬಗ್ಗೆ ಮಾತನಾಡುತ್ತಾರೆ. ಆದಿನ ಮಾತಾಡಿದ ಮೇಲೆ ಒಂದು ಸೋಮವಾರ ಮುತ್ತಯ್ಯಗಳಿಗೆ ಮುಗಿಯುವುದು ಪದ್ಧತಿ. ದೇವರು ಮಾಡುತ್ತೇವೆ ಅಂತ ಯಜಮಾನ'ರು ಎಲ್ಲ ಸೇರಿಕೊಂಡು ಗೂಡಿಗೆ ಬಂದು ಕೈ ಮುಗಿದು ಹೋಗುತ್ತಾರೆ. ಮುತ್ತಯ್ಯಗಳಿಗೆ ಮುಗಿದಾದ ಮೇಲೆ ಬರುವ ಶುಕ್ರವಾರ ಕಂಪಳದೇವರ ಆಚರಣೆ ಮಾಡುತ್ತಾರೆ. ಯಾವುದೇ ಹಬ್ಬ ಮಾಡಿದಾಗಲೂ ಈ ಕಂಪಳದೇವರನ್ನು ಮಾಡುವುದು ಸಂಪ್ರದಾಯ. ಕಂಪಳದೇವರು ಮಾಡುವುದೆಂದರೆ : ಶುಕ್ರವಾರದ ಹಿಂದಿನ ಮಂಗಳವಾರ ಊರಿನ ಮನೆಗಳಿಗೂ, ಗೂಡಿಗೂ ಮೀಸಲು ಹೇಳುತ್ತಾರೆ. ಗೂಡಿಗೆ ಮೀಸಲು ಹೇಳುವವರು ಚನ್ನಪ್ಪನೋರು ಕುಲದವರು. ಊರಲ್ಲಿ ಮೀಸಲು ಹೇಳಾರು ಮುದ್ದಲೋರು ಕುಲದವರು. ಹೀಗೆ ಮೀಸಲು ಹೇಳಿದ ಮೇಲೆ ಕಿಲಾರಿ ಗೂಡಿನಲ್ಲಿ, ಜನ ಊರಲ್ಲಿ ಹಾಲನ್ನು ಕರೆದು ಬಳಸುವಂಗಿಲ್ಲ. ಕರೆದ ಹಾಲನ್ನು ದೇವರ ಗುಡಿಗೆ ಕೊಡಬೇಕು. ಕೆಲವು

ಜನ ದೇವರ ಗುಡಿಗೆ ಕೊಡುವುದಿಲ್ಲ; ಆದರೂ ಆ ಹಾಲನ್ನು ಬಳಸುವುದಿಲ್ಲ. ಕಿಲಾರಿ ಗೂಡಿನಲ್ಲಿ ಹಾಲು ಕೆರೆದು ಹೆಪ್ಪು ಹಾಕಿ ಮಜ್ಜಿಗೆ ಮಾಡಿ ಅದರಲ್ಲಿ ಬಂದ ಬೆಣ್ಣೆಯನ್ನು ಕಂಪಳದೇವರು ದಿನ ದೇವರಿಗೆ ತಗೊಂಡು ಹೋಗುತ್ತಾನೆ. ಶುಕ್ರವಾರದ ಆ ದಿನ ಊರಿನ ಹಿರಿಯರು, ಗ್ರಾಮಸ್ಥರು ಗೂಡಿಗೆ ಬಂದು ದೇವರೆತ್ತುಗಳನ್ನು ದೇವರ ಮನೆಯ ಮುಂದಕ್ಕೆ ಹೊಡೆದುಕೊಂಡು ಬರುತ್ತಾರೆ. ಆಗ ಕಿಲಾರಿ ಈ ಮೀಸಲು ಬೆಣ್ಣೆಯನ್ನು ಹಿಡಿದುಕೊಂಡು ದೇವರೆತ್ತುಗಳ ಮುಂದೆ ಮುಂದೆ ನಡೆಯುತ್ತಾನೆ. ದೇವರ ಮನೆಯ ಮುಂದಕ್ಕೆ ಬಂದ ಮೇಲೆ ಮುತ್ತಯ್ಯಗಳ ಪದಿಯಲ್ಲಿ ಆ ಬೆಣ್ಣೆಯನ್ನು ಇಡುತ್ತಾನೆ. ಆಮೇಲೆ ಅಲ್ಲಿ ಪೂಜೆ ಮಾಡಿಕೊಂಡು ಮತ್ತೆ ಊರಿನ ಜನರೆಲ್ಲ ಸೇರಿಕೊಂಡು ಊರಿನ ಪಕ್ಕದಲ್ಲಿ 'ನಲ್ಲನೋರ' ಹೊಲದಲ್ಲಿರುವ ಕಂಪಳದೇವರ ಗುಡ್ಡೆಗೆ ಹೋಗುತ್ತಾರೆ. ಗುಡ್ಡೆ ಹತ್ತಿರಕ್ಕೆ ಎತ್ತುಗಳನ್ನು ಹೊಡೆದುಕೊಂಡು ಹೋಗುವಾಗ ಗುಡ್ಡೆ ಹತ್ತಿರ ಬರುತ್ತಿದ್ದಂತೆ ದಕ್ಷಿಣ ದಿಕ್ಕಿನಿಂದ ಉತ್ತರ ದಿಕ್ಕಿಗೆ ಎತ್ತುಗಳನ್ನು ಈಜು ಬಿಡುತ್ತೇವೆ (ಮರೆಸುವುದು). ಆಮೇಲೆ ಈ ಕಡೆಯಿಂದ ಬರುವ ಊರಿನ ಜನ ತಲಾ ಎರೆಡೆರಡೋ, ನಾಕು ನಾಕೋ ಕಲ್ಲುಗಳನ್ನು ಕೈಯಲ್ಲಿ ಹಿಡಿದುಕೊಂಡು ಬಂದು ಕಂಪಳದೇವರ ಗುಡ್ಡೆಗೆ ಹಾಕುತ್ತಾರೆ. ಕಂಪಳದೇವರ ಗುಡ್ಡೆ ಸ್ವರೂಪ ಹೇಗಿದೆ ಅಂದ್ರೆ ಒಂದು ಬನ್ನಿ ಮರಕ್ಕೆ ಭಕ್ತರು ಬರುವಾಗ ತಂದು ಹಾಕಿದ ಕಲ್ಲುಗಳ ರಾಶಿಯಲ್ಲಿ ದೇವರೆತ್ತುಗಳು ಸತ್ತಾಗ ಅದರ ಕೊಂಬು ಮತ್ತೆ ಡಗಮು  ಮಾಡುವಾಗ ಕೊಯ್ದ ಎತ್ತಿನ ಕೊಂಬುಗಳನ್ನು ಇಟ್ಟಿರುತ್ತಾರೆ. ಈ ಗುಡ್ಡೆಯ ಹತ್ತಿರ ಎಲ್ಲ ಜನರು ಸೇರುತ್ತಾರೆ. ಆಮೇಲೆ ಮೀಸಲು ಮೊಸರು ಬೆಣ್ಣೆಗಳನ್ನು ಗುಡ್ಡೆಗೆ ಹಾಕಿ ಪೂಜೆ ಮಾಡುತ್ತಾರೆ. ಅಲ್ಲಿ ಪೂಜಾರಿ ಮತ್ತಿತರ'ರು ಪೂಜೆ ಮಾಡುತ್ತಾರೆ. ಆಮೇಲೆ ಮಣೇವು ಇಡುತ್ತಾರೆ. ಮಣೇವು ಇಟ್ಟು ಆದ ಮೇಲೆ ದೇವರೆತ್ತುಗಳನ್ನು ಗೂಡಿಗೆ ಸಾಗುಹಾಕಿ ಅವರವರು ತಂದಿದ್ದ ಪೂಜೆ ಸಾಮಾಗ್ರಿಗಳ ಪ್ರಸಾದವನ್ನು ಪಡೆದು ಊರಿಗೆ ಮರಳುತ್ತಾರೆ. ಹೀಗೆ ಶುಕ್ರವಾರ ಈ ಕಂಪಳದೇವರು ಮಾಡಿದ ಮೇಲೆ ಬರುವ ಸೋಮುವಾರ ಹಬ್ಬ

ಸೋಮುವಾರ ಹಬ್ಬ ಆದ್ರೆ ಶನಿವಾರ ಮೀಸಲು ಹೇಳ್ತಾರೆ. ಗೂಡಿಗೆ ಮೀಸಲು ಹೇಳುವವರು ಚನ್ನಪ್ಪನೋರು. ಊರಾಗೆ ಮುದ್ಲೋರು ಹೇಳ್ತಾರೆ. ಹೀಗೆ ಮೀಸಲಿಡಿದ ಹಾಲನ್ನು ಸೋಮುವಾರ ರಾತ್ರಿ ಬಳಸಬೇಕು. ಸೋಮುವಾರದ ದಿನ ಸಾಯಂಕಾಲ ಊರಿನ ಕುಲಸಾವಿರದವರು ಸೇರಿ ಗೂಡಿಗೆ ಹೋಗುತ್ತಾರೆ. ಗೂಡಲ್ಲಿನ ದೇವರೆತ್ತುಗಳಲ್ಲಿ ಬರೀ ಎತ್ತುಗಳನ್ನು ಮಾತ್ರ ಹೊರಡಿಸಿಕೊಂಡು ಆಕಳಗಳನ್ನು ಅಲ್ಲೆ ಬಿಟ್ಟು, ಎತ್ತು ಹೊಡಕೊಂಡು ಊರಿಗೆ ಬರುತ್ತಾರೆ. ಅಂಗೆ ಬರುವಾಗ ಊರ ಹೊರಭಾಗದಲ್ಲಿ ತಪ್ಪಟಿ ಹೊಡೆಯುವವರು ಕಾಯುತ್ತಿರುತ್ತಾರೆ. ದೇವರ ಎತ್ತುಗಳು ಬರುವುದನ್ನು ನೋಡಿ ಮೊದಲು ಮುತ್ತಯ್ಯಗಳಿಗೆ ಮುಗಿದು, ಆಮೇಲೆ ತಪ್ಪಟಿ ಹೊಡೆದುಕೊಂಡು ಎತ್ತುಗಳ ಮುಂದೆ ಮುಂದೆ ಅವರು ನಡೆಯುತ್ತಾರೆ. ಊರೊಳಗೆ ದೇವಸ್ತಾನದಲ್ಲಿ ಯಜಮಾನರು, ದಾಸಯ್ಯಗಳು ಹಾಗೂ ಭಕ್ತರು ದೇವರೆತ್ತುಗಳು ಬರುವುದನ್ನು ಕಾಯುತ್ತಾ ಕುಳಿತಿರುತ್ತಾರೆ. ಇವರಿಗೆ ಬರುವ ಸೂಚನೆ ಕೊಡುವುದುಕ್ಕಾಗಿ ಕೇ..ಅಂತ ದೂರದಿಂದಲೇ ಕೇಕೆ ಹಾಕುತ್ತಾ ಬರುತ್ತಾರೆ. ದೇವರೆತ್ತುಗಳನ್ನು

ಬಂದವೆಂಬುದರ ಸಂಕೇತವಾಗಿ ಡಗಮು ಬಾರಿಸುತ್ತಾರೆ. ಬಾರಿಸಿದ ಮೇಲೆ ದಾಸಯ್ಯಗಳು ಎಲ್ಲರೂ ಸೇರಿಕೊಂಡು ಹಿರಿಯರು, ಕಿರಿಯರು ಸೇರಿಕೊಂಡು ನಮ್ಮನ್ನು ಎದುರುಗೊಳ್ಳಲು ಉರುಮೆ ಬಡಿಸಿಕೊಂಡು ಊರು ಬಾಗಿಲಗೆ ಬರುತ್ತಾರೆ. ಆಗ ಊರಿನ ಜನರೆಲ್ಲರು ಸೆಳ್ಳೇವು (ಮುತ್ತಯ್ಯಗಳು ಬರುವ ಹಾದಿಗೆ ನೀರು ಹಾಕುವುದು) ಹಾಕಲು ಹೆಂಗಸರು ಮನೆಗೊಂದು ತುಂಬಿದ ಕೊಡ ನೀರುನ್ನು ಹೊತ್ತುಕೊಂಡು ಬರುತ್ತಾರೆ. ಬಂದು ಎಲ್ಲರೂ ಮುತ್ತಯ್ಯಗಳನ್ನು ಎದುರುಗೊಂಡಾದ ಮೇಲೆ ಜನರು ಮುಂದೆ ಮುಂದೆ ಸೆಳ್ಯೇವು ಹಾಕುತ್ತಾ ಹೋಗುತ್ತಾರೆ. ಎಲ್ಲರು ಸೇರಿ ದೇವಸ್ಥಾನಕ್ಕೆ ನಡೆಯುತ್ತೇವೆ. ದೇವಸ್ಥಾನದ ಮುಂದಕ್ಕೆ ಹೋಗುವುದಕ್ಕಿಂತ ಮೊದಲು ಊರಿನ ಬಡ್ಡೇಕಲ್ಲಿನ ಕಡೆಯಿಂದ ದೇವಸ್ಥಾನಕ್ಕೆ ದೇವರೆತ್ತುಗಳನ್ನು ಈಜು ಬಿಡುತ್ತಾರೆ(ಮೆರೆಸುವುದು). ಅನಂತರ ದೇವಸ್ಥಾನದ ಮುಂದಕ್ಕೆ ಹೋಗುತ್ತಾರೆ. ಹೋದಮೇಲೆ ಪೂಜಾರಿ ದೇವಸ್ಥಾನದ ಒಳಗೆ ಇರುವ ದೇವರೆತ್ತುಗಳ ಒಡವೆಯನ್ನು ಕಿಲಾರಿಯ ಕಂಬ್ಳಿ ಕೊಪ್ಪೆಯಲ್ಲಿ ಹಾಕುತ್ತಾನೆ. ಅದನ್ನು ಕಿಲಾರಿ ಮುತ್ತಯ್ಯಗಳ ಪದಿ(ದೇವರ ಗುಡಿಯ ಮುಂದೆ ಇರುವ ದೇವರ ಎತ್ತುಗಳ ಸನ್ನಿಧಿ)ಯಲ್ಲಿ ಇಟ್ಟು ಪೂಜಿಸುತ್ತಾನೆ. ಹೀಗೆ ಪೂಜೆ ಮಾಡಿಯಾದ ಮೇಲೆ ಮತ್ತೆ ಮುತ್ಯಯ್ಯಗಳನ್ನು ಸಾಗು ಹಾಕುತ್ತಾರೆ. ಆವಾಗ ಕಿಲಾರಿ ಕತ್ತಲಲ್ಲಿ ಮುತ್ತಯ್ಯಗಳನ್ನು ಹೊಡೆದುಕೊಂಡು ಹೋಗಿ ಗೂಡಿಗೆ ಕೂಡಿ ಮತ್ತೆ ಮನೆಗೆ ವಾಪಸ್ಸು ಬರಬೇಕು. ಮರುದಿನ ಬೆಳಗ್ಗೆ ಮತ್ತೆ ದೇವಸ್ಥಾನದ ಹತ್ತಿರ ಪೂಜೆ. ದೇವಸ್ಥಾನದ ಹತ್ತಿರ ಪೂಜೆ ಆದ ಮೇಲೆ ಎಲ್ಲರ ಮನೆಗಳಲ್ಲಿಯೂ ಎತ್ತುಗಳನ್ನು ಬಣ್ಣದಿಂದ ಸಿಂಗರಮಾಡಿ ಪೂಜೆ ಮಾಡುತ್ತಾರೆ.

ಮತ್ತೆ ಮಧ್ಯಾಹ್ನ ದೇವರತ್ತುಗಳನ್ನು ಊರಿನ ದೇವಸ್ಥಾನದ ಮುಂದಕ್ಕೆ ಹೊಡೆದುಕೊಂಡು ಬರಲು ಊರಿನ ಕುಲಸಾವಿರದವರು ಗೂಡಿಗೆ ತೆರಳುತ್ತಾರೆ. ಮುತ್ತಯ್ಯಗಳನ್ನು ಹೊಡೆದುಕೊಂಡು ಬರಲು ಹೋದಾಗ ಕಿಲಾರಿ ಮನೆತನದ ಹಿರಿಯ ಮನೆಯವರು ಸಜ್ಜೆ ಅನ್ನ ಮಜ್ಜಿಗೆ ತರುತ್ತಾರೆ. ಎತ್ತುಗಳನ್ನು ಗೂಡಿನಿಂದ ಹೊರಡಿಸಿಕೊಂಡು ಹೊಸದಾಗಿ ಒಂದು ವಡಪು(ಅಗ್ನಿಕುಂಡ)ಮಾಡಿ ಅಲ್ಲಿ ಬೆಂಕಿ ಹಾಕಿ ಆಗ ಕೈಬೊಗಸೆ ಒಡ್ಡಿ ಆ ಮಜ್ಜಿಗೆ ಸಜ್ಜೆ ಅನ್ನವನ್ನು ಎಲ್ಲ ಭಕ್ತರು ತಿನ್ನುತ್ತಾರೆ. ಮೊದಲು ಯಾರಾದರೊಬ್ಬರು ನೀಡುತ್ತಾರೆ. ಅನಂತರ ಅವರೂ ತಿನ್ನುತ್ತಾರೆ. ಆಮೇಲೆ ಪುರ್‍ನಾರು (ಒಂದು ಉಪಬೆಡಗು) ದೇವರೆತ್ತುಗಳ ಒಡವೆಯನ್ನು ತಂದಿರುತ್ತಾರೆ. ಆ ಒಡವೆಯನ್ನು ಹಾಕಿ ಹೊಡೆದುಕೊಂಡು ಊರಿಗೆ ಬರುತ್ತಾರೆ. ಈ ಮೊದಲೇ ಹೇಳಿದಂತೆ ಯಾವಾಗಲಾದರೂ ಊರೊಳಗೆ ಮುತ್ತಯ್ಯಗಳು ಬರಲಿ ಎದುರುಗೊಳ್ಳೊದು ಸೇಳೆವು ಹಾಕುವುದು. ಈಜು ಬಿಡುವುದು ಮಾಮೂಲಾಗಿ ನಡೆಯುತ್ತದೆ. ಆನಂತರ ಮಣೇವು ಇಡುತ್ತಾರೆ.

ಮಣೇವು

ಮಣೇವು ಒಂದು ವಿಶಿಷ್ಟ ಧಾರ್ಮಿಕ ಆಚರಣೆಯಾಗಿದೆ. ಹಬ್ಬದ ದಿನ ಹಟ್ಟಿಯಲ್ಲಿ ಪ್ರತಿಯೊಂದು ಗುಂಪಿನ ಜನರು ಇಷ್ಟಿಷ್ಟು ದುಡ್ಡಾಕಿ ಬೆಲ್ಲ ಕೊಂಡು ಚೂರು ಚೂರು ಮಾಡಿಕೊಂಡು ತರುತ್ತಾರೆ. ಆಮೇಲೆ ಕಟ್ಲೆ ಶುರುವಾದಾಗ ಮೊದಲು ದೇವರೆತ್ತುಗಳಿಗೆ ಹಾಕಿ ಆಮೇಲೆ ದಾಸಯ್ಯರಿಗೆ ಜನರಿಗೆ

ಕೊಡ್ತಾರೆ. ದಾಸಯ್ಯಗಳು ಎಷ್ಟು ಜನ ಇರ್ತಾರೆ ಅಷ್ಟು ರಾಶಿ ಬೆಲ್ಲವನ್ನು ಹಾಕುತ್ತಾ ಹೋಗುತ್ತಾರೆ. ತಂದವರೆಲ್ಲರೂ ಆ ರಾಶಿಗೆ ಒಂದೊಂದು ಚೂರು ಬೆಲ್ಲವನ್ನು ಹಾಕುತ್ತಾ ಹೋಗುತ್ತಾರೆ. ಆವಾಗ ದಾಸಯ್ಯಗಳು ಆಹ್..ಆಹ್.. ಅಂಥ ಕುಣಿಯುತ್ತಾ ದೇವರ ಮನೆ, ಬಡ್ಡೆಕಲ್ಲು ಅವೆಲ್ಲವನ್ನೂ ಸುತ್ತಿಕೊಂಡು ರಾಶಿ ಹಾಕಿದ ಬೆಲ್ಲ ಗುಡ್ಡೆಗಳ ಹತ್ತಿರ ಬರುತ್ತಾರೆ. ಬಂದು ಆ ಗುಡ್ಡೆಗಳಿಗೆ ಎರಗಿ ಮಣ್ಣು ಸಮೇತ ಬೆಲ್ಲವನ್ನು ತಿನ್ನುತ್ತಾರೆ. ಒಬ್ಬೊಬ್ಬ ದಾಸಯ್ಯ ಬೆಲ್ಲ ಎಲ್ಲಾ ಮುಗಿದರೂ ಏಳುವುದಿಲ್ಲ. ಆಗ ಬೆನ್ನಿಗೆ ಹೊಡೆದು ಎಬ್ಬಿಸಬೇಕು. ಅನಂತರ ಮೀಸಲು ಹಾಲಿನಿಂದ ಮಾಡಿದ ಮಜ್ಜಿಗೆಯನ್ನು ದಾಸಯ್ಯಗಳಿಗೆ, ಉಳಿದ ಇತರೆಯವರ ಬೊಗಸೆಗೆ ಹೊಯ್ದು ಕುಡಿಸುತ್ತಾರೆ. ಯಾವಾಗಾದರೂ ಮಣೇವು ಇಡಲಿ ಈ ಕಟ್ಲೆಯನ್ನು ಅನುಸರಿಸುತ್ತಾರೆ. ದೇವರೆತ್ತುಗಳು ಮ್ಯಾಸನಾಯಕರಲ್ಲಿ ಬಹಳ ಪ್ರಾಮುಖ್ಯ. ದೇವರೆತ್ತುಗಳಿಲ್ಲದೆ ಇವರ ಯಾವ ದೇವರುಗಳು ಆಗುವುದಿಲ್ಲ. ಯಾವುದೇ ದೇವರಿಗಾದರು ಮುತ್ತಯ್ಯಗಳಿಗೆ ಮುಗಿಯುವುದು ಮೊದಲು, ಅನಂತರ ಹಬ್ಬ.

ಇಲ್ಲಿಯೇ ಗಮನಿಸಬೇಕಾದ ಇನ್ನೊಂದು ವಿಷಯವೆಂದರೆ ಕಾಸು ಇಡುವುದು. ದೇವರುಗಳು ಯಾವುದೇ ಆದರೂ ಕಾಸು ಇಡುತ್ತಾರೆ. ಒಂದು ಗುಂಪಿಗೆ ಸೇರಿದವರು. ಒಬ್ಬರ ಹತ್ತಿರಕ್ಕೆ ಒಂದೊಂದು ದುಡ್ಡು ಕೊಡುತ್ತಾರೆ. ಆ ದುಡ್ಡು ಎಷ್ಟೇ ಆಗಿರಬಹುದು. ನಾಣ್ಯವನ್ನು ಮಾತ್ರ ಕಾಸು ಇಡುವುದು. ನೋಟನ್ನು ಕಾಸಿಗೆ ಇಡಲು ಬರೋದಿಲ್ಲ. ಪೂಜೆ ಆಗುವಾಗ ಹೀಗೆ ಪ್ರತೀ ಗುಂಪಿನವರು ಸಂಗ್ರಹಿಸಿದ ಕಾಸನ್ನು ಪೂಜಾರಿ ಕೈಯಲ್ಲಿ ಕೊಡುತ್ತಾರೆ. ಹಬ್ಬಗಳಂದು ಹಗಲು ಹೊತ್ತು ಮುತ್ತಯ್ಯಗಳ ಕಾಸು ಅಂತ ಇಡುತ್ತಾರೆ. ಇದನ್ನು ದೂಳುಕಾಸು ಎನ್ನುತ್ತಾರೆ. ಏಕೆಂದರೆ ಆ ಕಾಸನ್ನು ಕಂಬಳಿ ಗದ್ದುಗೆಯ ಮೇಲಾಗಲಿ, ಕೈಯಲ್ಲಾಗಲಿ ಇಡುವುದಿಲ್ಲ. ನೆಲದ ದೂಳಲ್ಲಿ ಇಟ್ಟ ಆ ಕಾಸನ್ನು ತಗೋಬೇಕು, ಅಲ್ಲಿಟ್ಟ ಎಲ್ಲ ಕಾಸನ್ನು ಕಿಲಾರಿ ತೆಗೆದುಕೊಳ್ಳುತ್ತಾನೆ. ಆದರೆ ಪೂರ್ತಿ ತೆಗೆದುಕೊಳ್ಳದೆ ಒಂದೆರಡು ಕಾಸನ್ನು ಅಲ್ಲೇ ಬಿಡಬೇಕು. ಅದನ್ನು ಚೆನ್ನಪ್ಪನವರು (ಉಪಬೆಡಗು) ತೆಗೆದುಕೊಳ್ಳಬೇಕು. ಕಿಲಾರಿ ಹೀಗೆ ತೆಗೆದುಕೊಂಡ ಕಾಸನ್ನು ದಾಸಯ್ಯರಿಗೆ ಒಂದೊಂದು ದುಡ್ಡು ಕೊಡಬೇಕು. ಪೂಜಾರಿಗಳಿಗೂ ಈ ಕಾಸು ಇಟ್ಟಿರುತ್ತಾರೆ. ಆದರೆ ಅವರೇನು ಯಾರಿಗೂ ಈ ಕಾಸನ್ನು ಕೊಡುವಂತಿಲ್ಲ. ಇದನ್ನು ಕಿಲಾರಿ ಮಾತ್ರ ಕೊಡಬೇಕು ಯಾಕೆ ಅಂದ್ರೆ ದೂಪಾರತಿಗಳ ತಿರುಗುವಾಗ (ದೇವರೆತ್ತುಗಳ ಗುಡಿ ಮುಂದೆ ಬಂದು ನಿಂತಾಗ, ದೇವರ ಪೂಜೆ ಮಾಡಿ ಪೂಜಾರಿಗಳು, ಕಿಲಾರಿ ಬಾಯಿಗಳನ್ನು ಪೇಟದಿಂದ ಕಟ್ಟಿಕೊಂಡು, ದೀಪದಾಕಾರದ ಆರತಿ ಮಾಡುವ ವಸ್ತುಗಳಲ್ಲಿ ದೂಪವನ್ನು ತುಂಬಿಕೊಂಡು ಗಂಟೆಗಳನ್ನು ಬಾರಿಸುತ್ತಾ ದೇವರೆತ್ತುಗಳ ಸುತ್ತ ತಿರುಗುತ್ತಾರೆ. ಇದನ್ನೇ ದೂಪಾರತಿಗಳೆತ್ತುವುದು ಎನ್ನುತ್ತಾರೆ.) ದಾಸಯ್ಯಗಳು ದೇವರೆತ್ತುಗಳ ಸುತ್ತ ತಿರುಗುತ್ತಾರೆ. ಇದು ಒಂದು ತರ ದೇವರೆತ್ತುಗಳಿಗೆ ಊಳಿಗ ಮಾಡಿದಂತೆ, ಅದಕ್ಕೆ ಕಿಲಾರಿ ತನಗೆ ಬಂದ ಮುತ್ತಯ್ಯಗಳ ಕಾಸಿನಲ್ಲಿ ಒಂದೊಂದು ದುಡ್ಡನ್ನು ಅವರಿಗೆ ಕೊಡುತ್ತಾನೆ.

ದೇವರ ಗುಡಿ ಮುಂದೆ ಮಾತ್ರ ಹಿಂಗೆ ಮುತ್ತಯ್ಯಗಳ ಕಾಸನ್ನು ನೆಲದ ಮೇಲೆ ಇಡಸುತ್ತಾರೆ. ಇನ್ನೂ ಕೆಲವು ಕಡೆ ಕಾಸನ್ನು ಕಂಬಳಿ ಗದ್ದುಗೆ ಹಾಕಿ ಇಡ್ತಾರೆ. ಆ ಕಾಸನ್ನು ಕಿಲಾರಿ ತೆಗದುಕೊಳ್ಳಬೇಕು. ಅಲ್ಲಿ ಕೂಡ ಒಂದೆರಡು ದುಡ್ಡು ಬಿಡಬೇಕು. ಬಿಟ್ಟಿದನ್ನು ಮತ್ತೆ ಚೆನ್ನಪ್ಪನವರು ತಗೊಂಡು ಅಲ್ಲಿ ಹಾಸಿದ್ದ ಕಂಬಳಿಯನ್ನು ನನ್ನ ಹೆಗಲಿಗೆ ಹಾಕ್ತಾರೆ.

ಕಂಬಲಯ

ಈ ದೇವರನ್ನು ನಲಗೇತನಹಟ್ಟಿಯ ಸುತ್ತಲಿನ ಮ್ಯಾಸನಾಯಕರು ಆಚರಿಸುತ್ತಾರೆ. ಕಂಬಲಯ ಗುಡ್ಡೆಗಳು ಅಂತ ಈಗ ಗೂಡಿನಿಂದ ಸ್ವಲ್ಪ ದೂರದಲ್ಲಿವೆ. ಇದಕ್ಕೆ ಮಾಮೂಲಿನಂತೆ ಕಾಸು–ಮೀಸಲು ಹಿಡಿಯುವುದು ಇದೆ. ಸೋಮುವಾರ ಸಾಯಂಕಾಲ ಕಿಲಾರಿ ಮೀಸಲು ಹಿಡಿದುಕೊಂಡು ಎತ್ತುಗಳ ಜೊತೆಗೆ ಊರಿಗೆ ಹೊರಡಬೇಕು. ಅಲ್ಲಿಂದ ಕಂಬಲಯಕ್ಕೆ ನಡೆಯಬೇಕು. ಅಲ್ಲಿ ಒಂದೊಂದು ಮನೆತನದವರಿಗೂ ಒಂದೊಂದು ಗುಡ್ಡೆ ಇದೆ. ಅವುಗಳನ್ನು ಸಂಬಂಧಪಟ್ಟವರು ಪೂಜಿಸಿಕೊಳ್ಳುತ್ತಾರೆ. ದೊಡ್ಡ ಕಂಬಲಯ ಅಂತ ಒಂದು ಗುಡ್ಡೆ ಇದೆ. ಅಲ್ಲಿ ಮುಖ್ಯವಾದ ಕಟ್ಲೆ ನಡೆಯುತ್ತೆ. ಕಿಲಾರಿ ಮತ್ತು ಮುತ್ತಯ್ಯಗಳು ದೊಡ್ಡ ಕಂಬಲಯನ ಹತ್ತಿರ ಇರುತ್ತಾರೆ. ಇಲ್ಲಿ ಪೂಜೆ ಮುಗಿದ ಮೇಲೆ ಪ್ರಸಾದ ಕೊಡುತ್ತಾರೆ. ಆಮೇಲೆ ಬರಗಲು ಕುಲದವರು ರಾಗಿ ಮುದ್ದೆ ಮಾಡಿಕೊಂಡು ಬಂದಿರುತ್ತಾರೆ. ಬರೀ ರಾಗಿ ಮುದ್ದೆಯನ್ನು ಸಣ್ಣ ಚೆಂಡುಗಳಾಗಿ ಕಟ್ಟಿರುತ್ತಾರೆ. ಅದರ ಜೊತೆಗೆ ತೆಂಗಿನಕಾಯಿ ಇರುತ್ತೆ. ಅವರು ಮುದ್ದೆ ಕಾಯಿಚೂರು ಕೊಡುತ್ತಾರೆ. ಅದನ್ನು ಪಡೆದವರು ತಿಂದು ವಾಪಸ್ಸು ಬರುತ್ತಾರೆ. ಆ ಮುದ್ದೆ ಕೊಡುವಾಗ ಕಿಲಾರಿ ಕೊಪ್ಪೆಯೊಳಗೆ ಮೊದಲು ಸ್ವಲ್ಪ ಮುದ್ದೆಗಳನ್ನು ತಂದು ಹಾಕ್ತಾರೆ. ಆಮೇಲೆ ಭಕ್ತರಿಗೆಲ್ಲ ಕೊಡ್ತಾರೆ. ಅವನ್ನು ತಿಂದು ಮುತ್ತಯ್ಯಗಳನ್ನು ಸಾಗುಹಾಕಿ ಊರಿಗೆ ವಾಪಸ್ಸು ಹೋಗುತ್ತಾರೆ.

ದೀವಳಿಗೆ

ದೀಪಾವಳಿಯ ಅಮಾವಾಸೆಯ ಮುಂದೆ ಗುರುವಾರದ ದಿನವೋ ಶುಕ್ರವಾರದ ದಿನವೋ ಊರಿನ ಕುಲಸಾವಿರದವರು ಸೇರಿ ದೇವರು ಮಾಡಲು ಮಾತಾಡುತ್ತಾರೆ. ಮಾತಾಡಿದ ಮೇಲೆ ಬರುವ ಸೋಮುವಾರ ದೀವಳಿಗೆ ಗೂಡು ಮಾಡ್ತಾರೆ. ಗೂಡು ಮಾಡಾದು ಹೇಗೆ ಅಂದ್ರೆ : ಸೋಮುವಾರ ಉರಿನ ಜನ ತಮ್ಮ ತಮ್ಮ ಹೊಲಗಳಿಂದ ಸಜ್ಜೆ ತೆನೆ ಮುರಿದುಕೊಂಡು ಬರಬೇಕು. ಸಜ್ಜೆ ಹಾಕದಿದ್ದವರು ರಾಗಿ ತೆನೆ ತರ್ತಾರೆ. ಹಿಂಗೆ ತಂದ ತೆನೆಗಳನ್ನೆಲ್ಲಾ ಊರ ಹೊರಗೆ ಮೈದಾನವಿದ್ದ ಜಾಗದಲ್ಲಿ ಕೂಡಿ ಹಾಕುತ್ತಾರೆ. ಹೀಗೆ ಕೂಡು ಹಾಕಿದ ತೆನೆಗಳನ್ನು ಸ್ವಲ್ಪ ಹಾಗೆ ಉಳಿಸಿ ಉಳಿದದ್ದೆನ್ನಲ್ಲ ಐದು ಪೆಂಡೆಗಳಾಗಿ ಕಟ್ಟಬೇಕು. ಆ ಪೆಂಡೆಗಳಲ್ಲಿ ಮುತ್ತಯ್ಯಗಳಿಗೆ ಒಂದು, ಹಿಂಗೆ ಕಟ್ಟಿದ ಮೇಲೆ, ಉಳಿಸಿರುತ್ತಾರಲ್ಲ ಅವುಗಳನ್ನು ಊರಿನ ಸಾವಿರದವರಿಗೂ ಕೊಡಬೇಕು. ಒಂದೊಂದೊ, ಎರಡೆರಡೋ ತೆನೆಗಳು ಸಿಕ್ಕರೂ ಸಾಕು. ಅಂಗೆ ಪೆಂಡೆಗಳನ್ನು ಹೊತ್ತುಕೊಳ್ಳುವವರು ಹೊತ್ತುಕೊಳ್ಳುತ್ತಾರೆ.

ಸಾವಿರದವರು ತೆನೆಗಳನ್ನು ಕೈಯಲ್ಲಿ ಹಿಡಿದಿರಬೇಕು. ತಪ್ಪಟಿ ಹೊಡೆಸಿಕೊಂಡು ದೇವಸ್ಥಾನದ ಮುಂದಕ್ಕೆ ಬರಬೇಕು. ಆಗ ಕೈಮುಗಿದು ಸಾವಿರದವರು ಅವರ ಮನೆಗಳಿಗೆ ಹೋಗ್ತಾರೆ. ಆಮೇಲೆ ಪೆಂಡೆಗಳು ಇರುತ್ತವಲ್ಲ ಅವುಗಳಲ್ಲಿ ಮುತ್ತಯ್ಯಗಳ ಪೆಂಡೆಯನ್ನು ಹೊರತು ಪಡಿಸಿ ಉಳಿದ ಪೆಂಡೆಗಳು ದೇವರ ಪೂಜಾರಿಗಳು ಹೊತ್ತುಕೊಂಡು ಹೋಗುತ್ತಾರೆ. ಆಮೇಲೆ ಮುತ್ತಯ್ಯಗಳ ಪೆಂಡೆಯನ್ನು ಹಿರಿಯರು, ಸಾವಿರದವರು ಸೇರಿಕೊಂಡು ಆಡವಿಯಲ್ಲಿರುವ ಮುತ್ತಯ್ಯಗಳ ಗೂಡಿಗೆ ಹೊತ್ತುಕೊಂಡು ಹೋಗುತ್ತಾರೆ. ಆಗ ಕಿಲಾರಿ ತಮ್ಮ ಹಿರಿಯರ ಮನೆಯಿಂದ ಮಜ್ಜಿಗೆ, ಅನ್ನವನ್ನು ಎಡೆಗೆಗೆ (ಬುಟ್ಟಿಗೆ) ತುಂಬಿಕೊಂಡು, ತೆನೆಯ ಪೆಂಡೆ ಹೊತ್ತುಕೊಂಡು ಹೋಗುವವರ ಜೊತೆಯಲ್ಲಿ ಗೂಡಿಗೆ ಬರಬೇಕು. ಹೋದವರು ಪೆಂಡೆಯನ್ನು ಅಲ್ಲಿಟ್ಟು ಮುತ್ತಯ್ಯಗಳ ಪದಿಗೆ ಪೂಜೆ ಮಾಡಿ ಆಮೇಲೆ ಕಾಸು ಇಡಬೇಕು. ಕಾಸು ಯಾರ್‍ಯಾರು ಹೇಗೇಗೆ ಇಡಬೇಕೋ ಹಾಗೆ ಇಡುತ್ತಾರೆ. ಆ ಕಾಸನ್ನು ನಾನು ತಗೋಬೇಕು. ಆಮೇಲೆ ಮುತ್ತಯ್ಯಗಳನ್ನು ಗೂಡಿನಿಂದ ಹೊರಗೆ ಹೊರಡಿಸಿ ಪೂರ್ವಕ್ಕೆ ಮುಖಮಾಡಿಕೊಂಡು ಮೂರುಸಲ ಈಜು ಬಿಡಬೇಕು.  ಹಿಂಗೆ ಮಾಡಿದ ಮೇಲೆ ಮನೆಯಿಂದ ತಂದಿದ್ದ ಮೊಸರು, ಸಜ್ಜೆ ಅನ್ನವನ್ನು ಕಲಸಿಕೊಂಡು, ಬಂದಿದ್ದ ಜನರಿಗೆಲ್ಲ ಬೊಗಸೆಗೆ ಒಯ್ಯಬೇಕು. ಅದನ್ನು ತಿಂದು, ಕೈ ಮುಗಿದು ಮುತ್ತಯ್ಯಗಳನ್ನು ಅಡವಿಗೆ ಮೇಯಲು ಸಾಗುಹಾಕಬೇಕು. ಅನಂತರ ಗೂಡಿನಲ್ಲಿ ದೇವರ ಪ್ರಸಾದ ಸಜ್ಜೆ ತೆನೆಯನ್ನು ತಿಂದು ಬರಬೇಕು. ಆವೊತ್ತಿನಿಂದ ಮುಂದಿನ ಗುಗ್ಗರಿ ಹಬ್ಬ ಆಗುವವರೆಗೂ ಉಳ್ಳಿ(ಉರುಳಿ) ಕಾಳನ್ನು ತಿನ್ನುವ ಆಗಿಲ್ಲ. ಈಗ ಈ ಉಳ್ಳಿ ತಿನ್ನಬಾರದು ಎನ್ನುವುದನ್ನು ಊರಿನಾಗೆ ಎಲ್ಲರೂ ಪಾಲಿಸುವುದಿಲ್ಲ. ಯಾರೋ ಭಕ್ತಿ ಇದ್ದ ಜನರು ಮಾತ್ರ ಪಾಲಿಸುತ್ತಾರೆ. ಹೀಗೆ ದೀವಳಿಗೆ ಗೂಡು ಆದ ನಂತರ ಬರುವ ಸೋಮವಾರ ಹಿರಿಯರ ಹಬ್ಬ ಮಾಡುತ್ತಾರೆ. ಇದರ ಕಟ್ಲೆಯಲ್ಲಿ ಒಂದೊಂದು ಮನೆತನದ ಅಣ್ಣ ತಮ್ಮಂದಿರೆಲ್ಲ ಸೇರಿ ಖರ್ಚುವೆಚ್ಚ ಹಾಕಿಕೊಂಡು ಹಿರಿಯರ ಮನೆತನಗಳಲ್ಲಿ ಯಾರಾದರೂ ಹಿರಿಯರು (ಮದುವೆಯಾಗಿ ಸತ್ತವರು) ಇದ್ರೆ ಅವರನ್ನು ಹಿರಿಯರ ಗುಂಪಿಗೆ ಸೇರಿಸಿಕೊಳ್ಳುತ್ತಾರೆ.

ಇದು ಆದ ಮೇಲೆ ಮುಂದಿನ ಶನಿವಾರ ದೇವರ ಮೀಸಲು ಹೇಳ್ತಾರೆ. ಆಗ ಎಲ್ಲರೂ ತಮ್ಮ ಮನೆಗಳಲ್ಲಿ ಏನಾದರೂ ಕರೆದರೆ ಅದರ ಹಾಲನ್ನು ದೇವರಿಗೆ ಮೀಸಲು ಒಪ್ಪಿಸಬೇಕು. ದೇವರ ಗೂಡಿಗೂ ಮೀಸಲು ಹೇಳ್ತಾರೆ. ಆಗ ಕಿಲಾರಿ ಗೂಡಲ್ಲಿ ದೇವರ ಎತ್ತುಗಳ  ಹಾಲನ್ನು ಕರೆದು ಮಜ್ಜಿಗೆ ಮಾಡಿ ಬೆಣ್ಣೆ ತೆಗೆದು ಸೋಮುವಾರದ ದಿನ ಬೆಳಗ್ಗೆ ದೇವರಗುಡಿ ಮುಂದಕ್ಕೆ ತಂದು ಇಡುತ್ತಾನೆ. ಸಾವಿರದವರು ಭಾನುವಾರದ ಹಾಲನ್ನು ದೇವರ ಗುಡಿಗೆ ತಂದು ಕೊಡ್ತಾರೆ. ಅವೊತ್ತು ಹಾಲನ್ನು ಬಳಸುವಂತಿಲ್ಲ. ಆವೊತ್ತಿನ ಹಾಲನ್ನು ಸಣ್ಣಮಕ್ಕಳಿಗೆ, ನಾಯಿ, ಕುರಿಮರಿಗಳಿಗೆ ಕೂಡ ಕೊಡುವಂತಿಲ್ಲ.

ಸೋಮುವಾರ ಸಾಯಂಕಾಲ ಊರಿನ ಹಿರಿಯರು, ಕಿರಿಯರು, ಸಾವಿರದವರು ಸೇರಿ ದೇವರ ಗುಡಿಗೆ ಮುತ್ತಯ್ಯಗಳನ್ನು ಹೊಡದು ಕೊಂಡು ಹೋಗಲು ಬರುತ್ತಾರೆ. ಗೂಡಿಂದ ಹೊಡಕೊಂಡು ಬಂದ ದೇವರ ಎತ್ತುಗಳನ್ನು ದೇವರ ಗುಡಿಯ ಮುಂದೆ ನಿಲ್ಲಿಸಿಕೊಂಡು ಪೂಜೆಮಾಡಿ ಹಾಗೆ ಗೂಡಿಗೆ

ಸಾಗುಹಾಕ್ತಾರೆ. ಕಿಲಾರಿ ಅವುಗಳನ್ನು ಹೊಡೆದುಕೊಂಡು ಹೋಗಿ ಗೂಡಿಗೆ ಕೂಡಿ ವಾಪಸ್ಸು ಮನೆಗೆ ಬರಬೇಕು. ಕತ್ತಲಲ್ಲಿ ಕಿಲಾರಿ ಜೊತೆಗೆ ಬೊಮ್ಮದೇವಢ್ಲವರು ಯಾರಾದರೂ ಒಬ್ರು ಯಾವಾಗ್ಲೂ ಇದ್ದೇ ಇರ್ತಾರೆ.

ಮರುದಿನ ಮಂಗಳವಾರ ಬೆಳಗ್ಗೆ ಇನ್ನು ನಾಲ್ಕು ಗಂಟೆಗೆ 'ದಗಮು' ಹೊಡೆಯಬೇಕು. ಹೊಡೆದ ತಕ್ಷಣ ಉರುಮೆ, ತಪ್ಪಟಿ, ವಾಲಗವನ್ನು ಹೊಡಿಬೇಕು. ಆವಾಗ ಹಿರಿಯರು, ಕಿರಿಯರು, ಸಾವಿರದವರು ಕೂಡಿಕೊಂಡು ದೇವರು ಮಾಡಲು ಆರಂಭಿಸುತ್ತಾರೆ. ಆಗ  ಗುಡಿಯ ಒಳಗಡೆ ಇದ್ದ ಗರುಡಗಂಬವನ್ನು ಮುತ್ತಯ್ಯಗಳ ಪದಿಯಲ್ಲಿ ತಂದು ಕೊಡ್ತಾರೆ. ಅದಕ್ಕೆ ಮೀಸಲು ತುಪ್ಪ ಹಾಕಿ ದೀಪ ಉರಿಸುತ್ತಾರೆ. ಆಮೇಲೆ ದೇವರ ಗುಡಿಯ ಒಳಗೆ ಇದ್ದಂತಹ ಮುದ್ರೆಕೋಲು ದೇವರೆತ್ತಿನ ಕಾಲುಗಗ್ಗರಿ, ಮುಖರಂಬಗಳನ್ನು ತಂದು ಕಿಲಾರಿ ಕಂಬ್ಳಿ ಕೊಪ್ಪೆಯೊಳಕ್ಕೆ ಹಾಕ್ತಾರೆ. ಅವುಗಳನ್ನು ಕಿಲಾರಿ ಪದಿಯಲ್ಲಿಟ್ಟು ಪೂಜೆ ಮಾಡಬೇಕು. ಆಗ ದೇವರ ಗುಡಿ ಒಳಗೂ ಪೂಜೆ ಮಾಡ್ತಾರೆ. ಪೂಜೆ ಮುಗಿದ ಮೇಲೆ ಕಾಸು ಇಡ್ತಾರೆ. ಆನಂತರ ಸಾವಿರದವರ ಮನೆಗಳಲ್ಲಿ ಏಳು ಜನ ಪೆದ್ದಗಳು (ಹಿರಿಯರು) ಹೋಗಿ ಒಂದೊತ್ತು ಬಿಟ್ಟು ಬರುತ್ತಾರೆ. ಬಂದ ಪೆದ್ದಗಳಿಗೆ ಪದಿಯಲ್ಲಿ ಪೂಜೆಗೆ ಬಂದ ಹಣ್ಣು-ಕಾಯಿಯನ್ನು ಪ್ರಸಾದ ಕೊಡಬೇಕು. ಆಮೇಲೆ ಗಗ್ಗರಿ, ಮುದ್ರೆಕೋಲು, ಮುಖರಂಬಗಳನ್ನು ಯಜಮಾನರಿಗೆ ಒಪ್ಪಿಸಬೇಕು.

ಮತ್ತೆ ಮಧ್ಯಾಹ್ನ ಗೂಡಿನಿಂದ ದೇವರೆತ್ತುಗಳನ್ನು ದೇವರ ಗುಡಿಯ ಮುಂದಕ್ಕೆ ಹೊಡದುಕೊಂಡು ಬರಬೇಕು. ಅದಕ್ಕೆ ಎತ್ತುಗಳನ್ನು ಹೊಡಕೊಂಡು ಬರಲು ಹಿರಿಯರು, ಸಾವಿರದವರು ಗೂಡಿಗೆ ಹೋಗುತ್ತಾರೆ. ಆಗ ಆ ಗಗ್ಗರಿ, ಮುಖರಂಬ, ಕೋಡು ಅಣಸುಗಳನ್ನು ಪುರ್ನೋರ (ಉಪಬೆಡಗು) ಮನೆಯವರ ಹತ್ತಿರ ಕೊಟ್ಟು ಕಳಿಸುತ್ತಾರೆ. ಹೀಗೆ ಬರುವವರ ಜೊತೆಯಲ್ಲಿ ನಮ್ಮ ಹಿರಿಯರು ಮನೆಯವರು ಸಜ್ಜೆ ಅನ್ನ, ಮಜ್ಜಿಗೆ ಮಾಡಿ ಎಡಿಗೆಗೆ ತುಂಬಿ ಕಳಿಸುತ್ತಾರೆ. ಆಗ ದೇವರೆತ್ತುಗಳನ್ನು  ಕೂಡಿಸಿ ಅವುಗಳಲ್ಲಿ ಎತ್ತುಗಳನ್ನು ಮಾತ್ರ ಪ್ರತ್ಯೇಕವಾಗಿ ಹೊರಡಿಸುತ್ತೇವೆ. ಆಮೇಲೆ ಸಜ್ಜೆ ಅನ್ನ ಮಜ್ಜಿಗೆ ಕಲಿಸಿ ಕುಡೀತೀವಿ. ಆ ಅನ್ನವನ್ನು ವಿಷದಂಬಲಿ ಅಂತ ಕರಿಯುತ್ತಾರೆ.

ಕಟ್ಲೆ ಮುಗಿದ ಮೇಲೆ ದೇವರೆತ್ತುಗಳಿಗೆ ಹಾಕಿ ಸಿಂಗರಿಸಿದ್ದ ವಡವೆಗಳನ್ನು ಬಿಚ್ಚಿ ಯಜಮಾನರಿಗೆ ವಾಪಸ್ಸುಕೊಟ್ಟು ಎತ್ತುಗಳನ್ನು ಹೊಡಕೊಂಡು ಗೂಡಿಗೆ ಬರಬೇಕು. ಈ ದೀವಳಿಗೆ ಮುಗಿದ ಹದಿನೈದು ದಿನಕ್ಕೆ ಮರುದೀವಳಿಗೆ ಅಂತ ಮಾಡ್ತಾರೆ. ಆವೊತ್ತು ಹಿಂಗೆ ಮುತ್ತಯ್ಯಗಳನ್ನು ಹೊಡಕೊಂಡು ಬರಾದಿಲ್ಲ. ಮೀಸಲು ಹಿಡಿದಿಡುತ್ತಾರೆ. ಗರಡುಗಂಬದ ದೀಪ ಹಚ್ಚುತ್ತಾರೆ. ಮಾಮೂಲಿನಂತೆ ಪೂಜೆ ನಡೆಯುತ್ತದೆ. ಆಮೇಲೆ ಭಕ್ತರೆಲ್ಲ ಕಿಲಾರಿ ಮತ್ತು ಪೂಜಾರಿಗಳ ಕಾಲಿಗೆ ಬೀಳ್ತಾರೆ. ಅಲ್ಲಿಗೆ ಈ ಕಟ್ಲೆ ಮುಗಿಯುತ್ತದೆ.

ಗುಗ್ಗರಿ ಹಬ್ಬ

ಕಂಪಳದೇವರು ಆದ ಒಂದು ವಾರದ ಮೇಲೆ ಗುಗ್ಗರಿ ಹಬ್ಬ. ಇದಕ್ಕೂ ಮೊದಲು ಶನಿವಾರ ಮೀಸಲು ಹೇಳಿರುತ್ತಾರೆ. ಗುಗ್ಗರಿ ಹಬ್ಬದಲ್ಲಿ ಒಂದು ವರ್ಷ ಬಿಟ್ಟು ಮತ್ತೊಂದು ವರ್ಷ ದೇವರು ಗಂಗಮ್ಮಗೆ ಹೋಗುತ್ತದೆ. ಸೋಮುವಾರದ ಹನ್ನೊಂದು ಗಂಟೆಗೆ ಹಾಗೆ ಮುತ್ತಯ್ಯಗಳನ್ನು ಹೊಡೆದುಕೊಂಡು ಬಂದು ದೇವರುಗಳನ್ನು ಹೊತ್ತು ಗಂಗಮ್ಮಗೆ ಹೊರಡುತ್ತಾರೆ. ಹೊರಡುವಾಗ ಕಿಲಾರಿಗೆ, ಪುಜಾರಿಗಳಿಗೆ, ಯಜಮಾನನಿಗೆ ಮಾದಿಗರು ಹೊಸ ಚಪ್ಪಲಿಗಳನ್ನು ಹೊಲಿದುಕೊಂಡು ಬಂದು ಹಾಕುತ್ತಾರೆ. ದೇವರಗುದ್ದ ಎನ್ನುವ ಹಳ್ಳದ ಒಂದು ಜಾಗದಲ್ಲಿ ದೇವರನ್ನು ಇಳಿಸುತ್ತಾರೆ. ದೇವರು ದೇವರಗುದ್ದದ ಹತ್ತಿರಕ್ಕೆ ಹೋಗುವಷ್ಟರಲ್ಲೇ ಮದ್ಯೆ ಕುರಿಗಳನ್ನು ದೇವರ ಸುತ್ತ ಪ್ರದಕ್ಷಿಣೆ ಮಾಡಿಸುತ್ತಾರೆ.

ದೇವರುಗಳನ್ನು ದೇವರೆತ್ತುಗಳನ್ನ ಇಳಿಸಿದ ಸ್ಥಳದಲ್ಲೇ ಚಿಲುಮೆ ತೆಗೆದು ಅದರಲ್ಲಿ ಬಂದ ನೀರಿನಿಂದ ದೇವರುಗಳ ಸಾಮಾನುಗಳನ್ನೆಲ್ಲಾ ಬಿಚ್ಚಿ ತೊಳೆಯುತ್ತಾರೆ. ಕಿಲಾರಿ ಇನ್ನೊಂದು ಗಡ್ಡೆಯಲ್ಲಿ (ದಡದಲ್ಲಿ) ದೆವರೆತ್ತುಗಳ ಕೋಡು ಅಣಸು, ಗಗ್ಗಡ್ಲು, ಮುಖರಂಬಗಳನ್ನು ಚಿಲುಮೆಯ ನೀರಲ್ಲಿ ತೊಳೆಯಬೇಕು.

ಇಲ್ಲಿ ಚನ್ನಕೇಶವ, ಗ್ರಾದಿಪಾಲನಾಯಕ ದೇವರುಗಳ ವಸ್ತುಗಳನ್ನುಳಾದ ಕೊಳಲು ಬಿಲ್ಲುಗಳನ್ನು ಮುತ್ತಯ್ಯಗಳಿಂದ ತಂದಿದ್ದ ಮೀಸಲು ಹಾಲಿನಿಂದ ತೊಳಿತಾರೆ. ಗಂಗಮ್ಮ ಮಾಡುತ್ತಾರೆ. ಆವಾಗ ಮಾಮೂಲಿ ತಂಬಿಟ್ಟು, ನೆನೆಅಕ್ಕಿ ತಂದಿರುತ್ತಾರೆ. ಎಲ್ಲ ಮುಗಿದ ಮೇಲೆ ದೇವರುಗಳನ್ನು ಮತ್ತೆ ಕಟ್ಟಿ ಪೂಜೆ ಮಾಡಿ ನೆನೆಅಕ್ಕಿ ತಿಂದು ಊರಿನ ಕಡೆಗೆ ಹೊರಡುತ್ತಾರೆ.

ಹಿಂದೆ ಈ ದೇವರು ಗಂಗಮ್ಮಗೆ ಮಜ್ಜಿಗೆ ಬಾವಿಗೆ ಹೋಗುತ್ತಿದ್ದವಂತೆ. ಮಜ್ಜಿಗೆ ಬಾವಿ ಮ್ಯಾಸ ನಾಯಕರ ಹಟ್ಟಿ ನಲಗೇತನಹಟ್ಟಿಯ ಪಕ್ಕದಲ್ಲಿರುವ ಬೊಮ್ಮನಹಳ್ಳಿ ಹತ್ತಿರ ಇದೆ. ಅನಂತರದ ಕಾಲಕ್ಕೆ ದೇವರಗುದ್ದಕ್ಕೆ ಹೋಗುತ್ತಿತ್ತು. ಈಗ ತಿಪ್ಪಲಯ ಸೆರವು (ಹಳ್ಳದ ಒಂದು ಬಾಗ) ಸ್ಥಳಕ್ಕೆ ಹೋಗುತ್ತದೆ. ಹಿಂದೆ ಈ ಗಂಗಮ್ಮಗೆ ಪೂಜೆ ಮಾಡಲು ಹೂವನ್ನು ನಿಡುಗಂಬಿ(ನಿಡಗಲ್ಲು) ಗುಡ್ಡದಿಂದ ತರುತ್ತಿದ್ದರಂತೆ. ಜೋಗಪ್ಪಗಳ ವೇಷ ಧರಿಸಿಕೊಂಡು ಹೋಗಿ ಬರುತ್ತಿದ್ದರಂತೆ. ಈಗ ಇಲ್ಲೆ ಹತ್ತಿರ ಮಲ್ಲೆಲು ಕಟ್ಟೆ (ಮಲ್ಲಿಗೆಗಳ ಕಟ್ಟೆ) ಯಿಂದ ತರುತ್ತಾರೆ. ಬುಡಿಗಿಯವರು (ಉಪಬೆಡಗು) ಮೊದಲು ಹೂವು ತರುತಿದ್ರು.

ಮೇಲೆ ಹೇಳಿದಂತೆ ನಿಡಗಂಬಿಗೆ ಮ್ಯಾಸನಾಯಕರು ಯಾತಕ್ಕಾಗಿ ವೇಷ ಧರಿಸಿಕೊಂಡು ಹೋಗಿತ್ತಿದ್ದರು ಎಂಬುದಕ್ಕೆ ಸಮುದಾಯದ ಒಳಗೆ ಸಿಗುವ ಉತ್ತರ ಅತ್ಯಂತ ಕುತೂಹಲದಾಯಕವಾಗಿದೆ. ಹಿಂದೆ ಮ್ಯಾಸ ನಾಯಕರು ನಿಡಗಲ್ಲಿನಿಂದ ದೇವರನ್ನು ಹೊತ್ತುಕೊಂಡು ಬಂದಿದ್ದರಂತೆ. ಅದಕ್ಕೆ ನಿಡಗಲ್ಲಿನವರು ಇವರು ಮ್ಯಾಸನಾಯಕರು ಎಂಬುದು ತಿಳಿದರೆ ಸಂಘರ್ಷಕ್ಕೆ ಇಳಿಯುತ್ತಾರೆ. ಮೊದಲೆಲ್ಲ ಕಡಿಯಲು ಬರುತ್ತಿದ್ದರಂತೆ.

ದೇವರು ಗಂಗಮ್ಮಗೆ ಹೊರಬಾಗ ಮುತ್ತಯ್ಯಗಳು ಮುಂದೆ ಇರುತ್ತವೆ. ಯಾವಾಲೂ ಮುತ್ತಯ್ಯಗಳು ಮುಂದೇನೆ ಇರಬೇಕಾದುದು ನಿಯಮ. ಹಳ್ಳಕ್ಕೆ ಹೋಗುವುದಕ್ಕಿಂತ ಮುಂಚೆ ಹಾದಿಯಲ್ಲಿ ರೇವು ಪಿಳ್ಳೆ ಎಂದು ಒಂದು ಕುರಿಮರಿಯನ್ನು ಕಡಿಯುತ್ತಾರೆ. ಕಡಿಯುವಾಗ ಮುತ್ತಯ್ಯಗಳ ಮುಂದೆ ಕಡೆಯಲ್ಲ. ಯಾಕೆಂದ್ರೆ ಇವರ ದೇವರಿಗೆ ರಕ್ತ ಕಂಡರೆ ಆಗುವುದಿಲ್ಲ. ಮುತ್ತಯ್ಯಗಳ ಮುಂದೆ ಈ ಕುರಿಮರಿಯನ್ನು ಕಡಿಯುವಾಗ ದೇವರಿಗೆ ಕಾಣದಂತೆ ಪಂಚೆಯನ್ನು ಅಡ್ಡ ಹಿಡಿಯುತ್ತಾರೆ. ಹೀಗೆ ಅಡ್ಡ ಹಿಡಿಯಲು ಕಂಬ್ಳಿಯನ್ನು ಬಳಸುತ್ತಾರೆ. ಗಂಗಮ್ಮ ಮುಗಿಸಿಕೊಂಡು ಊರ ಬಾಗಿಲಿಗೆ ಬಂದಾಗ ದೂಳು ಪಿಳ್ಳೆ ಅಂತ ಒಂದು ಮರಿಯನ್ನು ಕಡಿಯುತ್ತಾರೆ. ಆಗಲೂ ಅಷ್ಟೇ, ದೇವರಿಗೆ ತೆರೆ ಹಿಡಿದಿರಬೇಕು. ದೇವರು ಬರುವ ದಾರಿ ರಕ್ತವಾದರೆ ಅದು ಅಲ್ಲಿ ಬರುವುದಿಲ್ಲ. ಹಾಗೇನಾದರೂ ಆಗಿ ದೇವರು ಹಟಕ್ಕೆ ಬಿದ್ದರೆ ಮುತ್ತಯ್ಯಗಳನ್ನು ದೇವರ ಎದುರು ಮೆರಸಬೇಕು ಮತ್ತು ಎಲ್ಲರೂ ಸೇರಿ ಕೈ ಮುಗಿಯುತ್ತಾರೆ. ಇದರಿಂದ' ರಕ್ತ ಏನಾದರೂ ಆಗಿದ್ದರೆ ಮುತ್ತಯ್ಯಗಳು ಓಡುವ ರಭಸಕ್ಕೆ ರಕ್ತದ ಕಲೆಗಳು ಮುಚ್ಚಿಕೊಳ್ಳುತ್ತವೆ. ಹೀಗೆ ಗಂಗಮ್ಮಗೆ ಹೋಗಿ ವಾಪಸ್ಸು ಬರುವಾಗ ಜನರು ಕುರುಹುಗಳನ್ನು ಕೇಳುವುದು, ಅಡ್ಡಬಿದ್ದು ಕಾಲಿಂದ ತುಳಿಸಿಕೊಳ್ಳುವುದು ಮಾಡುತ್ತಾರೆ.

ಇತರ ಎಲ್ಲಾ ಕಟ್ಲೆಗಳನ್ನು ಮುಗಿಸಿಕೊಂಡು ಆದಿನ(ಸೋಮುವಾರ) ಮಧ್ಯಾಹ್ನ ಮೂರು ಗಂಟೆಯ ಹೊತ್ತಿಗೆ' ದೇವರು ಗುಡಿ ಸೇರಿಕೊಳ್ಳುತ್ತದೆ. ಆನಂತರ ಮುತ್ತಯ್ಯಗಳನ್ನು ಊರು ಹೊರಗೆ ಯಾರಾದರೂ ಮನೆಯ ಹತ್ತಿರಕ್ಕೆ ಕಿಲಾರಿ ಹೊಡೆದು ಕೊಂಡು ಹೋಗಬೇಕು. ಮತ್ತೆ ಸಾಯಂಕಾಲ ದೇವರ ಗುಡಿಯ ಮುಂದಕ್ಕೆ ಹೊಡೆದುಕೊಂಡು ಬರಬೇಕು. ಆ ದಿನ ರಾತ್ರಿ ಪೂರ್ತಿ ದೇವರೆತ್ತುಗಳು ದೇವರ ಗುಡಿಯ ಮುಂದೆಯೇ ಇರುತ್ತವೆ. ಊರಿನ ಭಕ್ತರು ಹುಲ್ಲನ್ನು ತಂದು ಎತ್ತುಗಳಿಗೆ ಹಾಕುತ್ತಾರೆ.

ಅಂದು ರಾತ್ರಿ ಊರಿನ ಮನೆ ಮನೆಯಿಂದ ಕಲೆಸಿದ ಉಳ್ಳಿ, ಕಡ್ಲೆ, ಅಲಸಂದೆಯನ್ನು ಬೆರಸಿ ಗುಗ್ಗರಿ ಹಾಕುತ್ತಾರೆ. ಆಮೇಲೆ ನಸುಕಿನಲ್ಲಿ ದೇವರೆತ್ತುಗಳನ್ನು ಪೂಜೆ ಮಾಡಿ ಗೂಡಿಗೆ ಕಳುಹಿಸುತ್ತಾರೆ. ಆವಾಗ ಕಿಲಾರಿ ದೇವರೆತ್ತುಗಳ ಹಿಂದೆ ತೆರಳಲು ಸಾಧ್ಯವಾಗುವುದಿಲ್ಲ. ಹಾಗಾಗಿ ದೇವರ ಎತ್ತುಗಳನ್ನು ಕಿಲಾರಿ ಹೋಗುವವರೆಗೂ ಬೊಮ್ಮದೇವಡ್ಲೋರು ಯಾರಾದರೂ ಒಬ್ಬ ನೋಡಿಕೊಳ್ತಾರೆ.

ಮಂಗಳವಾರದ ಸಾಯಂಕಾಲ ಮತ್ತೆ ಮುಖ್ಯವಾದ ಕಟ್ಲೆ ಇರುತ್ತದೆ. ದೇವರ ಕೊಳಲನ್ನು ಹಿಡಿದು ಪೂಜಾರಿ ದೇವರಗುಡಿಯ ಸುತ್ತ ಕುಣಿಯುತ್ತಾನೆ. ಪೆದ್ದಗಳು, ಹಿರಿಯರು, ಕಿರಿಯರು ಸೇರಿ ಮುಂದೆ ಕುಣಿಯುತ್ತಾರೆ. ಇದನ್ನು 'ಬಸವಂತಲಾಡುವುದು' ಎಂದು ಕರೆಯುತ್ತಾರೆ. ಹಿರಿಯರೆಲ್ಲಾ ಆರಿಶಿಣ, ಕುಂಕುಮ ಹಿಡಿದುಕೊಂಡು ಮುತ್ತಯ್ಯಗಳ ಮುಂದೆ, ಮುತ್ತಯ್ಯಗಳ ಹಿಂದೆ ಸ್ವಾಮಿಯ ಕೊಳಲು ಹಿಡಿದ ಪೂಜಾರಿ, ಹೀಗೆ ದೇವರ ಮನೆಯ ಸುತ್ತ ಮೂರು ಸುತ್ತು ತಿರುಗಿ ಸ್ವಾಮಿಯನ್ನು ಒಳಗೆ ಕಳುಹಿಸಿ ಕೈಮುಗಿಯುತ್ತಾರೆ. ಸೋಮುವಾರದ ರಾತ್ರಿ ಹಾಕಿದ ಗುಗ್ಗರಿಯನ್ನು ಬುಧವಾರ

ಕಂಪಳದೇವರ ಗುಡ್ಡೆಯ ಹತ್ತಿರ ತೆಗೆದುಕೊಂಡು ಹೋಗಿ ತಿಂದು ಬರುತ್ತಾರೆ. ಆ ಗುಗ್ಗರಿಯನ್ನು ತಿನ್ನಲು ಬೇಕಾಗುವ ಬೆಲ್ಲವನ್ನು ಕಿಲಾರಿ ಕೊಡಬೇಕು.

ಮಂಗಳವಾರದ ಕಟ್ಲೆ ಅಲ್ಲಿಗೆ ಮುಗಿಯಿತು. ಆನಂತರ ಊರ್ ಜನ ಬುಧವಾರ ಕಂಪಳದೇವರನ್ನು ತೆಗೆದುಕೊಂಡು ಬಲೆ, ಭರ್ಜಿ, ಮೊದಲಾದವುಗಳನ್ನು ಹಿಡಿದುಕೊಂಡು ಅಡವಿಗೆ ಬೇಟೆ ಹೋಗುತ್ತಾರೆ. ಬೇಟೆ ಮುತ್ತಯ್ಯಗಳಿಗೆ ಸೇರಬೇಕಾದುದು ಬೇಟೆಯಲ್ಲಿ ಮೊಲಗಳನ್ನು ಮಾತ್ರ ಇವರು ಬೇಟೆಯಾಡುತ್ತಾರೆ. ಬೇಟೆಯಾಡಿಕೊಂಡು ಊರಿಗೆ ಬಂದ ಮೇಲೆ ದೇವರುಗಳು ತಲೆಗಳನ್ನು ಕೂಡಿಸುವ ಕಟ್ಲೆ ಇರುತ್ತದೆ. ಚನ್ನಕೇಶವ, ಗ್ರಾದಿಪಾಲನಾಯಕ ಎರಡೂ ಒಂದಕ್ಕೊಂದು ತಲೆಗಳನ್ನು ಸೇರಿಸಿಕೊಂಡು ಆಮೇಲೆ ಗುಡಿಯ ಒಳಕ್ಕೆ ಹೋಗ್ತವೆ. ಅಲ್ಲಿಗೆ ಗುಗ್ಗರಿ ಹಬ್ಬ ಮುಗಿಯುತ್ತೆ. ಗುರುವಾರ ಕೂಡ ಒಂದು ಕೊಡದಲ್ಲಿ ಗುಗ್ಗರಿ ಇರುತ್ತವೆ. ಅವುಗಳನ್ನು ತೆಗೆದುಕೊಂಡೋಗಿ ಊರ ಹೊರಗೆ ತಿಂದು ಬರುತ್ತಾರೆ.

ನಲಗೇತು ಎರಗಯ್ಯ

ನಲಗೇತು ಎರಗಯ್ಯ ಎನ್ನುವ ಸಾಂಸ್ಕೃತಿಕ ವೀರನೊಬ್ಬನ್ ಒಂದು ಹಬ್ಬವನ್ನು ಮ್ಯಾಸ ನಾಯಕರು ಆಚರಿಸುತ್ತಾರೆ. ಈ ಹಬ್ಬ ಬಹುದಿನಗಳಿಗೊಮ್ಮೆ ಆಚರಿಸಲಾಗುತ್ತದೆ. ಎರಗಯ್ಯ ದೇವರು ಚಿತ್ರದುರ್ಗದ ತಾಲ್ಲೂಕು ಐನಳ್ಳಿಯಲ್ಲಿದೆ(ಎನ್.ಹೆಚ್ ೧೩). ಆನ್ನಿಗೆ ಹಳ್ಳದ ದಡದ ಮೇಲೆ ಈ ದೇವರ ಸನ್ನಿಧಿ ಇದೆ. ಈ ದೇವರಿಗೆ ಸೋಮುವಾರ ಮೀಸಲು ತೆಗೆದುಕೊಂಡು ಹೋಗುತ್ತಾರೆ. ಈ ದೇವರಿಗೆ ಚನ್ನಪ್ಪನೋರು(ಬಳಿಯ ಹೆಸರು)ಮೀಸಲು ತಿಳಿಸಲು ಭಾನುವಾರದ ದಿನ ದೇವರೆತ್ತುಗಳ ಗೂಡಿಗೆ ಬರುತ್ತಾನೆ. ಮೀಸಲು ತಿಳಿಸಿದ ಮೇಲೆ ಕಿಲಾರಿ ಗೂಡಿನಿಂದ ಬೆಳಗ್ಗೆ ಮೀಸಲು ತಗೊಂಡು ದೇವರ ಗುಡಿ ಹತ್ತಿರ ಬಂದು ಮುತ್ತಯ್ಯಗಳ ಪದಿಯಲ್ಲಿ ಇಡುತ್ತಾನೆ. ಆಗ ಊರಿನ ಜನರೆಲ್ಲ ಮೀಸಲು ಹಾಲು ತಂದು ಒಂದು ಸ್ವಾರೆಯಲ್ಲಿ ಕೂಡಿಸುತ್ತಾರೆ. ಆ ಹಾಲನ್ನು ಗಡಿಗೆಗಳಿಗೆ ಸರಿಯಾಗಿ ತುಂಬಿಕೊಂಡು ಹಣ್ಣುಕಾಯಿ ತಗೊಂಡು ಏಳು ಎಂಟು ಜನ ಹೊರಡದು. ಬೆಳಗ್ಗೆ ಹೊರಟರೆ ಅಲ್ಲಿಗೆ ಹೋಗುವ ಹೊತ್ತಿಗೆ ಮಧ್ಯಾಹ್ನ ೧೨ ಗಂಟೆ ಆಗುತ್ತದೆ. ಅಲ್ಲಿಗೆ ಹೋಗಿ ಹಣ್ಣುಕಾಯಿ ಮಾಡಿ ಸ್ವಲ್ಪ ಹೊತ್ತು ಕುಂತುಕೊಳ್ಳುವುದರಲ್ಲಿ ಹೊತ್ತು ಮುಳುಗೋ ಸಮಯ ಹತ್ತಿರ ಬರುತ್ತದೆ. ಆಗ ಹಾಗೆ ಮರಳಿ ಬರದೇ ಪಕ್ಕದಲ್ಲಿರುವ ರಂಗೇನಹಳ್ಳಿ ಬಾವಿಗಳ ಹತ್ತಿರ ಹಾಲು ಕಾಯಿಸಿಕೊಳ್ಳುತ್ತಾರೆ. ಅದರ ಜೊತೆಗೆ ಇಲ್ಲಿಂದ ಹೊಯ್ದಿದ್ದ ಮಂಡಕ್ಕಿಯನ್ನು ಹಾಲನ್ನು ಜೊತೆಗೆ ಹಾಕಿ ಕಾಯಿಸಿ ಕುಡಿದು ಅಲ್ಲಿಂದ ಹೊರಡುತ್ತಾರೆ. ಈ ಹಬ್ಬಕ್ಕೆ ಏಳು ಜನ ಪೆದ್ದಗಳು, ಕೋಮುದಾರರು ಮತ್ತು ಸಾವಿರದವರು ಹೊರಡಬೇಕು.

ಎರಗಯ್ಯ ಮಳೆಗಾಲದಲ್ಲಿ ಮಳೆ ಬರದಂಗೆ ಮಾಡಿಬಿಡ್ತಾನೆ ಎಂಬುದು ಈ ಸಮುದಾಯದ ನಂಬಿಕೆ. ಹೀಗಾದಾಗ ಮ್ಯಾಸ ನಾಯಕರು ಈ ನಲಗೇತು ಎರಗಯ್ಯನನ್ನು ಪೂಜಿಸುತ್ತಾರೆ.

ಮೊದಲಿಗೆ ಈತನೇ ಮಳೆಯನ್ನು ಹೀಗೆ ಮಾಡುತ್ತಾ ಇದ್ದಾನೆ ಎಂದು ತಿಳಿದು ಆತನಿಗೆ ಕೈ ಮುಗಿಯುತ್ತಾರೆ. ಮುಂದಿನವಾರ (ಸೋಮುವಾರ) ನಿನಗೆ ಹಾಲು ಹೊಯ್ದು ಪೂಜಿಸಿಕೊಂಡು ಬರುತ್ತೇವೆ ಅಂತ ಹರಕೆ ಮಾಡಿಕೊಳ್ಳುತ್ತಾರೆ.

# ದೇವರ ಎತ್ತಿನ ಕಿಲಾರಿಗಳು

ಕರ್ನಾಟಕ ಸಂಸ್ಕೃತಿಗಳ ಅಂತರ್ಯದಲ್ಲಿ ಅನೇಕ ರೋಚಕ ಹಾಗೂ ಅರ್ಥಪೂರ್ಣ ಸಂಪ್ರದಾಯ ಆಚರಣೆಗಳಿವೆ. ಆಧುನಿಕ ಪ್ರಹಾರಗಳು ಏನೆಲ್ಲ ಪ್ರಭಾವಿಸಿದರೂ ತಮ್ಮದೇ ಆದ ಅಸ್ತಿತ್ವ ಹಾಗೂ ಅನನ್ಯತೆಗಳನ್ನು ಉಳಿಸಿಕೊಂಡಿವೆ. ಅಂಥ ಸಂಪ್ರದಾಯಗಳಲಿ 'ಎತ್ತಿನ ಕಿಲಾರಿಗಳು' ಒಂದು ವಿಶಿಷ್ಟ ಸಂಪ್ರದಾಯ. ಚಿತ್ರದುರ್ಗ ಸೀಮೆಯ ಸುತ್ತ ಮುತ್ತ ವಾಸಿಸುವ ಮ್ಯಾಸನಾಯಕ ಸಮುದಾಯದಲ್ಲಿ ಕಂಡು ಬರುವ ಇದು, ಸಂಸ್ಕೃತಿ ಅಧ್ಯಯನಗಳಿಗೆ ಹಲವು ಒಳನೋಟಗಳನ್ನು ನೀಡುತ್ತದೆ.

ಕಿಲಾರಿ ಪದದ ಅರ್ಥ

ಪದ ಕೋಶಗಳು ಹೇಳುವಂತೆ ಕಿಲಾರ್ ಅಥವಾ ಕಿಲಾರಿ ಎಂದರೆ ದನಗಳ ವಿಶಿಷ್ಟವಾದ ಒಂದು ತಳಿ. ಈ ತಳಿಯ ದನಗಳನ್ನು ಸರ್ಕಾರದ ಅಧೀನದಲ್ಲಿ ಸಾಕಲಾಗುತ್ತಿತ್ತು ಎಂಬುದಾಗಿ ತಿಳಿದುಬರುತ್ತದೆ. ಕರ್ನಾಟಕದ ಹಲವು ಕಡೆಗಳಲ್ಲಿ ಕಿಲಾರಿ ದನಗಳು ಸಿಗುತ್ತವೆ. ಮ್ಯಾಸನಾಯಕ ಸಮುದಾಯದೊಳಗೆ ಕಿಲಾರಿ ಪದಕ್ಕೆ ಕಾಯುವವನು ಎಂಬ ಸಾಮಾನ್ಯ ಅರ್ಥವಿದೆ. ಇಲ್ಲಿಯ ಎತ್ತಿನ ಕಿಲಾರಿಗಳು ಇದೇ ಹಿನ್ನೆಲೆಯೊಳಗೆ ಬಳಕೆಗೊಂಡಿರುವಂತದ್ದು ಸ್ಪಷ್ಟ. ಎಲ್ಲಾ ಕಿಲಾರಿಗಳಿಗಿಂತ ದೇವರೆತ್ತಿನ ಕಿಲಾರಿಗಳು ಅತೀ ಗೌರವಾನ್ವಿತರು.

ದೇವರ ಎತ್ತುಗಳು

ಕರ್ನಾಟಕದ ಹಲವಾರು ಸಂಸ್ಕೃತಿಗಳಲ್ಲಿ ಭಕ್ತರು ತಮ್ಮ ದೈವಕ್ಕೆ ಹರಕೆ ರೂಪದಲ್ಲಿ ಗೂಳಿಯನ್ನು (ಎತ್ತನ್ನು) ಒಪ್ಪಿಸುವುದು ಸಾಮಾನ್ಯ. ಆಕಳನ್ನು ದೇವರಿಗೆ ಬಿಡುವ ಪದ್ದತಿ ಕಡಿಮೆ. ಹಾಗೆಯೇ ಇಲ್ಲೆಲ್ಲ ದೇವರಿಗೆ ಬಿಡುವ ಎತ್ತುಗಳ ಸಂಖ್ಯೆ ಅತೀ ಕಡಿಮೆ. ಆದರೆ ಮ್ಯಾಸನಾಯಕರ ಸಮುದಾಯದಲ್ಲಿ ದೇವರಿಗೆ ಆಕಳು ಮತ್ತು ಎತ್ತುಗಳೆರಡನ್ನು ಯಾವುದೇ ಭೇದಭಾವವಿಲ್ಲದೆ ಬಿಡುತ್ತಾರೆ. ಹೀಗೆ ದೇವರಿಗೆ ಬಿಟ್ಟ ದನಗಳ ಸಂಖ್ಯೆ ನೂರನ್ನು ದಾಟಿರುತ್ತದೆ. ಎತ್ತುಗಳನ್ನು ಕಾಯುವುದಕ್ಕೆ ಗುಡಿಕಟ್ಟಿನ ಹಿರಿಯರು ಹಾಗೂ ಕುಲಸಾವಿರದವರು ಕಿಲಾರಿಗಳನ್ನು ನೇಮಿಸುತ್ತಾರೆ. ಅವರನ್ನೇ ದೇವರ ಎತ್ತಿನ ಕಿಲಾರಿಗಳು ಎಂದು ಕರೆಯುತ್ತಾರೆ. ಈ ಕಿಲಾರಿಗಳು ಊರಿಂದ ಹೊರಗೆ

ಕಾಡಿಗೆ ಹತ್ತಿರವಾಗಿ ಮುಳ್ಳು ಬೇಲಿಯಿಂದ ದೊಡ್ಡಿಯನ್ನು ನಿರ್ಮಿಸಿಕೊಂಡು, ಅದರಲ್ಲಿ ಆ ದನಗಳನ್ನು ಜತನದಿಂದ ಕಾದು ಸಂಬಾಳಿಸುತ್ತಾರೆ. ಈ ದೊಡ್ಡಿಯನ್ನು ಗೂಡು ಎಂಬ ಪೂಜ್ಯ ಹೆಸರಿನಿಂದ, ದೇವರೆತ್ತುಗಳನ್ನು ಮುತ್ತಯ್ಯಗಳು, ಸುರುಬುಗಳು ಎಂಬ ಗೌರವ ನಾಮಗಳಿಂದ ಕರೆಯುತ್ತಾರೆ.

ದೇವರೆತ್ತುಗಳನ್ನು ಮುತ್ತಯ್ಯಗಳು ಎಂದು ಕರೆಯುವುದೇ ಹೆಚ್ಚು. ಮುತ್ತಯ್ಯಗಳು ಎಂದರೆ ಹಿರಿಯರು ಎಂದರ್ಥ. ಅಂದರೆ ದೇವರ ಎತ್ತುಗಳನ್ನು ಇವರು ಕುಲದ ಹಿರಿಯರ ಪ್ರತಿರೂಪವಾಗಿ ಕಂಡಿದ್ದಾರೆ. ಹೀಗೆ ದೇವರೆತ್ತುಗಳನ್ನು ಪರಿಭಾವಿಸುವ ಕ್ರಮ ಮ್ಯಾಸನಾಯಕರ ಕಂಪಳರಂಗ, ಗಾದ್ರಿಪಾಲನಾಯಕ, ಬೋರೆದೇವರು, ಬೋಸೆದೇವರು, ಬಂಗಾರದೇವರು, ಬೊಮ್ಮದೇವರು ಇವೇ ಮೊದಲಾದ ದೈವದ ಒಕ್ಕಲುಗಳಲ್ಲಿ ಮುಖ್ಯವಾಗಿದೆ. ಈ ಮುತ್ತಯ್ಯಗಳು ಇವರ ಆಚರಣೆಗಳಲ್ಲಿ ಎಷ್ಟು ಮುಖ್ಯವೆಂದರೆ, ಯಾವುದೇ ಹಬ್ಬ ಪ್ರಾರಂಭವಾಗುವುದು ಮುತ್ತಯ್ಯಗಳ ಪೂಜೆಯ ಮೂಲಕ ಮತ್ತು ಮುತ್ತಯ್ಯಗಳ ಮೀಸಲು ಹಾಲು, ತುಪ್ಪ ಬಂದ ನಂತರವೇ.

ಇಲ್ಲಿ ಗೂಡು, ದೇವರಗುಡಿ ಮತ್ತು ಉದಿಪದಿ, ಒಡಪು ಇವುಗಳ ಬಗ್ಗೆ ಕೆಲವು ವಿಚಾರಗಳನ್ನು ಹೇಳುವುದು ಉಚಿತ. ಈಗಾಗಲೇ ಹೇಳಿದ ಹಾಗೆ ಗೂಡು ದೇವರ ಎತ್ತುಗಳನ್ನು ಕೂಡಲು ಊರ ಹೊರಗೆ ಮುಳ್ಳು ಕಳ್ಳೆಗಳಿಂದ ನಿರ್ಮಿಸಿದ ದೊಡ್ಡಿ, ಈ ದೊಡ್ಡಿಯೊಳಗೆ ಒಡಪು ಇರುತ್ತದೆ. ಒಡಪು ಎಂದರೆ ದಿನಾಲು ಬೆಳಗ್ಗೆ, ಸಾಯಂಕಾಲ ಬೆಂಕಿ ಹಾಕಲು ಮಾಡಿರುವ ಒಂದು ಗುಂಡಿ. ಇದು ಸಾಮಾನ್ಯವಾದ ಗುಂಡಿಯಲ್ಲ ಅದಕ್ಕೂ ದೈವ ಮಾನ್ಯತೆ ಇದೆ. ಇದರಲ್ಲಿ ದೊರೆಯುವ ಬೂದಿಯನ್ನು ವಿಭೂತಿಯಂತೆ ಹಣೆಗೆ ಧರಿಸುತ್ತಾರೆ. ಹಾಗಾಗಿಯೇ ಈ ಗುಂಡಿಯನ್ನು ಕೇವಲ ಗುಂಡಿಯೆಂದು ಕರೆಯದೇ ಒಡಪು ಎಂದು ಕರೆದಿದ್ದಾರೆ. ದೇವರ ಗುಡಿ ಹಟ್ಟಿಯಲ್ಲಿರುತ್ತದೆ. ಆ ಗುಡಿಯ ಮುಂದೆ ಮುತ್ತಯ್ಯಗಳ ಪೂಜಾಸ್ಥಾನವೊಂದಿರುತ್ತದೆ. ಅಲ್ಲಿ ಮುತ್ತಯ್ಯಗಳ ಹಾಲಿನಿಂದ ಬಂದ ಬೆಣ್ಣೆಯಿಂದ ಗರುಡಗಂಬದ ದೀಪಗಳನ್ನು ಉರಿಸುತ್ತಾರೆ. ಮತ್ತೆ ಅಲ್ಲಿಯೂ ಒಡಪು ಇರುತ್ತದೆ.

ಕಿಲಾರಿಗಳ ನೇಮಕ ಮತ್ತು ಕೆಲಸ ಕಾರ್ಯಗಳು

ಕಿಲಾರಿಗಳನ್ನು ನೇಮಿಸುವುದು ಅತ್ಯಂತ ವ್ಯವಸ್ಥಿತ. ಗುಡಿಕಟ್ಟಿನ ಕುಲಸಾವಿರದವರು, ಹಿರಿಯರು ಸೇರಿ ಒಂದು ಕುಟುಂಬವನ್ನೇ ಈ ಕೆಲಸಕ್ಕೆ ನೇಮಿಸುತ್ತಾರೆ. ಈಗಾಗಲೇ ಸುಮಾರು ವರ್ಷಗಳ ಹಿಂದೆಯೇ ಈ ಕುಟುಂಬಗಳನ್ನು ಆಯ್ಕೆ ಮಾಡಿರುವುದರಿಂದ, ಈಗ ಕುಟುಂಬದ ಒಳಗಿನ ಜನ, ಯಾರು ಈ ವೃತ್ತಿ ಮಾಡಬೇಕೆಂಬುದನ್ನು ನಿರ್ಧರಿಸುತ್ತಾರೆ. ಕಿಲಾರಿಗಳ ಕೆಲಸಗಳು ಅತ್ಯಂತ ಕಠಿಣತರವಾದಂತಹವು ದೇವರ ಎತ್ತುಗಳನ್ನು ದಿನಾಲು ಮೇಯಿಸುವುದು. ಸುರಕ್ಷಿತವಾಗಿ ನೋಡಿಕೊಳ್ಳುವುದು, ಹಬ್ಬದ ಸಂದರ್ಭಕ್ಕೆ ಹಾಲನ್ನು ಮೀಸಲಿಡಿದು, ಅದರಿಂದ ಬಂದ ಬೆಣ್ಣೆಯನ್ನು ಮತ್ತು ಒಂದಿಷ್ಟು ಮೀಸಲು ಹಾಲನ್ನು ದೇವರಗುಡಿಗೆ ಒಪ್ಪಿಸುವುದು, ಗೂಡಿಂದ ದೇವರೆತ್ತುಗಳನ್ನು ಕರೆತಂದು ಹಬ್ಬ ಮುಗಿಸಿಕೊಂಡು ಕರೆದೊಯ್ಯುವುದು. ಗುಡಿಯ ಮುಂಭಾಗದಲ್ಲಿ ಇರುವ ಮುತ್ತಯ್ಯಗಳ ಪದಿಯಲ್ಲಿ ಪೂಜಾಕಾರ್ಯ ನೆರವೇರಿಸುವುದು. ಹಾಗೆಯೇ ಭಕ್ತರು ಗೂಡಿಗೆ

ಮಲಗಲು ಬಂದಾಗ ಅವರಿಗೆ ಪೂಜೆ ಮಾಡಿಕೊಟ್ಟು ಪ್ರಸಾದ ನೀಡಿ ಕಳುಹಿಸುವುದು ಇತ್ಯಾದಿ. ಇಂತಹ ಅನೇಕ ಮಹತ್ವದ ಧಾರ್ಮಿಕ ಕೆಲಸ ಕಾರ್ಯಗಳನ್ನು ಮತ್ತು ಸಾಮಾನ್ಯ ಕಾರ್ಯಗಳನ್ನು ಕಿಲಾರಿಗಳು ಮಾಡಬೇಕಾಗಿರುತ್ತದೆ.

ಕಿಲಾರಿಗಳ ವೇಷ ಭೂಷಣ ಮತ್ತು ಜೀವನ ನಿರ್ವಹಣೆ

ದೇವರ ಕೆಲಸವೆಂದು ಎತ್ತುಗಳನ್ನು ಕಾಯುವ ಕಿಲಾರಿಗಳಿಗೆ ಕುಲಸಾವಿರದವರಿಂದ ದೈವಿಕ ದೀಕ್ಷೆಯಾಗುತ್ತದೆ. ಇವರು ದೀಕ್ಷೆಯಾದ ದಿನದಿಂದ ಮೈಗೆ ಪೂರ್ತಿ ಬಟ್ಟೆ ಧರಿಸುವುದಿಲ್ಲ. ತಲೆಗೆ ಒಂದು ಪಾಗು. ಸೊಂಟಕ್ಕೆ ಒಂದು ಪಂಚೆ, ಹೊದಿಯಲು ಒಂದು ಪಚ್ಚಡ, ಹೆಗಲ ಮೇಲೊಂದು ಕಂಬಳಿ, ಕೈಯಲ್ಲಿ ಬಿದುರಿನ ಒಂದು ಕೋಲು ಮತ್ತು ನೀರಿನ ಕುಡಿಕೆ ಇದು ಕಿಲಾರಿಗಳ ಸಾಮಾನ್ಯ ವೇಷ. ಇವರು ಬಹಳ ದಿನಗಳ ಕಾಲ ಗೂಡಿನಲ್ಲಿಯೇ ಬಂದರಿಕೆ ಸೊಪ್ಪಿನ ತಡಿಕೆಗಳ ಮೇಲೆ ಮಲಗುತ್ತಿದ್ದರು. ಈಗೀಗ ಊರಿಗೆ ಬಂದು ಮಲಗುವ ಪರಿಪಾಠವಿದೆ.

ಭಕ್ತರು ನೀಡುವ ದವಸ ಧಾನ್ಯಗಳೇ ಇವರ ಜೀವನ ನಿರ್ವಹಣೆಗೆ ಆಧಾರ ಸುಗ್ಗಿಯ ಕಾಲದಲ್ಲಿ ಕಿಲಾರಿಗಳು ಪ್ರತಿ ಭಕ್ತರು ಕಣಗಳಿಗೆ ಬೇಟಿ ನೀಡಿ ದಾನ್ಯಗಳನ್ನು ಸಂಗ್ರಹಿಸುತ್ತಾರೆ. ಕಿಲಾರಿ ಹೋಗದೇ ಇದ್ದರು ಕೆಲ ಭಕ್ತರು ಕಿಲಾರಿಯ ಮನೆಗೆ ತಮ್ಮ ಭಕ್ತಿಯ ಸ್ವರೂಪವನ್ನು ದವಸವನ್ನು ಒಪ್ಪಿಸುತ್ತಾರೆ. ಹಬ್ಬ ಹರಿದಿನಗಳಲ್ಲಿ ದೊರೆಯುವ ಕಾಯಿ, ಕಾಸು ಕೂಡ ಜೀವನ ನಿರ್ವಹಣೆಗೆ ಪೂರಕ.

ಇವರ ವಿಶೇಷವೇನೆಂದರೆ ಅತಿಯಾದ ಮಡಿವಂತಿಕೆ ಕಿಲಾರಿಗಳು ತಮ್ಮ ಮನೆಯಲ್ಲಿ ಬೇರೆ ಸದಸ್ಯರು ಉಂಡ ತಟ್ಟೆಯಲ್ಲಿ ಉಣ್ಣುವುದಿಲ್ಲ. ಬೇರೆಯರ ಮನೆಗಳಲ್ಲಿ ಉಣ್ಣುವುದಿಲ್ಲ. ತೀರಾ ಉಣ್ಣಲೇ ಬೇಕಾದ ಪ್ರಸಂಗ ಬಂದರೆ ದೊನ್ನೆಯಲ್ಲಿ ಉಣ್ಣುತ್ತಾರೆ. ಪ್ರಯಾಣ ಏನೆಂದರೂ ಕಾಲನ್ನಡಿಗೆಯದು. ಬಹಳ ಎಂದರೆ ದ್ವಿಚಕ್ರದಲ್ಲಿ, ಅದು ಸ್ವಗೋತ್ರದವರಾದರೆ ಮಾತ್ರ. ಪಟ್ಟಣಗಳಿಗೆ ಹೋಗುವುದೇ ಅಪರೂಪ. ಇಂತಹ ಮಡಿವಂತಿಕೆ ಇದ್ದು, ಸ್ವಲ್ಪ ಸಡಿಲಗೊಳ್ಳುತ್ತಿದೆ.

ದೇವರ ರೂಪ ತಳೆದ ಕಿಲಾರಿಗಳು

ಎತ್ತುಗಳನ್ನು ಕಾಯುತ್ತಿದ್ದ ಈ ಕಿಲಾರಿ ಸಂಪ್ರದಾಯ ಸುಮಾರು ವರ್ಷಗಳಿಂದ ಅಸ್ತಿತ್ವದಲ್ಲಿದೆ ಎಂಬುದಕ್ಕೆ ಹಲವಾರು ಉದಾಹರಣೆಗಳು ಸಿಗುತ್ತವೆ. ಅಂತ ಉದಾಹರಣೆಗಳಲ್ಲಿ ಹಿಂದೇ ಕಿಲಾರಿಗಳಿಗೆ ಕಾರ್ಯನಿರ್ವಹಿಸುತ್ತಾ, ಪ್ರಕೃತಿಯಲ್ಲಿ ಅಪಾಯಗಳಿಗೆ ಸಿಕ್ಕಿ ಮಡಿದ ಕಿಲಾರಿಗಳು ಇಂದು ಪೂಜ್ಯನೀಯರಾಗಿದ್ದಾರೆ. ಅಂತವರಲ್ಲಿ ಗ್ರಾಧಿಪಾಲನಾಯಕ, ನಲಗೇತ ಎರಗಯ್ಯ ಮೊದಲಾದವರು. ಧಾರ್ಮಿಕ ವೃತ್ತಿಯಾಗಿರುವ ಕಿಲಾರಿತನ ಇಂದು ಅಂಥ ಆಕರ್ಷಣೆಯ ಕಾರ್ಯವಾಗಿ ಉಳಿದಿಲ್ಲ. ಆದರೂ ಜನರಿಗೆ ದೈವದ ಬಗೆಗೆ ಇರುವ ಭಯ, ನಂಬಿಕೆ ಸಂಪ್ರದಾಯ ರೂಪದಲ್ಲಿಯಾದರೂ ಉಳಿದಿದೆ. ಮುಂದೆಯೂ ಉಳಿಯುತ್ತದೆ.

## ಮಣ್ಣೇವು ಒಂದು ಜನಪದ ಆಚರಣೆ

ಜನಪದ ಸಮುದಾಯಗಳ ಒಡಲಲ್ಲಿ ಪಾರಂಪರಿಕವಾಗಿ ಸಾಗಿಬಂದ ಅನೇಕ ಸಂಪ್ರದಾಯ ಆಚರಣೆಗಳು ಇವೆ. ಅಂಥ ಆಚರಣೆಗಳಲ್ಲಿ ಮಣೇವು ಒಂದು. ವೈಷ್ಣವ ಸಂಪ್ರದಾಯಕ್ಕೆ ಸೇರಿದ ಈ ಆಚರಣೆ ಚಿತ್ರದುರ್ಗ ಜಿಲ್ಲೆಯ ಹಲವಾರು ಸಮುದಾಯಗಳಲ್ಲಿ ಪ್ರಚಲಿತವಿದೆ. ಅದರಲ್ಲಿ ಮ್ಯಾಸನಾಯಕರು ಹಾಗೂ ಕಾಡುಗೊಲ್ಲರಲ್ಲಿ ಪ್ರಚಲಿತವಿರುವ ಮಣೇವು ಆಚರಣೆ ಅತ್ಯಂತ ವಿಷ್ಟವೆನಿಸಿದೆ. ಈ ಆಚರಣೆ ಸಂಸ್ಕೃತಿಗಳ ವಿಕಾಸದ ಸ್ವರೂಪ, ಸಂಸ್ಕೃತಿಯ ದೃಷ್ಟಿಕೋನ ಇವೇ ಮೊದಲಾದ ಮಹತ್ವದ ಕಾರಣಗಳಿಂದ ಅತೀ ಮುಖ್ಯವೆನಿಸುತ್ತದೆ. ಅಷ್ಟೇ ಅಲ್ಲದೆ ಈ ಸಂಪ್ರದಾಯ ಹೊಂದಿರುವ ಆಶಯಗಳು, ಅರ್ಥಗಳು ಯಾರನ್ನೂ ಆಶ್ಚರ್ಯಚಕಿತರಾಗಿಸಬಲ್ಲವು. ಇಂಥ ಬಹುಮುಖ್ಯವಾದ ಆಚರಣೆ ಎನಿಸಿದ ಮಣೇವು ಆಚರಣೆಯು ಮ್ಯಾಸ ನಾಯಕ ಸಮುದಾಯದಲ್ಲಿ ಬಳಕೆಯಲ್ಲಿರುವ ಕ್ರಮವನ್ನು ಇಲ್ಲಿ ಪರಿಚಯಿಸಬಹುದುದಾಗಿದೆ.

ಮಣೇವು

ಮಣೇವು ಮ್ಯಾಸನಾಯಕರ ಪ್ರತಿಯೊಂದು ಹಬ್ಬದಲ್ಲೂ ಸಾಮಾನ್ಯವಾಗಿ ಆಚರಿಸಲ್ಪಡುವ ಆಚರಣೆ. ದೇವರು ಹಾಗೂ ಮುತ್ತಯ್ಯಗಳ (ದೇವರ ಎತ್ತುಗಳು) ಸಂಯುಕ್ತ ಸನ್ನಧಿಯಲ್ಲಿ ಇದು ನಡೆಯುತ್ತದೆ.

ಮಣೇವು ಬಗ್ಗೆ ಹೇಳುವ ಮೊದಲು ದಾಸಯ್ಯಗಳ ಸಂಪ್ರದಾಯದ ಬಗ್ಗೆ ಹೇಳಬೇಕಾಗುತ್ತದೆ. ಮ್ಯಾಸಮಂಡಲದ ಧಾರ್ಮಿಕ ವ್ಯವಸ್ಥೆಯೊಳಗೆ ದಾಸಯ್ಯಗಳು ಒಂದು ಮುಖ್ಯ ಭಾಗವಾಗಿದ್ದಾರೆ. ಗಡಿಕಟ್ಟಿನ ಕುಲಸಾವಿರದವರು ದಾಸಯ್ಯನನ್ನು ನೇಮಿಸಿ ದೀಕ್ಷೆ ಕೊಡುತ್ತಾರೆ. ಅಂದಿನಿಂದ ದಾಸಯ್ಯ ದೇವರ ಒಂದು ಭಾಗ ಮತ್ತು ನಿಷ್ಠಾವಂತ ದೈವ ಸೇವಕನಾಗಿ ಮಾರ್ಪಾಟಾಗುತ್ತಾನೆ. ಹಣೆಗೆ ಉದ್ದ ನಾಮ ಧರಿಸಿ, ಕೂದಲನ್ನು ಕತ್ತರಿಸದೆ ಮಡಿವಂತಿಕಯಿಂದ ಇರುತ್ತಾರೆ. ವಿಶೇಷವೆಂದರೆ ಸಮುದಾಯದ ಎಲ್ಲಾ ಕುಲ ಕುಟುಂಬಗಳಿಗೆ ದಾಸಯ್ಯಗಳಾಗುವ ಅವಕಾಶವಿಲ್ಲ. ಕೆಲವೇ ಕೆಲವು ಬೆಡಗಿನವರಿಗೆ ಮಾತ್ರ ಈ ಅವಕಾಶ. ಹಾಗಾಗಿ ಅವಕಾಶ ಪಡೆದಿರುವ ಬೆಡಗಿನವರು ಯಾವಾಗಲೂ ಒಬ್ಬ ದಾಸಯ್ಯನನ್ನು ಇರಿಸಿಕೊಳ್ಳುವುದು ಅನಿವಾರ್ಯ. ಚಿಕ್ಕಂದಿನಲ್ಲೇ ಇಂಥವರು ದಾಸಯ್ಯ ಎಂಬುದಾಗಿ ನಿರ್ಧರಿಸಿರುತ್ತಾರೆ. ನಂತರ ಸಮಯ ಬಂದಾಗ ಧಾರ್ಮಿಕ ಶಿಷ್ಟಾಚಾರದ ಮೂಲಕ ದೀಕ್ಷೆ ಕೊಡುತ್ತಾರೆ. ಇವರು ಆಚರಣೆಗಳ ಸಂದರ್ಭದಿಂದ ಹೊರಗೆ ಸಾಮಾನ್ಯರಂತೆ ಇರುತ್ತಾರೆ. ಆಚರಣೆಯ ಸಂದರ್ಭದ ಇವರ ಸ್ವರೂಪ ಗಮನಾರ್ಹ. ಕೆದರಿದ ಉದ್ದನೆಯ ತಲಗೂದಲು, ಸೊಂಟಕ್ಕೊಂದು ಚಲ್ಲಣ ಅಥವಾ ಪಂಚೆ ಒಂದು ಕೈಯಲ್ಲಿ ಶಂಖ, ಮತ್ತೊಂದು ಕೈಯಲ್ಲಿ ಜಾಗಟೆ, ಕಂಕಳಿಗೊಂದು ಬಿದಿರಿನ ಕೋಲು, ಹೆಗಲಿಗೆ ಒಂದು ಕಂಬಳಿ ಇದು ದಾಸಯ್ಯಗಳ ಆಚರಣಾ ಸಂದರ್ಭದ ವೇಷ ಭೂಷಣ. ಇವರು ಭಕ್ತರ ಮನೆಗಳಿಗೆ ಭಿಕ್ಷೆಗೆ ಹೋಗುವುದುಂಟು. ಭಿಕ್ಷೆಗೆ ಹೋಗುವವರಲ್ಲಿ ಕೆಲವರು ಶಾಸ್ತ್ರಕ್ಕೆ ಮತ್ತೆ ಕೆಲವರು ಜೀವನೋಪಾಯಕ್ಕೆ ಹೋಗುತ್ತಾರೆ.

ಪ್ರತಿ ಹಬ್ಬದ ಸಂದರ್ಭದ ದೇವರ ಕಟ್ಟಲೆ ಕಾರ್ಯಗಳಲ್ಲಿ ಇವರು ಕಡ್ಡಾಯವಾಗಿ ಹಾಜರಿರಬೇಕು. ಭಾಗಿಯಾಗಬೇಕು. ದೇವರ ಸನ್ನಿಧಿಗೆ ಬರುವ ದೇವರೆತ್ತುಗಳನ್ನು ಸ್ವಾಗತಿಸುವುದು,

ಸಮೂಹ ದೇವರಿಗೆ ಕೈ ಮುಗಿಯುವುದಕ್ಕೆ ಸೂಚನೆ ನೀಡುವುದು ಇವೇ ಮೊದಲಾದ ಮಹತ್ವದ ಕೆಲಸಗಳನ್ನು ಶಂಖ ಊದುವುದರ ಮೂಲಕ ನೆರವೇರಿಸುತ್ತಾರೆ. ಈ ದಾಸಯ್ಯಗಳಿಗೆ ಭಕ್ತರು ಬೆಲ್ಲ, ಕಾಯಿ, ಬಾಳೇಹಣ್ಣಿನ ಸೇವೆ ಮಾಡುತ್ತಾರೆ. ಅದನ್ನು ದಾಸಯ್ಯಗಳು ಸ್ವೀಕರಿಸುವ ಪದ್ಧತಿಯನ್ನೇ ಮಣೇವು ಎಂದು ಕರೆಯಲಾಗುತ್ತದೆ. ನಲಗೇತಲಹಟ್ಟಿಯಲ್ಲಿ ಬೆಲ್ಲವನ್ನು ಮಾತ್ರ ನೀಡುತ್ತಾರೆ. ಉಳಿದ ಕಂಪಳದೇವರ ಹಟ್ಟಿ, ನನ್ನಿವಾಳ ಮೊದಲಾದ ಸಂಸ್ಕೃತಿ ಕೇಂದ್ರಗಳಲ್ಲಿ ಬೆಲ್ಲದ ಜೊತೆಗೆ ಬಾಳೇಹಣ್ಣು, ಕಾಯಿ ಚೂರು ಕೊಡುವುದುಂಟು.

ಗುಡಿಕಟ್ಟಿನ ಪ್ರತಿಯೊಂದು ಕೋಮಿನವರು ಇಂತಿಷ್ಟು ಅಂತ ಹಣ ಕೂಡಿಸಿ ಅದರಿಂದ ಬೆಲ್ಲ ಕೊಂಡು ಅದನ್ನು ಚಿಕ್ಕ ಚಿಕ್ಕ ಚೂರುಗಳಾಗಿ ಮಾಡಿ ತರುತ್ತಾರೆ. ಇವರ ಜೊತೆಗೆ ದೇವರಿಗೆ ಹರಕೆ ಮಾಡಿಕೊಂಡ ಭಕ್ತರೂ ವೈಯಕ್ತಿಕವಾಗಿ ಬೆಲ್ಲ ತರುತ್ತಾರೆ. ದೇವರ ಗುಡಿಯ ಮುಂದೆ ಮುತ್ತಯ್ಯಗಳ ಸಾನಿಧ್ಯದಲ್ಲಿ ಬರೀ ನೆಲದ ಮೇಲೆ ಎಷ್ಟು ಜನ ದಾಸಯ್ಯಗಳು ಇರುತ್ತಾರೋ ಅಷ್ಟು ಗುಡ್ಡೆಗಳಲ್ಲಿ ಹಾಕುತ್ತಾರೆ. ಇತ್ತ ದಾಸಯ್ಯಗಳು ಕೂದಲನ್ನು ವಿಕಾರವಾಗಿ ಕೆದರಿಕೊಂಡು ಕೈಯಲ್ಲಿಡಿದ ಕೋಲನ್ನು ಮೇಲೆತ್ತಿ ಹ್ಹಾ ಹ್ಹಾ ಎಂದು ಕೂಗಿಕೊಂಡು ಕುಣಿಯುತ್ತಾ ದೇವರ ಗುಡಿ ಹಾಗೂ ಊರಿನ ಬಡ್ಡೆಕಲ್ಲನ್ನು ಸುತ್ತಿಕೊಂಡು ಬರುತ್ತಾರೆ. ಈ ಸಂದರ್ಭದಲ್ಲಿ ದಾಸಯ್ಯರಿಗೆ ಮೈಮೇಲೆ ಆವೇಶ ತುಂಬಿಕೊಂಡಿರುತ್ತದೆ. ಹಾಗೆ ಕೂಗುತ್ತಾ ಕುಣಿಯುತ್ತಾ ಬಂದವರು ಬೆಲ್ಲದ ಗುಡ್ಡೆಗಳಿಗೆ ಅಡ್ಡ ಬೀಳುತ್ತಾರೆ. ಕೈಗಳನ್ನು ಬಳಸದೆ ಇಡೀ ದೇಹವನ್ನು ಉದ್ದ ಮಲಗಿಸಿ ಬಾಯಿಯಿಂದಲೇ ಬೆಲ್ಲ ತಿನ್ನುವ ಬರದಲ್ಲಿ ಮಣ್ಣನ್ನೂ ಬೆಲ್ಲದ ಜೊತೆಗೆ ತಿನ್ನುತ್ತಾರೆ. ಅಲ್ಲಿಗೂ ಸಮಾಧಾನವಿಲ್ಲ. ಕೊನೆಗೆ ಬೇರೆಯವರು ಬೆನ್ನು ತಟ್ಟಿ ಎಚ್ಚಿಸುತ್ತಾರೆ. ಅನಂತರ ದೇವರ ಗುಡಿಯ ಮುಂದೆ ಮುತ್ತಯ್ಯಗಳ ಮೀಸಲು ಹಾಲಿನಿಂದ ಬಂದ ಮಜ್ಜಿಗೆ ಕುಡಿಯುತ್ತಾರೆ. ಇಲ್ಲಿಗೆ ಮಣೇವು ಪ್ರಕ್ರಿಯೆ ಮುಗಿಯುತ್ತದೆ. ಮೊದಲೇ ಹೇಳಿದ ಹಾಗೆ ಪ್ರತಿಯೊಂದು ಹಬ್ಬದ ಸಂದರ್ಭದಲ್ಲೂ ಮಣೇವು ಆಚರಣೆ ತೀರಾ ಸಾಮಾನ್ಯವಾಗಿದೆ. ಈ ಆಚರಣೆಯಲ್ಲಿ ನಡೆಯುವ ಘಟನೆಗಳು ಕೇವಲ ಘಟನೆಗಳಲ್ಲ. ಸಂಸ್ಕೃತಿಯ ವಿಕಾಸದಲ್ಲಿ ನಡೆದ ಮಹತ್ವದ ಚಟುವಟಿಕೆಗಳ ಉಳಿಕೆಗಳಾಗಿವೆ. ಈ ಬಗ್ಗೆ ಗಂಭೀರವಾಗಿ ಆಲೋಚಿಸಿದರೆ ಕುತೂಹಲಕರ ಅಂಶಗಳು ದೊರೆಯುತ್ತವೆ.

## ಅಲಕ್ಷಿತ ಜನಪದ ಸಾಂಸ್ಕೃತಿಕ ವೀರ : ನಲಗೇತು ಎರಗಯ್ಯ

ಅಲಕ್ಷಿತ ಜನಪದ ಸಾಂಸ್ಕೃತಿಕ ನಾಯಕರು ಎನ್ನುವ ವಿಚಾರದ ಬಗ್ಗೆ ಮಾತನಾಡುವ ಮೊದಲಿಗೆ ಅಲಕ್ಷಿತ ಎಂಬ ಪರಿಕಲ್ಪನೆಯ ಅರ್ಥ ವ್ಯಾಪ್ತಿಯ ಬಗೆಗೆ ತಿಳಿಯುವುದು ಸೂಕ್ತ. ಏಕೆಂದರೆ ಅಲಕ್ಷಿತ ಎಂಬ ಈ ಪರಿಭಾಷೆ ಇಂದಿನ ಸಂದರ್ಭದೊಳಗೆ ಸಾಮಾಜಿಕ, ರಾಜಕೀಯ ಹಾಗೂ ಸಾಂಸ್ಕೃತಿಕ ಕ್ಷೇತ್ರಗಳ ವಿಚಾರ ಮಂಥನದ ಸಂದರ್ಭದಲ್ಲಿ ಹೆಚ್ಚು ಹೆಚ್ಚು ಬಳಕೆಯಾಗುತ್ತಿದೆ. ಇಲ್ಲೆಲ್ಲ ಅಲಕ್ಷಿತ ಎಂಬ ಈ ಪದಕ್ಕಿರುವ ಅರ್ಥ ಹಿರದಾದುದು. ಸಾಮಾಜಿಕ ನ್ಯಾಯದ ವಿಶಾಲ ನೆಲೆಯಿಂದ ಹೊರಡುವ ಈ ವ್ಯಾಖ್ಯಾನಗಳು ಅಲಕ್ಷಿತರು ಎಂದರೆ ವಂಚಿತರು, ಶೋಷಿತರು, ನಿರ್ಲಕ್ಷಿಸಲ್ಪಟ್ಟವರು

ಎಂದು ಅರ್ಥೈಸಿವೆ. ಹೀಗೆ ಹೇಳುವಾಗ ಈ 'ಅಲಕ್ಷಿತ'ದ ಹುಟ್ಟಿಗೆ ಕಾರಣವಾದ ಮುಖ್ಯವಾಹಿನಿಯ ಕ್ರೂರತೆಯ ಬಗ್ಗೆಯೂ ಮಾಹಿತಿ ಇರುತ್ತದೆ. ಸಮುದಾಯದ ಕೆಲವು ಸಂಗತಿಗಳು ಮಾತ್ರ ವಿಜೃಂಭಿಸಿ ಹಲವು ಸಂಗತಿಗಳು ಕಣ್ಮರೆಯಾಗುವ ಕ್ರಿಯೆಯ ಹಿಂದೆ ಎರಡು ಮುಖ್ಯ ಕಾರಣಗಳು ಕಾಣುತ್ತವೆ. ಒಂದು ಸ್ವತಃ ಸಮುದಾಯವೇ ನನ್ನ ನಂಬಿಕೆಗೆ ವಿರೋಧವಾಗಿ ನಡೆದ ಸಂಗತಿಗಳು ಬಗ್ಗೆ ನಿರ್ಲಕ್ಷ್ಯ ತೋರುವ ಸಾಧ್ಯತೆ. ಮತ್ತೊಂದು ಅಧ್ಯಯನಕಾರರು ಒಂದು ವಿಷಯದ ಬಗ್ಗೆ ಮಾಹಿತಿ ಸುಲಭವಾಗಿ ದೊರೆಯಲಾರದು ಅಥವಾ ದೊರೆಯುವ ಮಾಹಿತಿ ತಾವು ನಂಬಿರುವ ತತ್ವ ಸಿದ್ಧಾಂತಗಳಿಗೆ ಪೂರಕವಾಗಿಲ್ಲ ಎಂಬ ಕಾರಣಗಳಿಂದ ಬರುವ ನಿರ್ಲಕ್ಷ. ಇಂಥ ಕಾರಣಗಳಿಂದಾಗಿ ಸಮುದಾಯಗಳು ಮತ್ತು ಅಧ್ಯಯನಗಳು ಕೆಲವು ಅಂಶಗಳನ್ನು ಮಾತ್ರ ಮೆರೆಸುತ್ತಾ ಹಲವು ಅಂಶಗಳನ್ನು ಮರೆಸುತ್ತವೆ. ಈ ಪ್ರಕ್ರಿಯೆ ಸಂಸ್ಕೃತಿ ಅಧ್ಯಯನಗಳ ಸಂದರ್ಭದಲ್ಲೂ ನಡೆದಿದೆ. ಇದು ಸಂಸ್ಕೃತಿ ಅಧ್ಯಯನಗಳಿಗೆ ಅಡ್ಡಿಯುಂಟು ಮಾಡುತ್ತದೆ.

ಹೀಗೆ ಒಂದು ವಿಷಯವನ್ನು ಗ್ರಹಿಸುವಾಗಲೇ ಒಂದು ಪ್ರಧಾನ ಇನ್ನೊಂದು ಅಪ್ರಧಾನ ಎಂಬ ದೃಷ್ಟಿ ದೋಷ ನಮಗೆ ಎಲ್ಲಿಂದ ಬಂತು? ಎಂಬ ಪ್ರಶ್ನೆ ಇಲ್ಲಿ ಎದುರಾಗುತ್ತದೆ. ಸಂಸ್ಕೃತಿ ಅಧ್ಯಯನಗಳ ಆರಂಭಕಾರರಾದ ಪಾಶ್ಚಾತ್ಯ ವಿದ್ವಾಂಸರುಗಳಿಂದ ಬಳುವಳಿಯಾಗಿ ಬಂದುದು ಎಂದು ಹೇಳಿದ್ದರೂ ಇದು ಪೂರ್ಣ ಸತ್ಯವಲ್ಲ. ನಮ್ಮ ದೇಶಿಯ ದೃಷ್ಟಿಕೋನಗಳೊಳಗೂ ಇಂಥ ದೋಷ ಇತ್ತೆಂಬುದಕ್ಕೆ ಅನೇಕ ಉದಾಹರಣೆಗಳನ್ನು ಕೊಡಬಹುದು. ಆದ್ದರಿಂದ ಇದು ಮನುಷ್ಯನ ಬಹಳ ಮುಖ್ಯವಾದ ಮಿತಿ. ಒಂದು ತತ್ವವು ಸಮುದಾಯ, ಸಂಸ್ಕೃತಿ, ವ್ಯಕ್ತಿತ್ವಗಳ ವಾರಸುದಾರಿಕೆಯಿಂದ ನೋಡಲು ಹೊರಡುವ ದೃಷ್ಟಿಗೆ ಸಹಜವಾಗಿ ಪ್ರಧಾನತೆ- ಅಪ್ರಧಾನತೆ ಅಂಟಿಕೊಂಡು ಬಿಡುತ್ತದೆ. ಇತಿಹಾಸ ರಚನೆಯಲ್ಲಂತೂ ಈ ಮಾದರಿಯ ರಚನೆಗಳು ಪ್ರಧಾನ ಪಾತ್ರವಹಿಸುತ್ತವೆ. ಉದಾಹರಣೆಗೆ ಸ್ವತಂತ್ರ ಚಳುವಳಿಯೆಂದಾಕ್ಷಣ ಗಾಂಧಿ, ಸುಭಾಷ್‌ಚಂದ್ರ ಬೋಸ್, ಲಾಲ ಲಜಪತ್‌ರಾಯ್, ನೆಹರು ಮೊದಲಾದ ಬೆರಳೆಣಿಕೆಯಷ್ಟು ನಾಯಕರ ಸಾಧನೆಗಳನ್ನು ಮಾತ್ರ ಹೇಳಲಾಗುತ್ತದೆ. ಅದೇ ಕಾಲಕ್ಕೆ ನಿಜವಾದ ಹೋರಾಟ ಮಾಡಿದ ದೇಶೀಯ ಸಂಸ್ಥಾನಗಳ ಅರಸ-ಅರಸಿಯರ, ವೀರ-ಸೇನಾನಿಗಳ ಬಗೆಗೆ ಮಾಹಿತಿಯೇ ಇರುವುದಿಲ್ಲ. ಇದ್ದರೂ ಅದು ಕೇವಲ ಒಂದು ಸಾಲಿನಲ್ಲಿ ಮಾತ್ರ. ಇನ್ನೂ ಹೆಚ್ಚು ಅಂದರೆ ಮುಖ್ಯ ನಾಯಕರು ಎನಿಸಿಕೊಂಡವರ ಸಾಹಸದೊಳಗೆ ಪೂರಕ ಹೋರಾಟಗಾರರಾಗಿ ಚಿತ್ರಿತರಾಗುತ್ತಾರೆ. ರಾಜ ವಂಶದ ಚರಿತ್ರೆಯಲ್ಲಿಯೂ ಅಷ್ಟೇ. ಮೈಸೂರು ಅರಸರ ಚರಿತ್ರೆಯೆಂದರೆ ನಾಲ್ವಡಿ ಕೃಷ್ಣರಾಜ ಒಡೆಯರು ಮತ್ತು ವಿಶ್ವೇಶ್ವರಯ್ಯನವರ ಕಾಲಮಾನ ಮಾತ್ರ ಮುಖ್ಯವಾಗಿ ಉಳಿದೆಲ್ಲವು ನೆಪಮಾತ್ರ ಸಮೀಕ್ಷೆ. ಇಂಥ ದೃಷ್ಟಿ ದೋಷ ನಮ್ಮ ಎಲ್ಲಾ ವಲಯಗಳಿಂದಲೂ ದೂರವಾಗಬೇಕೆಂಬ ಚಿಂತನೆ ಆರಂಭವಾಗಿದೆ. ಆದರೂ ಅದರ ಅನುಷ್ಠಾನ ಇನ್ನೂ ಸರಿಯಾದ ಪ್ರಮಾಣದಲ್ಲಿ ಸಾಗುತ್ತಿಲ್ಲ. ಸಾಂಸ್ಕೃತಿಕ ನಾಯಕರ ಬಗೆಗೆ ನಡೆದ ಅಧ್ಯಯನಗಳು ಹಾಗೂ ಸಮುದಾಯಗಳ ಅಂತರ್ ದೃಷ್ಟಿಗಳಿಗೂ ಈ ದೃಷ್ಟಿ ತಪ್ಪಿದಲ್ಲ. ೧೯೫೦ರ ದಶಕದಿಂದ ಆರಂಭವಾದ ಈ

ಸಂಶೋಧನೆ ಹಾಗೂ ಚರ್ಚೆಯ ಅಧ್ಯಯನಗಳು ಕೆಲವೇ ಕೆಲವು ಸಾಂಸ್ಕೃತಿಕ ನಾಯಕರ ಬಗೆಗೆ ಮಾತ್ರ ಗಮನಹರಿಸಿವೆ. ಹಾಗಾಗಿ ೫೦ ವರ್ಷಗಳ ದೀರ್ಘ ಸಮಯದಲ್ಲಿ ಮಲೆಯ ಮಾದೇಶ್ವರ, ಮಂಟೇಸ್ವಾಮಿ, ಜುಂಜಪ್ಪ, ಮೈಲಾರಲಿಂಗ, ಗಾದ್ರಿಪಾಲನಾಯಕ, ಎಲ್ಲಮ್ಮ, ಸಿರಿ, ಕೋಟಿಚೆನ್ನಯ್ಯ ಇಂಥ ಕೆಲವೇ ಕೆಲವು ನಾಯಕರ ಬಗ್ಗೆ ಚರ್ಚೆ, ಚಿಂತನ–ಮಂಥನ ನಡೆದಿವೆ. ಹಾಗಾದರೆ ನಮ್ಮ ಸಾಂಸ್ಕೃತಿಕ ವಲಯದೊಳಗೆ ಇರುವ ಸಾಂಸ್ಕೃತಿಕ ನಾಯಕರು ಇವರಿಷ್ಟೇನಾ? ಖಂಡಿತಾ ಅಲ್ಲ. ಇವರ ಸಾಧನೆಗಳಿಗೆ ಪೂರಕವಾಗಿ ತಮ್ಮದೇ ನೆಲೆಯೊಳಗೆ ಸಾಧನೆ ಮಾಡಿದ ಹಲವಾರು ನಾಯಕರಿದ್ದಾರೆ. ಹಾಗೆಯೇ ಸಾಂಸ್ಕೃತಿಕ ದೃಷ್ಟಿಯಿಂದ ಮೇಲೆ ಯಾವ ನಾಯಕರಿಗೂ ಕಡಿಮೆ ಅಲ್ಲದೆ ಸಾಧನೆಗೈದು ನಮಗೆ ಕಾಣದ ಹಾಗೆ ಹೂತುಹೋಗಿರುವ ನಾಯಕರೂ ಇದ್ದಾರೆ. ಇಂಥ ನಾಯಕರ ಬಗ್ಗೆ ವಿಚಾರ ಮಾಡಿ ನಮ್ಮ ಅರಿವಿನ ನೆಲೆಗಳನ್ನು ವಿಸ್ತರಿಸುವ ಪ್ರಯತ್ನ ತುರ್ತಾಗಿ ನಡೆಯಬೇಕಿದೆ. ಇಂಥ ಅಲೋಚನೆಯ ಹಿನ್ನೆಲೆಯೊಳಗೆ ಇಲ್ಲಿಯವರೆಗೂ ಪ್ರಸ್ತಾಪವಾಗಿಲ್ಲದ ಒಬ್ಬ ಸಾಂಸ್ಕೃತಿಕ ನಾಯಕನನ್ನು ಹಾಗೂ ಹೆಚ್ಚು ಚರ್ಚೆಗೊಳಗಾಗದಿರುವ ಒಬ್ಬ ಸಾಂಸ್ಕೃತಿಕ ನಾಯಕಿಯನ್ನು ಪರಿಚಯಿಸುವ ಪ್ರಯತ್ನ ಇಲ್ಲಿದೆ. ಈ ಪ್ರಯತ್ನದ ಭಾಗವಾಗಿ, ಸಾಂಸ್ಕೃತಿಕ ನಾಯಕರ ಅಧ್ಯಯನಗಳಲ್ಲಿ ಕೆಲವರು ಮಾತ್ರ ಮುಖ್ಯರಾಗಿ ಇನ್ನೂ ಹಲವರು ಅಮುಖ್ಯವಾಗಿದ್ದಕ್ಕೆ ಸಮುದಾಯ ಮತ್ತು ಅಧ್ಯಯನಗಳೆರಡೂ ಕಾರಣ ಎಂಬುದನ್ನು ಮೊದಲೇ ಹೇಳಿದ್ದೇನೆ. ಈ ಅಂಶಗಳಿಗೆ ಒಂದೆರಡು ಪೂರಕ ದೃಷ್ಟಾಂತಗಳನ್ನು ಗಮನಿಸಬಹುದು.

ಯಾರದರೂ ಒಬ್ಬ ಸಾಂಸ್ಕೃತಿಕ ನಾಯಕ ಸಾಕಷ್ಟು ಸಾಧಿಸಿದ್ದರೂ ನಮ್ಮ ಗಮನಕ್ಕೆ ಬರದೇ ಹೋಗುತ್ತಾನೆ. ಇದಕ್ಕೆ ಸಮುದಾಯ ಹೇಗೆ ಕಾರಣವಾಗುತ್ತದೆ ಎಂಬುದು ಕುತೂಹಲ, ಅನೇಕ ಸಲ ಸಮುದಾಯ ನಂಬಿಕೊಂಡಿರುವ ಮೌಲ್ಯ ವ್ಯವಸ್ಥೆಗೆ ವಿರುದ್ಧವಾಗಿ ನಡೆದುಕೊಂಡ ನಾಯಕನನ್ನು ತೀವ್ರವಾಗಿ ನಿರ್ಲಕ್ಷಿಸಲಾಗುತ್ತದೆ. ಉದಾಹರಣೆಗೆ ಮ್ಯಾಸನಾಯಕ ಸಮುದಾಯದಲ್ಲಿ ಯರಮಂಚಿ ನಾಯಕ 'ನನ್ನಿ' ಎಂಬ ಮುಸ್ಲಿಂ ಹೆಣ್ಣೊಬ್ಬಳನ್ನು ತನ್ನ ಕುಲಸ್ಥನೊಬ್ಬನಿಗೆ ಮದುವೆ ಮಾಡಿಸಿದ. ಇಂಥ ವ್ಯಕ್ತಿಯ ಬಗ್ಗೆ ಸಮುದಾಯದೊಳಗೆ ಹೆಚ್ಚಿನ ಗೌರವವಿಲ್ಲ. ಇದಕ್ಕೆ ಬೇಡರ ಪಾವಿತ್ರ್ಯತೆಯ ನಾಶ ಕ್ರಿಯೆಗಳನ್ನು ಮಾಡಿದ ಎಂಬುದು ಮುಖ್ಯ ಕಾರಣವಿರಬಹುದು ಎನ್ನಿಸುತ್ತದೆ.

ಅತಿಮಾನುಷ ನೆಲೆಯ ಸಾಧನೆ ಮಾಡಿದ ನಾಯಕರು ಮಾತ್ರ ಇಲ್ಲಿ ಮುಖ್ಯವಾಗಿ, ಸಾಮಾಜಿಕ ನ್ಯಾಯದ ಕಲ್ಪನೆಯೊಂದಿಗೆ ಕೆಲಸ ಮಾಡಿದ ಯರಮಂಚಿ ನಾಯಕರಂಥವರು ಸಮುದಾಯದ ಜಾಣ ವಿಸ್ಮೃತಿಗೆ ಒಳಗಾಗುತ್ತಾರೆ. ಇದು ಸಮುದಾಯದ ತಪ್ಪು ಎಂದು ಹೇಳುವುದಕ್ಕಿಂತ ಅದರ ನಂಬಿಕೆ ಜಗತ್ತು ಎನ್ನುವುದು ಉಚಿತ. ಇಂಥ ಕಾರಣಗಳಿಂದ ಕರ್ನಾಟಕದ ಬಹುತ್ತೇಕ ಸಮುದಾಯಗಳಲ್ಲಿ ನೂರಾರು ಜನ ನಾಯಕರು ಕಾಣದಾಗಿದ್ದಾರೆ. ಇಂಥ ನಾಯಕರ ಬಗ್ಗೆ ಮಾಹಿತಿ ಮಾತ್ರ ಕಡಿಮೆ ಪ್ರಮಾಣದಲ್ಲಾದರೂ ದೊರೆಯುತ್ತದೆ ಎಂಬುದು ಸಮಾಧಾನಕರ ಸಂಗತಿಯಾದರೂ, ಸಾರ್ವತ್ರಿಕವಾಗಿ, ಸಾರ್ವಜನಿಕವಾಗಿ ದೊರೆಯಲಾರದು ಎಂಬುದು ಗಮನಿಸಬೇಕಾದ ಸಂಗತಿ. ಸಮುದಾಯಗಳು

ನಿರ್ಲಕ್ಷಿಸಿದ ನಾಯಕರು ಕೆಲವರಾದರೆ ಮತ್ತೆ ಕೆಲವರು ಅಧ್ಯಯನಕಾರರಿಂದ ನಿರ್ಲಕ್ಷಿಸಲ್ಪಟ್ಟಿದ್ದಾರೆ. ಇದಕ್ಕೆ ಅಧ್ಯಯನಕಾರರಿಗೆ ಮಾಹಿತಿ ದೊರೆಯುವುದಿಲ್ಲ ಅಥವಾ ಇವರ ತತ್ವ ಸಿದ್ಧಾಂತಗಳಿಗೆ ಪೂರಕವಾಗಿಲ್ಲ ಎಂಬ ಕಾರಣವಿರುತ್ತದೆ ಎಂದು ಹೇಳಿದೆ. ಅಧ್ಯಯನಗಳು ಮುಖ್ಯವಾಗಿ ಕೆಲವು ಸೈದ್ಧಾಂತಿಕ ದೃಷ್ಟಿಕೋನಗಳಿಂದ ಮುನ್ನಡೆಯಬೇಕಾಗಿರುವುದರಿಂದ ಸಂಸ್ಕೃತಿಯ ಸಂಗತಿಗಳನ್ನೂ ಇಡಿಯಾಗಿ ಗ್ರಹಿಸುವುದು ಕಷ್ಟವಾಗುತ್ತದೆ. ಉದಾಹರಣೆಗೆ ಮಂಟೇಸ್ವಾಮಿಯ ಬಗ್ಗೆ ವಿಚಾರ ಮಾಡುವಾಗ ಮಂಟೇಸ್ವಾಮಿ ಕೇಂದ್ರಿತವಾಗಿಯೇ ಎಲ್ಲವೂ ನಡೆಯುತ್ತದೆ.

ರಾಚಪ್ಪಾಜಿ, ಸಿದ್ದಪ್ಪಾಜಿ ಅಂಥ ನಾಯಕರು ಪ್ರತ್ಯೇಕ ಅಸ್ತಿತ್ವವಿಲ್ಲದೆ ಮಂಟೇಸ್ವಾಮಿ ಅಧೀನ ನಾಯಕರಾಗಿ ಮಾತ್ರ ಕಂಡುಬರುತ್ತಾರೆ. ಆದರೆ ರಾಚಪ್ಪಾಜಿ, ಸಿದ್ದಪ್ಪಾಜಿ ಅವರು ಮಂಟೇಸ್ವಾಮಿಯ ಶಿಷ್ಯರಾಗುವ ಮೊದಲು ಹಾಗೂ ಮಂಟೇಸ್ವಾಮಿಯ ಕಾಲಾನಂತರದ ಸ್ಥಿತಿಗತಿಗಳ ಬಗ್ಗೆ ಇವರಿಬ್ಬರನ್ನು ಪ್ರತ್ಯೇಕವಾಗಿ  ವಿಚಾರ ಮಾಡುವ ಅನಿವಾರ್ಯತೆ ಇದೆ. ಈ ಹಿನ್ನೆಲೆಯಲ್ಲಿ ಇಲ್ಲಿಯವರೆಗೆ ವಿಚಾರ ಮಾಡಿರುವ ಸಂಗತಿಗಳ ಬಗ್ಗೆ ಮರು ವ್ಯಾಖ್ಯಾನಗಳಾಗಬೇಕಿದೆ. ಅಧ್ಯಯನಕಾರರಿಗೆ ಸಮುದಾಯದಿಂದ  ಮಾಹಿತಿ ಪಡೆಯುವುದು ಕಷ್ಟಸಾಧ್ಯ. ಈ ಕಾರಣದಿಂದಲೂ ಅನೇಕ ನಾಯಕರು ಬೆಳಕಿಗೆ ಬರದೇ ಹೋಗಿದ್ದಾರೆ. ಇಂಥ ಮಿತಿಗಳನ್ನು ಮೀರುವ ಭಾಗವಾಗಿ ಇಲ್ಲಿಯವರೆಗೆ ಸಮುದಾಯ ಹಾಗೂ ಅಧ್ಯಯನಕಾರರಿಂದ ಇಲ್ಲಿಯವರೆಗೆ ಅಲಕ್ಷಕ್ಕೆ ಗುರಿಯಾದ  ಸಾಂಸ್ಕೃತಿಕ ನಾಯಕನೊಬ್ಬನ ಪರಿಚಯಾತ್ಮಕ ವಿಶ್ಲೇಷಣೆ ಮಾಡಲಾಗಿದೆ.

ನಲಗೇತು ಎರಗಯ್ಯ

ಮ್ಯಾಸನಾಯಕರ ಸಮುದಾಯದಲ್ಲಿ ಕಂಡು ಬರುವ ಸಾಂಸ್ಕೃತಿಕ ವೀರ ಈ ಎರಗಯ್ಯ. ಮ್ಯಾಸನಾಯಕರ ಬಹುಮುಖ್ಯ ಬಳಿಯಾದ ನಲಗೇತು ವಂಶಸ್ಥ ಎರಗಯ್ಯನ ವೃತ್ತಿ ಕಿಲಾರಿತನ. ಕಿಲಾರಿಯಾಗಿ ಗಾದ್ರಿಪಾಲನಾಯಕನಂತೆ ಸಮುದಾಯದಿಂದ ಹಾಗೂ ಅಧ್ಯಯನಕಾರರಿಂದ ಅಷ್ಟೇನೂ ಪ್ರಸಿದ್ಧ ಪಡೆಯದ ಒಬ್ಬ ಸಾಂಸ್ಕೃತಿಕ ವೀರ. ಈ ಸುಮದಾಯದ ಬಹುತೇಕ ನಾಯಕರು ಮೂಲತಃ ಕಿಲಾರಿಗಳೇ ಆಗಿದ್ದಾರೆ. ಭಕ್ತರು ದೇವರಿಗೆ ಹರಕೆ ರೂಪದಲ್ಲಿ ಬಿಟ್ಟ ಎತ್ತುಗಳ ಪಾಲನೆ–ಪೋಷಣೆಯ ಹೊಣೆ ಹೊತ್ತ ಕಾರ್ಯ ಈ ಕಿಲಾರಿಗಳದು. ಕಾಡಿನಲ್ಲಿ ಪಾವಿತ್ರ್ಯತೆ ಹಾಗೂ ಶ್ರಮದಾಯಕ ಬದುಕನ್ನು ನಡೆಸುವ ಇವರು ಸದಾ ಪ್ರಯಾಣಿಸುವ ಅಲೆಮಾರಿ ಜೀವನ ಸಾಗಿಸುತ್ತಾರೆ. ಇಂಥ ವಿಶಿಷ್ಟ ಬದುಕಿನಲ್ಲಿ ಮನುಷ್ಯರಿಗಿಂತ ಪ್ರಾಣಿಗಳ ಜೊತೆ ಹೋರಾಡಿರುವುದೇ ಹೆಚ್ಚು. ಆದರೆ ಪ್ರಸ್ತುತ ಎರಗಯ್ಯ ಇದಕ್ಕೆ ವ್ಯತಿರಿಕ್ತವಾಗಿ ಮನುಷ್ಯರೊಡನೆ ಹೋರಾಟ ನಡೆಸಿರುವುದು ವಿಶೇಷ.

ಬೇಡರ ಹಟ್ಟಿಯೊಂದರ ನಲಗೇತು ವಂಶಸ್ಥರು ಪೂಜಾರಿಕೆ ಮತ್ತು ಕಿಲಾರಿತನ ಎರಡೂ ಕಾರ್ಯಗಳನ್ನು ನಿರ್ವಹಿಸುತ್ತಿರುತ್ತಾರೆ. ಇದರಲ್ಲಿ ಕಿಲಾರಿತನ ಮಾಡುತ್ತಿದ್ದವನೆ ಎರಗಯ್ಯ. ಇವನ ಅಣ್ಣ

ಪೂಜಾರಿಯಾಗಿರುತ್ತಾನೆ. ಅಣ್ಣ ಪೂಜಾರಿಗೆ ವಿವಾಹವಾಗಿದ್ದು, ತಮ್ಮ ಎರಗಯ್ಯ ಅವಿವಾಹಿತನಾಗಿದ್ದ. ಹೀಗಿರುವಾಗ ಅಣ್ಣನ ಹೆಂಡತಿ ಮೈದುನ ಎರಗಯ್ಯನ ಮೇಲೆ ಮೋಹಗೊಂಡು ಅವನ ಸಂಪರ್ಕ ಬಯಸುತ್ತಾಳೆ. ಆದರೆ ಎರಗಯ್ಯ ಮಾತ್ರ ಅತ್ತಿಗೆ ಅವ್ವನ ಸಮಾನ ಎಂದು ಹೇಳಿ ಅತ್ತಿಗೆಯ ಬಯಕೆಯನ್ನು ನಿರಾಕರಿಸುತ್ತಾನೆ. ಆದರೆ ಅತ್ತಿಗೆಯ ಬೇಡಿಕೆ ಮಾತ್ರ ಮುಂದುವರೆಯುತ್ತದೆ.

ಇದರಿಂದ ಪಾರಾಗಲು ಎರಗಯ್ಯ ತನ್ನ ಪಶುಗಳ ಹಿಂಡಿನೊಂದಿಗೆ ಹಟ್ಟಿಯಿಂದ ದೂರದ ಸ್ಥಳಕ್ಕೆ ಹೋಗಿ ಬೀಡು ಬಿಡುತ್ತಾನೆ (ಈಗಿನ ಚಿತ್ರದುರ್ಗ ಜಿಲ್ಲೆಯ ಕೂನಬೇವು ಗ್ರಾಮದ ಹತ್ತಿರವಿರುವ ಐಯ್ಯನಹಳ್ಳಿ ಗೊಲ್ಲರ ಹಟ್ಟಿಯೇ ಆ ಸ್ಥಳ). ನಂತರ ಸ್ವಲ್ಪ ದಿನದಲ್ಲೇ ಐಯ್ಯನಹಳ್ಳಿಯ ಗೊಲ್ಲರ ಕರಿಯಮ್ಮ ಎಂಬುವವಳ ಜೊತೆ ಸಂಪರ್ಕ ಬೆಳೆಸುತ್ತಾನೆ. ಇದಾದ ಸ್ವಲ್ಪ ದಿನಗಳಲ್ಲೇ ಎರಗಯ್ಯನ ಸಾವು ಸಂಭವಿಸುತ್ತದೆ. ಈ ಸಾವಿನ ಸುದ್ದಿಯನ್ನು ಪಶುಗುಂಪಿನ ಒಂದು ಗೂಳಿ ಊರಿನ ಹಿರಿಯರಿಗೆ ತಲುಪಿಸುತ್ತದೆ. ತಲುಪಿಸುವ ಕ್ರಮ ಅದ್ಭುತವಾಗಿದೆ. ಎರಗಯ್ಯ ತನ್ನ ಬೆರಳಿಗೆ ಧರಿಸಿದ್ದ ಮುತ್ತಿನ ಉಂಗುರವನ್ನು ಬಾಯಲ್ಲಿ ಕಿತ್ತು ತನ್ನ ಮೂಗೊಳಗೆ ಏರಿಸಿಕೊಂಡು ಹಟ್ಟಿಯ ಯಜಮಾನರ ಮುಂದೆ ಸೀನುತ್ತದೆ. ಇದರಿಂದ ಎರಗಯ್ಯನಿಗೆ ಒದಗಿರುವ ಅಪಾಯದ ಅರಿವು ಹಟ್ಟಿ ಯಜಮಾನರಿಗೆ ತಿಳಿದು ಗೂಳಿಯನ್ನು ಹಿಂಬಾಲಿಸುತ್ತಾರೆ. ಹೋಗಿ ನೋಡಿದರೆ ಎರಗಯ್ಯ ಸತ್ತು ಬಿದ್ದಿದ್ದ. ಆಗ ಆತನನ್ನೂ ಅಲ್ಲೇ ಹೂತು ಹಟ್ಟಿಗೆ ವಾಪಾಸ್ಸಾಗುತ್ತಾರೆ. ಆ ಸಮಾಧಿ ಗುಡ್ಡೆಗೆ ಈಗ ವರ್ಷಕ್ಕೊಮ್ಮೆ ಕೆಲವರು ಹೋಗಿ ಪೂಜಿಸಿಕೊಂಡು ಬರುವ ಪರಿಪಾಠವಿದೆ.

ಹಲವಾರು ವರ್ಷಗಳಿಗೊಮ್ಮೆ ಇಡೀ ಊರೇ ಹೋಗಿ ಪೂಜೆ ಸಲ್ಲಿಸಿ ಬರುತ್ತಾರೆ. ಆ ಸಂದರ್ಭದಲ್ಲಿ ಐಯ್ಯನಹಳ್ಳಿಯಲ್ಲಿರುವ ಕರಿಯಮ್ಮ ದೇವತೆಯನ್ನು ಆ ಸಮಾಧಿ ಗುಡ್ಡೆಯ ಹತ್ತಿರ ತಂದು ಆಕೆಗೆ ಉಡಿ-ಮಡಿ ತುಂಬಿಸಿ ಕಳುಹಿಸುವ ಸಂಪ್ರದಾಯವಿದೆ. ಅಂದು ರಾತ್ರಿ ನಲಗೇತು ಬೆಡಗಿನ ಅಣ್ಣ-ತಮ್ಮಂದಿರು ಮಾತ್ರ ಒಂದು ವಿಶಿಷ್ಟ ಆಚರಣೆ ಮಾಡುತ್ತಾರೆ. ಒಂದು ಕುರಿ ಬಲಿಕೊಟ್ಟು ಅದನ್ನೂ ಒಂದು ಬಳಿಯ ಜನ ಮಾತ್ರ ದೂರ ಹೋಗಿ ಸುಟ್ಟು ತಿಂದು ಬರುತ್ತಾರೆ (ಇದು ಎರಗಯ್ಯನ ತಿಥಿ ಎಂದು ಸಹ ಕೆಲವು ಹಿರಿಯರು ಹೇಳುವುದುಂಟು) ಎರಗಯ್ಯನ ಸಾವು ಮಾತ್ರ ನಿಗೂಢ ಮಾಹಿತಿಗಳನ್ನೊಳಗೊಂಡಿದೆ. ಈ ನಿಗೂಢತೆ ಬಗೆಗೆ ಸಮುದಾಯದಲ್ಲಿ ಸಾಕಷ್ಟು ಭಿನಾಭಿಪ್ರಾಯಗಳಿವೆ.

ತನ್ನ ಬೇಡಿಕೆಯನ್ನು ನಿರಾಕರಿಸಿ ಹೋಗಿ ಗೊಲ್ಲರ ಕರಿಯವ್ವನ ಜೊತೆ ಸಂಪರ್ಕ ಬೆಳೆಸಿದ ಈತನನ್ನು ಅತ್ತಿಗೆಯೇ ಕೊಲ್ಲಿಸಿದಳು ಎಂದು ಕೆಲವರು ಹೇಳಿದರೆ, ಮತ್ತೆ ಕೆಲವರು ಕರಿಯವ್ವನ ಕಡೆಯ ಗೊಲ್ಲರು ಬಡಿದು ಸಾಯಿಸಿದರೆಂದು ಹೇಳುತ್ತಾರೆ. ಇವೆರಡೂ ಕಾರಣಗಳನ್ನು ಅಲ್ಲಗಳೆಯುವಂತಿಲ್ಲ. ಇಂಥ ಎರಗಯ್ಯನನ್ನು ಕುರಿತಂತೆ ಇಡೀ ಸಮುದಾಯ ಒಂದೇ ರೀತಿಯ ಅಭಿಪ್ರಾಯಗಳನ್ನೂ ಹೊಂದಿಲ್ಲ. ಹಾಗೂ ಉಳಿದೆಲ್ಲ ನಾಯಕರಿಗಿಂತ ಈತನನ್ನು ಭಿನ್ನವಾಗಿ ನೋಡುತ್ತಾರೆ ಎಂಬುದನ್ನು ಇಲ್ಲಿ ವಿಶೇಷವಾಗಿ ಗಮನಿಸಬೇಕು. ಈ ರೀತಿಯಲ್ಲಿ ಸಂಸ್ಕೃತಿಯ

ಸಂಪೂರ್ಣ ಗ್ರಹಿಕೆಗೆ ಸಹಾಯಕವಾದ ಅನೇಕ ಸಂಗತಿಗಳು ಮತ್ತು ಸಾಂಸ್ಕೃತಿಕ ನಾಯಕರು ನಮ್ಮ ಗಮನಕ್ಕೆ ಬರದೇ ಹೋಗುವುದು ಆತಂಕದ ಸಂಗತಿ. ಆದ್ದರಿಂದ ಹೀಗೆ ಮರೆಯಾಗಿ ಕೂತಿರುವ ಅನೇಕ ಸಂಗತಿಗಳನ್ನು ತಿಳಿಯುವ ಪ್ರಕ್ರಿಯೆಗೆ ವೇಗದ ಚಾಲನೆ ದೊರೆಯಬೇಕಿದೆ.

ಪರಾಮರ್ಶನ


೧. ಅಲಕ್ಷಿತ ವಚನಕಾರರ ಲೋಕದೃಷ್ಟಿ, ಬಿ.ಎಂ. ಪುಟ್ಟಯ್ಯ, ೧೯೯೯, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ.
೨. ಚಿತ್ರದುರ್ಗ ಜಿಲ್ಲೆಯ ಬುಡಕಟ್ಟು ವೀರರು, ವಿರೂಪಾಕ್ಷಿ ಪೂಜಾರಹಳ್ಳಿ,೨೦೦೨, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ.
೩. ಕರ್ನಾಟಕದ ಬುಡಕಟ್ಟುಗಳು ಭಾಗ–೧(ಪ್ರ.ಸಂ)ಎಚ್.ಜೆ. ಲಕ್ಕಪ್ಪಗೌಡ, ೨೦೦೧, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು
೪. ಬುಡಕಟ್ಟು ಸಮಾಜ ಹುಟ್ಟು ಸಾವಿನ ನಡುವೆ, ಗಂಗಾಧರ ದೈವಜ್ಞ, ೨೦೦೦ ಕನ್ನಡ ವಿಶ್ವವಿದ್ಯಾನಿಲಯ, ಹಂಪಿ.
೫. ಬುಡಕಟ್ಟು ದೈವಾರಾಧನೆ, ಹಿ.ಚಿ. ಬೋರಲಿಂಗಯ್ಯ ೨೦೦೦, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ.
೬. ಜನಪದ ನಾಯಕತ್ವ (ಸಂ) ಚಕ್ಕೆರೆ ಶಿವಶಂಕರ, ೨೦೦೩, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.
೭. ಮನದಾಳದ ಕನಸುಗಳು, (ಸಂ) ಕಾಳೇಗೌಡನಾಗವಾರ ಮತ್ತು ಮೀರಾಸಾಬಿಹಳ್ಳಿ ಶಿವಣ್ಣ ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.
೮. ಧರ್ಮ (ಸಂ) ರಹಮತ್ ತರೀಕೆರೆ, ೨೦೦೦ ಕನ್ನಡ ವಿಶ್ವವಿದ್ಯಾನಿಲಯ, ಹಂಪಿ.


## ನಲಗೇತಲಹಟ್ಟಿಯ ಸಾಂಸ್ಕೃತಿಕ ನೋಟ

ನಲಗೇತನಹಟ್ಟಿ ಚಿತ್ರದುರ್ಗ ಜಿಲ್ಲೆ, ಚಳ್ಳಕೆರೆ ತಾಲ್ಲೂಕಿನ ಮ್ಯಾಸನಾಯಕರ ಒಂದು ಹಟ್ಟಿ. ಈಚೆಗೆ ಒಂದು ನೂರೋ ಇನ್ನೂರೋ ವರ್ಷಗಳ ಹಿಂದೆಯಷ್ಟೇ ಕಟ್ಟಿದ ಹಟ್ಟಿಯಿದು. ಇದು ಮ್ಯಾಸನಾಯಕರೇ ಹೆಚ್ಚು ಇರುವ ಹಟ್ಟಿ. ಬೇರೆ ಜಾತಿಯವರು ಇದ್ದರೂ ಸಂಖ್ಯೆ ತೀರಾ ಕಡಿಮೆ. ವಿಶೇಷವೆಂದರೆ ಈ ಹಟ್ಟಿಯಲ್ಲಿ ವಾಸಿಸುವ ಮ್ಯಾಸನಾಯಕ ಕುಟುಂಬಗಳಲ್ಲಿ ಯಾವುದೂ ಬೇರೆ ಅಲ್ಲ. ಎಲ್ಲವೂ ರಕ್ತ ಸಂಬಂಧವೇ, ಇಂಥದ್ದೇ ಭಾವನಾತ್ಮಕ ಸಂಬಂಧ ಇತರೆ ಜಾತಿಯವರಿಗೂ ಇದೆ ಎನ್ನುವುದು ಅಚ್ಚರಿ ಮೂಡಿಸುವ ಸಂಗತಿ. ಒಟ್ಟಾರೆ ನಲಗೇತನಹಟ್ಟಿ ೩೦೦ ರಿಂದ ೭೦೦ ಮನೆಗಳ ಹಟ್ಟಿಯಾಗಿದ್ದು, ಇಲ್ಲಿ ಸುಮಾರು ೫೦ ಪಿಂಜಾರ, ೧೦೦ ಮಾದಿಗ ಸಮುದಾಯಗಳ ಮನೆಗಳಿದ್ದು, ಉಳಿದವೆಲ್ಲವೂ ಮ್ಯಾಸನಾಯಕರವೆ.

ಮ್ಯಾಸನಾಯಕರಲ್ಲಿ ಮುಖ್ಯ ಬೆಡಗುಗಳಲ್ಲಿ ಒಂದಾದ ನಲಗೇತಲು ಗುಂಪಿನವರು ಈ ಹಟ್ಟಿಯ ಸ್ಥಾಪಕರು ಎಂಬುದು ನಂಬಿಕೆ. ಅದಕ್ಕಾಗಿಯೇ ಇದನ್ನು ನಲಗೇತಲಹಟ್ಟಿ ಎಂದು ಕರೆದಿರುವುದು. ಹಾಗಂತ ಇನ್ನುಳಿದ ಬೆಡಗಿನವರು ಇದರ ಸ್ಥಾಪನೆ ಹಾಗೂ ಶ್ರೇಯೋಭಿವೃದ್ಧಿಗೆ ಕಾರಣವಾಗಿಲ್ಲ ಅಥವಾ ಶ್ರಮಿಸಿಲ್ಲ ಎಂದು ಭಾವಿಸಿದರೆ ತಪ್ಪಾಗುತ್ತದೆ. ಸಮುದಾಯದೊಳಗೆ ಹಲವು ಕಾರಣಗಳಿಂದ ಪ್ರಮುಖರೆನಿಸಿರುವ ನಲಗೇತಲು ಯಜಮಾನರಾಗಿ ರೂಪಿತಗೊಂಡಿದ್ದಾರೆ. ಇದು ಸಹಜವೆಂಬಂತೆ ಇವರ ಹೆಸರು ಒಂದು ಊರಿನ ಹೆಸರಾಗಿದೆ.

ಈ ಹಟ್ಟಿಯ ಮ್ಯಾಸನಾಯಕ ಸಮುದಾಯ ಇಲ್ಲಿಗೆ ಒಂದು ನೂರು, ನೂರಾ ಐವತ್ತು ವರ್ಷಗಳ ಹಿಂದೆ ಅಷ್ಟೇ ಅಲೆಮಾರಿ ಸಮುದಾಯವಾಗಿತ್ತು. ಇದಕ್ಕೆ ಈಗಲೂ ಅನೇಕ ಆಧಾರಗಳನ್ನು ಕೊಡಬಹುದಾಗಿದೆ. ಇಲ್ಲಿನ ಹಿರಿಯ ತಲೆಮಾರಿನ ಜನರು ಈ ಬಗ್ಗೆ ಇನ್ನೂ ಹಸಿಯಾದ ಅನುಭವಗಳನ್ನು ಹೇಳುತ್ತಾರೆ. ಅಷ್ಟೇ ಅಲ್ಲ ಪ್ರಸ್ತುತ ಹಟ್ಟಿಯ ಕೆಲವು ಮೈಲಿಗಳ ಅಂತರದಲ್ಲಿ ಇವರು ಗುಡಿಸಲು ಕಟ್ಟಿ ವಾಸಮಾಡಿದ ಅಡಿಪಾಯಗಳು ಎರಡು ಮೂರು ಕಡೆ ಇನ್ನೂ ಸಾಕ್ಷಿಭೂತವಾಗಿ ನಿಂತಿವೆ. ತಮಗೆ ಎಲ್ಲೆಲ್ಲಿ ಅನುಕೂಲಕರ ಪರಿಸ್ಥಿತಿ ಕಂಡು ಬರುತ್ತದೆ. ಅಲ್ಲಿ ಹಟ್ಟಿ ಕಟ್ಟಿಕೊಂಡು ಜೀವಿಸಿದ ಅನೇಕ ಸಂದರ್ಭಗಳಿವೆ. ಇಂಥಲ್ಲಿ ಇವರ ಮನೆಗಳ ಸ್ವರೂಪ ವಿಶಿಷ್ಟವಾಗಿರುವುದು ತಿಳಿಯಬೇಕಾದ ಸಂಗತಿ. ಕಲ್ಲು ಮಣ್ಣಿನಿಂದ ಗೋಡೆಕಟ್ಟಿ ಕಾಡು ಹುಲ್ಲಿನಿಂದ ಮೇಲೊದಿಕೆ ಹಾಕುವುದು. (ಇದಕ್ಕೂ ಹಿಂದೆ ಬರೀ ಕಟ್ಟಿಗೆ ಮತ್ತು ಹುಲ್ಲಿನಿಂದ ಸುತ್ತು ಗುಡಿಸಲು ನಿರ್ಮಿಸಿ, ಅದನ್ನೇ ಎಲ್ಲಿಗೆ ಬೇಕೋ ಅಲ್ಲಿಗೆ ಕೊಂಡೊಯ್ಯುತ್ತಿದ್ದರಂತೆ) ಅನೇಕ ಸಲ ತಮ್ಮ ತಾಣಗಳನ್ನು ಬದಲಾಯಿಸುತ್ತಿದ್ದ ಇವರಿಗೆ ಇಂಥ ಮನೆ ನಿರ್ಮಾಣ ಪದ್ಧತಿ ತುಂಬಾ ಉಪಯೋಗವುಳ್ಳಂಥದ್ದು. ಈಗಲೂ ಸಹ ಈ ಮಾದರಿಯ ಮನೆಗಳನ್ನು ಹಟ್ಟಿಯಲ್ಲಿ ನೋಡಬಹುದಾಗಿದೆ. ವಿಶೇಷವೆಂದರೆ, ಪಶುಪಾಲನೆಯನ್ನೇ ಪ್ರಧಾನ ವೃತ್ತಿಯಾಗಿಸಿಕೊಂಡಿದ್ದ ಈ ಜನ ಸಮುದಾಯ ಕೆಲವು ಸಂದರ್ಭಗಳಲ್ಲು ಉಪ್ಪು ತಯಾರಿಸಿದ್ದಕ್ಕೆ ಕೂಡ ಇಂದು ನಿದರ್ಶನಗಳು ಸಿಗುತ್ತವೆ. ಹಟ್ಟಿಯ ಪಕ್ಕದ ಹಳ್ಳದ ದಂಡೆಯ ಮೇಲೆ ಉಪ್ಪು ತಯಾರಿಸಿದ ಸ್ಥಳಗಳು ಇವೆ.

ಹಟ್ಟಿಗಳನ್ನು ತಮ್ಮ ಅವಶ್ಯಕತೆ ಮತ್ತು ಅನುಕೂಲತೆಗಳಿಗೆ ಅನುಗುಣವಾಗಿ ಬದಲಾಯಿಸಿದ ಇವರು ಒಂದು ಕಡೆ ನೆಲೆನಿಂತಿದ್ದಾರೆ. ಹಾಗೆ ನೆಲೆನಿಂದ ಸ್ಥಳವೇ ನಲಗೇತನಹಟ್ಟಿ. ಇಲ್ಲಿ ತುಂಬ ಆಶ್ಚರ್ಯಕರವಾದ ಸಂಗತಿಯೊಂದಿದೆ. ಏನೆಂದರೆ ಈ ಸಮುದಾಯದ ಅಲೆಮಾರಿ ಮನೋಭಾವ ಆಚರಣೆಗಳ ಮೂಲಕ ಉಳಿದಿದೆ. ಉದಾಹರಣೆಗೆ ಇಲ್ಲಿ ಚಾಲ್ತಿಯಲ್ಲಿರುವ ಪದಿಯಾಗಳ ದೇವರು ಆಚರಣೆಯನ್ನು ಗಮನಿಸಬಹುದು ಈ ಸಂಪ್ರದಾಯ ಮೂರು ವರ್ಷಕ್ಕೊಮ್ಮೆ ಆಚರಣೆಗೊಳ್ಳುತ್ತದೆ. ಈ ಆಚರಣೆಯಲ್ಲಿ ಊರಿನ ಜನ ಮತ್ತು ದೇವರು ಮೂರು ದಿನಗಳ ಕಾಲ ಊರ ಹೊರೆಗೆ ನೆಲಸುತ್ತಾರೆ. ಅಲ್ಲಿ ದೇವರ ಗುಡಿ ಹಾಗೂ ವಾಸದ ಮನೆಗಳನ್ನು ತಾತ್ಕಾಲಿಕವಾಗಿ ನಿರ್ಮಿಸಿಕೊಳ್ಳುತ್ತಾರೆ. ಹಾಗೂ ಮೂರು ದಿನಗಳ ಕಾಲ ಅಲ್ಲಿಯೇ ನೆಲಸಿ ನಂತರ ಹಟ್ಟಿಯೊಳಗೆ ವಾಪಸ್ಸಾಗುತ್ತಾರೆ. ಬದುಕಿನ ಒಂದು ಕ್ರಮ ಹೀಗೆ ಇದ್ದಕ್ಕಿದ್ದಂತೆ ಪ್ರಜ್ಞಾಪೂರ್ವಕವಾಗಿ ಆಚರಣೆಯ ಸ್ವರೂಪವನ್ನು ಪಡೆಯುವುದು ಅಧ್ಯಯನಕಾರರಿಗೆ ದಿಗ್ಭ್ರಮೆ ಮೂಡಿಸುತ್ತದೆ. ಇಂಥ ಹಲವಾರು ಉದಾಹರಣೆಗಳು ನಲಗೇತನಹಟ್ಟಿಯ ಸಾಂಸ್ಕೃತಿಕ ಬದುಕಿನೊಳಗಿವೆ ಎಂಬುದು ಗಮನಾರ್ಹ.

ಇಡೀ ಮ್ಯಾಸನಾಯಕ ಸಮುದಾಯ ಪಶ್ಚಿಮ ದಿಕ್ಕು, ಕ್ರೌಂಚಕಾಡು, ಕೊಂಕಿ ಜರಮಲೆಯಿಂದ ಬಂದವರು ಎಂಬುದು ಹಿರಿಯರ ಅಭಿಪ್ರಾಯ. ಈ ನೆಲೆ ಶ್ರೀಶೈಲ ಎಂಬುದಾಗಿ ಅಧ್ಯಯನಕಾರರು ಅಭಿಪ್ರಾಯಪಟ್ಟಿದ್ದಾರೆ. ಇದು ಸತ್ಯವೂ ಹೌದೆನ್ನುವುದಕ್ಕೆ ಹತ್ತಾರು ಆಧಾರಗಳು ಸಿಗುತ್ತವೆ. ಶ್ರೀಶೈಲದಿಂದ

ಹೊರಟು ನಿಡಗಲ್ಲು ಮಾರ್ಗವಾಗಿ ನಾಯಕನಹಟ್ಟಿಗೆ ತಲುಪಿ ಅಲ್ಲಿಂದ ಬೇರೆ ಬೇರೆ ಗುಂಪುಗಳಾಗಿ ಸಿಡಿದು ಹೋಗಿರುವುದಕ್ಕೆ ಇಂದಿಗೂ ಸಿಗುವ ಐತಿಹ್ಯಗಳು, ಭೌತಿಕ ನೆಲೆಗಳು ಇದಕ್ಕೆ ಮುಖ್ಯ ಆಧಾರಗಳಾಗುತ್ತವೆ.

ಇಲ್ಲಿ ಕಂಪಳದೇವರಹಟ್ಟಿಯ ಬಗ್ಗೆಯೂ ಕೆಲವು ಮಾಹಿತಿಗಳನ್ನು ತಿಳಿಯುವುದು ಅನುಕೂಲ. ಕಂಪಳ ಎಂದರೆ ಗುಂಪು. ಮ್ಯಾಸನಾಯಕರ ಗುಂಪನ್ನು ಮ್ಯಾಸ ಗಂಪಳ, ಮ್ಯಾಸ ಕಂಪಳ, ಮ್ಯಾಸಮಂಡಲ ಎಂದು ಕರೆಯುವುದು ವಾಡಿಕೆ. ಕಂಪಳದೇವರಹಟ್ಟಿ ಈ ಹಿನ್ನೆಲೆಯಲ್ಲಿಯೇ ರೂಪುಗೊಂಡಿರಬೇಕು. ಇಡೀ ಮ್ಯಾಸಕಂಪಳ ಅಲ್ಲಿ ವ್ಯಾಜ್ಯಗಳನ್ನು ಕಟ್ಟಿಕೊಂಡು ದೂರವಾಗಿರಲು ಸಾಧ್ಯವಿದೆ. ಇದಕ್ಕೆ ನಲಗೇತಲಹಟ್ಟಿಯಲ್ಲಿ ವಾಸವಾಗಿರುವ ಮ್ಯಾಸನಾಯಕರ ಗುಂಪು ಸ್ಪಷ್ಟ ಉದಾಹರಣೆ. ಇವರು ಕಂಪಳದೇವರ ಹಟ್ಟಿಯಿಂದ ಸಿಡಿದು ಬಂದವರು ಎನ್ನುವುದಕ್ಕೆ ವಿಫುಲ ಆಧಾರಗಳು ಸಿಗುತ್ತವೆ. ನಲಗೇತಲಹಟ್ಟಿಯ ಪ್ರತಿಯೊಂದು ಹಬ್ಬ ಆರಂಭವಾಗುವುದೇ ಕಂಪಳದೇವರ ಪೂಜೆಯೊಂದಿಗೆ. ಇಲ್ಲಿನ ದೇವರೆತ್ತುಗಳು (ಮುತ್ತಯ್ಯಗಳು) ಕಂಪಳದೇವರ ಭಾಗವಾಗಿಯೇ ಬರುತ್ತವೆ. ಅಷ್ಟೇ ಅಲ್ಲ ಇದರ ಬಗ್ಗೆ ಹಟ್ಟಿಯ ಹಿರಿಯರ ಅನುಭವಗಳು ಇನ್ನು ಹಸಿ ಹಸಿಯಾಗಿವೆ. ವಿಶೇಷವೆಂದರೆ ಈ ಕುರಿತಂತೆ ಗುಪ್ತತೆ ಮನೆಮಾಡಿದ್ದು, ಯಾರೊಬ್ಬರು ಬಿಚ್ಚು ಮನಸ್ಸಿನಿಂದ ಮಾತನಾಡುವುದಿಲ್ಲ. ಇಂಥ ಗುಪ್ತತೆಗಳು ಹಲವಿದ್ದು ಅವುಗಳನ್ನು ಭೇದಿಸಿದರೆ ಮ್ಯಾಸನಾಯಕರ ಸಾಂಸ್ಕೃತಿಕ ಚರಿತ್ರೆ ಸ್ಪಷ್ಟವಾಗುತ್ತದೆ.

ನಲಗೇತನಹಟ್ಟಿ ಅಷ್ಟೇ ಅಲ್ಲ ಇಡೀ ಮ್ಯಾಸನಾಯಕ ಸಮುದಾಯದ ಧಾರ್ಮಿಕ ವ್ಯವಸ್ಥೆ ಹಲವು ಜಾತಿಗಳ ಸಂಗಮಸ್ಥಾನ. ಇದು ಹುಸಿ ಜಾತ್ಯಾತೀತತೆಯ ಬಗ್ಗೆ ಮಾತನಾಡುವ ಆಧುನಿಕ ವ್ಯವಸ್ಥೆಯನ್ನು ಅಣುಕಿಸುವಂತಿದೆ. ಪಶುಪಾಲನಾ ವೃತ್ತಿಯನ್ನು ಮಾಡುತ್ತಾ ಅಲೆದಾಡುತ್ತಿದ್ದ ಈ ಸಮುದಾಯ ನಾನಾ ತರದ ಕಷ್ಟಗಳನ್ನು ಅನುಭವಿಸಿದೆ. ಅಂಥ ಕಷ್ಟಗಳಲ್ಲಿ ತಮಗೆ ಸಹಕರಿಸಿದವರು ಯಾರೇ ಆಗಲಿ, ಅವರು ಯಾವುದೇ ಜಾತಿ, ಮತ, ಪಂಥಕ್ಕೆ ಸೇರಿರಲಿ ಅವರನ್ನು ತಮ್ಮ ಕುಲದೊಳಗೆ ಸೇರಿಸಿಕೊಳ್ಳುವುದರ ಮೂಲಕ ಗೌರವಿಸಿರುವುದು ಕಂಡು ಬರುತ್ತದೆ. ಇದಕ್ಕೆ ಒಂದೆರಡು ಉದಾಹರಣೆಗಳನ್ನು ಮೌಖಿಕ ಮಾಹಿತಿಯನ್ನಾದರಿಸಿ ನೋಡಬಹುದು.

ಅ. ಮ್ಯಾಸನಾಯಕರು ತಮ್ಮ ದನಗಳ ಹಿಂಡಿನೊಡನೆ ನಾಯಕನಹಟ್ಟಿಯ ಭೂ ಪ್ರದೇಶದಲ್ಲಿ ವಾಸಿಸುತ್ತಿರುವಾಗ ಏನೇನೋ ಕಾರಣಗಳಿಗಾಗಿ ಒಂದು ಗುಂಪಿನ ಈ ಜನರಲ್ಲಿ ಒಡಕುಂಟಾಗುತ್ತದೆ. ಪರಿಣಾಮ ದನಗಳೂ ಸೇರಿದಂತೆ ಒಂದು ಸಮುದಾಯ ಮೂರು ಗುಂಪಾಗಿ ಒಡೆಯುತ್ತದೆ. ಈ ಮೂರು ಗುಂಪುಗಳಲ್ಲೇ ಹಕ್ಕುದಾರಿಕೆಗಾಗಿ ಜಗಳಗಳು ನಡೆಯುತ್ತವೆ. ನಾವು ಶ್ರೇಷ್ಠ, ನಾವು ಶ್ರೇಷ್ಠ ಎಂಬ ಭಾವನೆ ಎಲ್ಲರಲ್ಲೂ, ಕೊನೆಗೆ ತಮ್ಮ ದನಗಳಿಗೆ ಪಂದ್ಯವನ್ನು ಏರ್ಪಾಟುಮಾಡುತ್ತಾರೆ. ಆ ಪಂದ್ಯ ಎಂತಹದ್ದು ಅಂದ್ರೆ ದನಗಳನ್ನು ಮೆರೆಸುವುದು (ಓಡಿಸುವುದು). ಅವು ಓಡುವ ಹಾದಿಗೆ ಅಡ್ಡ ಕತ್ತರಿಗಳನ್ನು ವಿಷದ ಕಾಲುವೆಯನ್ನು ಹರಿಸುವುದು. ದನಗಳು

ಅವುಗಳನ್ನು ದಾಟಿ ಓಡಬೇಕು. ಯಾರ ಗುಂಪಿನ ದನಗಳು ಇವುಗಳನ್ನು ದಾಟಿ ಓಡುತ್ತವೆಯೋ ಅವರು ಶ್ರೇಷ್ಠರು ಎಂಬ ಷರತ್ತು. ಈ ಸಂದರ್ಭದಲ್ಲಿ ಒಂದು ಗುಂಪಿನ ದನಗಳು ಮಾತ್ರ ಗೆಲ್ಲುತ್ತವೆ. ಆ ಗುಂಪು ನಲಗೇತಲದು. ನಲಗೇತಲ ಮುತ್ತಯ್ಯಗಳು ಪಂದ್ಯವನ್ನು ಗೆದ್ದಿದಕ್ಕೆ ಒಬ್ಬ ಬುಡಬುಡಿಕೆಯವನು ಸಹಕರಿಸಿದ್ದನಂತೆ, ಅದಕ್ಕಾಗಿ ಆತನ ಸಹಾಯಕ್ಕೆ ಪ್ರತಿಯಾಗಿ ನಲಗೇತಲ ತಮ್ಮ ಧಾರ್ಮಿಕ ವ್ಯವಸ್ಥೆಯೊಳಗೆ ಒಂದು ಹಕ್ಕುದಾರಿಕೆಯನ್ನು ನೀಡಿದರು.

ಆ. ನನ್ನಿನಾಳ ಎಂಬ ಊರೊಳಗೆ ಇಂದಿಗೂ ಒಂದು ಕಾಗೆ ಪ್ರವೇಶ ಮಾಡುವುದಿಲ್ಲ ಎನ್ನುವುದು ಸ್ವಾರಸ್ಯಕರ ಸಂಗತಿ. ಇದಕ್ಕೆ ಪೂರಕವಾಗಿ ಒಂದು ಐತಿಹ್ಯವಿದೆ. ಅದರ ಪ್ರಕಾರ ನನ್ನಿವಾಳಕ್ಕೆ ಬೇರೆ ಶಕ್ತಿಗಳಿಂದ ಅಪಾಯವಿದೆ ಎಂದು ತಿಳಿದು ಇಡೀ ಆ ಊರಿಗೆ ಹೊರಗಿನಿಂದ ಒಂದು ಪ್ರಾಣಿ –ಪಕ್ಷಿ ಪ್ರವೇಶ ಮಾಡದಂತೆ ಮಂತ್ರದಕಟ್ಟು ಮಾಡಿಸಿದರಂತೆ. ಅಂದು ಅಂಥ ಕಟ್ಟು ಮಾಡಿದ ವ್ಯಕ್ತಿಗೆ ಅವರು ತಮ್ಮ ಧಾರ್ಮಿಕ ವ್ಯವಸ್ಥೆಯ ಸದಸ್ಯತ್ವ ಕೊಟ್ಟು ತಮ್ಮೊಳಗೆ ಸೇರಿಸಿಕೊಂಡರಂತೆ.

ಇಂಥ ಅನೇಕ ಸ್ವಾರಸ್ಯಕರವಾದ ಕಥೆಗಳು ಹಾಗೂ ಐತಿಹ್ಯಗಳಿಂದ ಮ್ಯಾಸನಾಯಕ ಸಮುದಾಯದೊಳಗೆ ಇರುವ ಸಾಮರಸ್ಯದ ನೆಲೆಗಳು ತಿಳಿಯುತ್ತವೆ. ಇಲ್ಲಿ ಹೇಳಬೇಕಾದ ಮುಖ್ಯ ಸಂಗತಿ ಎಂದರೆ, ಇಷ್ಟೊಂದು ಜಾತಿ ಸಾಮರಸ್ಯವನ್ನು ಗಳಿಸಿದ ಈ ಸಮುದಾಯ ಅದನ್ನು ಹೇಳಲು ಬಯಸುವುದಿಲ್ಲ. ಯಾಕೆಂದು ನೋಡಿದರೆ ಈ ಹೊತ್ತಿಗೆ ಜನರಲ್ಲಿ ಬೆಳೆದಿರುವ ಕ್ರೂರ ಮನೋಭಾವ ಅದನ್ನು ಸಂಘರ್ಷಕ್ಕೆಡೆ ಮಾಡುವುದೆಂಬ ಭೀತಿ ಕಾರಣವಾಗಿದೆ.

ನಲಗೇತಲಹಟ್ಟಿಯ ಬಗ್ಗೆ ಹೇಳುವಾಗ ಹೇಳಲೇಬೇಕಾದ ಮತ್ತೊಂದು ಸಂಗತಿ ಮಡಮಂತಿಕೆಯದು. ಇಲ್ಲಿಯ ಮಡಿವಂತಿಕೆ ಈವರೆಗೂ ಹೇಳಿದ ಸಾಮರಸ್ಯವನ್ನು ಅಣುಕಿಸುವಂತಿದೆ. ಬುಡಕಟ್ಟಿನ ಬಹಳ ಮುಖ್ಯವಾದ ಗುಣ ಈ ಶುದ್ಧತೆಯ ಕಲ್ಪನೆ. ಉಣ್ಣುವ ಊಟ, ಕುಡಿಯುವ ನೀರು, ತೊಡುವ ಬಟ್ಟೆ, ಬೆಳೆಸುವ ಸಂಬಂಧ ಹೀಗೆ ಇಡೀ ಬದುಕುವ ಬಾಳೇ ಮಡಿವಂತಿಕೆಯಿಂದ ಕೂಡಿದೆ. ಇದರಲ್ಲಿ ದೇವರ ಪೂಜಾರಿಗಳು, ಮುತ್ತಯ್ಯಗಳ ಕಿಲಾರಿಗಳು, ದಾಸಯ್ಯಗಳು ಮೊದಲ ಸ್ಥಾನ ಪಡೆಯುತ್ತಾರೆ. ಇವರು ತಮ್ಮ ಮನೆಗಳಲ್ಲೇ ಮಡಿವಂತಿಕೆಯ ಅನನ್ಯತೆ ಹೊಂದಿರುತ್ತಾರೆ. ಕೋಳಿ, ಹಂದಿ ಮಾಂಸ ಸಂಪೂರ್ಣ ನಿಷೇಧ. ಇವರು ಯಾವುದೇ ಊರಲ್ಲಿ ವೈವಾಹಿಕ ಸಂಬಂಧ ಬೆಳೆಸಿದರೂ ಆ ಊರಲ್ಲೇ ಕೋಳಿ ಇಲ್ಲದಂತಾಗುತ್ತವೆ ಎಂಬುದು ಒಂದು ನಂಬಿಕೆ. ತಿನ್ನುವುದು ಹೋಗಲಿ ಊರೊಳಗೇ ಕೋಳಿಗಳ ಪ್ರವೇಶ ನಿಷಿದ್ಧ. ಇದರ ಕಾರಣಗಳು ಯಾರಿಗೂ ಸ್ಪಷ್ಟವಾಗಿ ತಿಳಿದಿಲ್ಲ. ಆದರೆ ಈ ನಂಬಿಕೆಯನ್ನು ಎಲ್ಲರೂ ನಂಬುತ್ತಾರೆ. ವಿಶೇಷವೆಂದರೆ, ಇವರು ದೇವರುಗಳಿಗೆ ಕೋಳಿ, ಹಂದಿ, ಮದ್ಯ ನಿಷೇಧ ಎಂಬುದನ್ನು ಅರಿತ ಕಳ್ಳರು ಆ ದೇವರುಗಳಿಗೆ ಕೋಳಿ–ಹಂದಿ ಮಾಂಸ ಹಾಗೂ ಮದ್ಯದ ಲೇಪನ ಮಾಡಿ ಕುಲಗೆಡಿಸಿ ಅವುಗಳ ಒಡವೆ –ವಸ್ತ್ರಗಳನ್ನು ಅಪಹರಿಸುತ್ತಾರೆ.

ಈ ಹಟ್ಟಿಯಲ್ಲಿ ಒಂದು ದೇವಸ್ಥಾನವಿದೆ. ಅದರಲ್ಲಿ ಚನ್ನಕೇಶವ, ಗಾದ್ರಿಪಾಲನಾಯಕ ದೇವರುಗಳು ಇವೆ. ಇವು ಒಂದೊವರೆ ಮಾರು ಉದ್ದ ಇದ್ದು ವಿಶಿಷ್ಟ ಸ್ವರೂಪದಲ್ಲಿವೆ. ಪ್ರಾಚೀನ ಕಾಲದಲ್ಲಿ ಈ ಸಮುದಾಯ ಉಪಯೋಗಿಸುತ್ತಿದ್ದ ಬಿಲ್ಲು, ಬಾಣ, ಕೋಲು, ಇನ್ನೂ ಮೊದಲಾದ ವಸ್ತುಗಳಿದ್ದು, ಅವು ಸಮುದಾಯ ಚಾರಿತ್ರಿಕ ಬದುಕಿನ ಸ್ವರೂಪವನ್ನು ಹಾಗೂ ಅವರ ಪೂಜಾ ಕಲ್ಪನೆಯನ್ನು ಬಿಂಬಿಸುತ್ತವೆ. ಚನ್ನಕೇಶವ ದೇವರಲ್ಲಿ ಮಾತ್ರ ಬಂಗಾರದ ಕೊಳಲಿದೆ. ಈ ಎಲ್ಲಾ ವಸ್ತುಗಳನ್ನು ಬಟ್ಟೆ ಹಾಗೂ ಕಂಬಳಿಯಿಂದ ಬಿಗಿದು ದುಂಡಾಗಿ ಕಟ್ಟಿರುತ್ತಾರೆ. ಅವುಗಳ ಮೇಲೆ ಬೆಳ್ಳಿಯ ಪಟ್ಟಿಗಳನ್ನು ಹಾಕಿರುತ್ತಾರೆ. ದೇವರಗುಡಿಯ ಮುಂದೆ ಮುತ್ತಯ್ಯಗಳ ಸನ್ನಿಧಿ ಇದೆ. ಇದನ್ನು ಪದಿ ಎಂದು ಕರೆಯುತ್ತಾರೆ. ಇದರಲ್ಲಿ ಒಡಪು (ಬೆಂಕಿ ಹಾಕಲು ಸಿದ್ದಪಡಿಸಿದ ಚಿಕ್ಕ ಗುಂಡಿ) ಇರುತ್ತದೆ. ಒಡವು ಈ ಸಮುದಾಯದ ಪೂಜನೀಯ ಸ್ಥಳ. ಅಲ್ಲಿ ಕಟ್ಟಿಗೆ ಸುಟ್ಟು ಅದರಿಂದ ಬಂದ ಬೂದಿಯನ್ನು ದೇವರ ದೂಳ್ತ ಎಂದು, ಹೊಟ್ಟೆ ನೋವಾದೆ ಸ್ವಲ್ಪ ಬಾಯಿಗೆ ಹಾಕಿಕೊಳ್ಳುತ್ತಾರೆ. ಜ್ವರ ಬಂದರೆ ಮೈಗೆ ಲೇಪಿಸಿಕೊಳ್ಳುತ್ತಾರೆ. ಇಲ್ಲವೇ ಆಶೀರ್ವಾದಕ್ಕೆ ಇರಲೆಂದು ಹಣೆಗೆ ಧರಿಸುತ್ತಾರೆ.

ಚನ್ನಕೇಶವ ಮತ್ತು ಗಾದ್ರಿಪಾಲನಾಯಕ ದೇವರುಗಳು ಈಗಾಗಲೇ ಹೇಳಿದಂತೆ ಒಂದೇ ಗುಡಿಯೊಳಗೆ ಕುಳಿತಿವೆ. ಈ ಗುಡಿಗೆ ಒಂದು ಪೌಳಿ ಇದೆ. (ಗುಡಿ, ಪೌಳಿಗಳನ್ನು ಇತ್ತೀಚಿನವರೆಗೂ ಬರೀ ಹುಲ್ಲಿನಿಂದ, ಕಳ್ಳೆಗಳಿಂದ ನಿರ್ಮಾಣ ಮಾಡುತ್ತಿದ್ದು ಈಗ ಕಲ್ಲು, ಮಣ್ಣು, ಸಿಮೆಂಟ್‌ಗಳಿಂದ ನಿರ್ಮಾಣ ಮಾಡಲಾಗುತ್ತಿದೆ) ಈ ಪೌಳಿ (ಕಾಂಪೌಂಡ್) ಯೊಳಗೆ ಮಂದ ಬೊಮ್ಮದೇವರು ಒಂದಿದೆ. ಸಮುದಾಯದ ನಂಬಿಕೆಯ ಪ್ರಕಾರ ಮುತ್ತಯ್ಯಗಳು ಇಲ್ಲಿನ ಎಲ್ಲಾ ದೈವಗಳಿಗಿಂತ ಪವಾಡ ಸದೃಶ್ಯವಾದಂತಹವು. ಆದ್ದರಿಂದಲೇ ಯಾವುದೇ ಹಬ್ಬ ಮುತ್ತಯ್ಯಗಳ ಪೂಜೆ ಇಲ್ಲದೆ ಮುಕ್ತಾಯವಾಗುವುದಿಲ್ಲ. ಮುತ್ತಯ್ಯಗಳನ್ನು ಬಿಟ್ಟರೆ ಚನ್ನಕೇಶವ ಪ್ರಭಾವಿ ದೇವರು. ಉಳಿದಂತೆ ಗಾದ್ರಿಪಾಲನಾಯಕ ಇನ್ನುಳಿದ ದೇವರುಗಳಷ್ಟು ಪ್ರಭಾವಿಯಲ್ಲ.

ಚನ್ನಕೇಶವ ಮೂಲತಃ ವೈಷ್ಣವ ಸಂಪ್ರದಾಯದ ದೇವರು, ಗಾದ್ರಿಪಾಲನಾಯಕ ಶೈವ ಸಂಸ್ಕೃತಿಯ ಪ್ರತೀಕ. ಹಾಗೆಯೇ ಮುತ್ತಯ್ಯಗಳು ಶೈವ ಹಾಗೂ ದಾಸಯ್ಯಗಳು ವೈಷ್ಣವ ಪಂಥದ ಭಾಗವಾಗಿ ಕಂಡು ಬರುತ್ತಾರೆ. ಅಂದ್ರೆ ಶೈವ ವೈಷ್ಣವ ಸಂಪ್ರದಾಯಗಳ ಸಮ್ಮಿಲನ ಸ್ಥಿತಿ. ಈ ಸಮ್ಮಿಲನ ಸ್ಥಿತಿ ಯಾವಾಗ ಮತ್ತು ಯಾಕಾಗಿ ಏರ್ಪಟ್ಟಿತ್ತೆಂಬುದನ್ನು ಕಂಡುಕೊಳ್ಳಬೇಕಾಗಿದೆ. ಅಷ್ಟೇ ಅಲ್ಲದೆ ಗಾದ್ರಿಪಾಲನಾಯಕ ಎಂಬ ಪಶುಪಾಲಕ ವೀರನ ಜೊತೆ ವೈಷ್ಣವ ದೇವರಾದ ಚನ್ನಕೇಶವ ಸೇರಿಸಿಕೊಂಡಿರುವ ಚಾರಿತ್ರಿಕ ಒತ್ತಡಗಳನ್ನು ಶೋಧಿಸಬೇಕಿದೆ. ಇಲ್ಲಿ ಚನ್ನಕೇಶವ ಎಂದರೆ ಬೇಲೂರು ಚನ್ನಕೇಶವ ಎಂದು ಭಾವಿಸಿದರೆ ತಪ್ಪಾದೀತು. ಇವರು ಚನ್ನಯ್ಯ ಮತ್ತು ಕ್ಯಾಸಯ್ಯನನ್ನು ಸೇರಿಸಿ ಚನ್ನಕ್ಯಾಸಯ್ಯ ಮಾಡಿಕೊಂಡಿದ್ದಾರೆ. ಇದರ ಮೂರ್ತಿ ಕೂಡ ಬುಡಕಟ್ಟು ದೇವರ ಕಲ್ಪನೆಯಲ್ಲಿಯೇ ಇದೆ.  ಈ ಬಗ್ಗೆ ಮೌಖಿಕರೂಪಗಳು ಹಾಗೂ ಆಚರಣಾರೂಪಗಳು ಅನೇಕ ಒಳನೋಟಗಳನ್ನು ನೀಡುತ್ತವೆ. ಗಮನಾರ್ಹ ಸಂಗತಿ ಎಂದರೆ ಹೀಗೆ ಮೂಲ ನೆಲೆಗಳ ಕಡೆಗೆ

ಚಲಿಸುವುದರಿಂದ ಸಂಸ್ಕೃತಿಯೊಳಗಿನ ಸ್ಥಾನಮಾನಗಳಿಗೆ ದಕ್ಕೆ ಉಂಟಾಗುತ್ತದೆ ಎಂಬ ಭಯ ಹಲವು ವಿಚಾರಗಳನ್ನು ಗುಪ್ತವಾಗಿರಿಸಿದೆ. ಇಲ್ಲಿಯ ದೇವರುಗಳನ್ನು ನಿಡಗಲ್ಲು ಕಡೆಯಿಂದ ನಲಗೇತಲಹಟ್ಟಿಯ ಜನ ಕದ್ದು ತಂದಿದ್ದಾರೆ ಎಂಬ ಮಾತು ಸಮುದಾಯದ ಹಲವರಿಗೆ ಚೆನ್ನಾಗಿ ಗೊತ್ತು. ಆದರೆ ಅವರು ಅದನ್ನು ನಿಖರವಾಗಿ ಹೇಳುವುದಿಲ್ಲ.

ಮ್ಯಾಸನಾಯಕರ ಧಾರ್ಮಿಕ ರಾಜಕಾರಣ ವ್ಯವಸ್ಥೆ ವೈಶಿಷ್ಟತೆಯಿಂದ ಕೂಡಿದ್ದು, ನಲಗೇತಲಹಟ್ಟಿಯ ವ್ಯವಸ್ಥೆಯೂ ಹಾಗೆಯೇ ಇದೆ. ಇಡೀ ದೇವಕಾರ್ಯಗಳಿಗೆ ಯಜಮಾನ ಇರುತ್ತಾನೆ. ಈ ಯಜಮಾನಿಕೆ ವಂಶಪಾರಂಪರ್ಯವಲ್ಲ ಆದರೂ ಒಮ್ಮೆ ಯಜಮಾನನಾದರೆ ಆ ಗುಂಪನ್ನು ಯಾವುದೇ ಪ್ರಭಲ ಕಾರಣಗಳಿಲ್ಲದೆ ಆ ಅಧಿಕಾರದಿಂದ ತೆಗೆಯಲು ಯಾರಿಗೂ ಹಕ್ಕಿಲ್ಲ. ಪ್ರಸ್ತುತ ನಲ್ಲನೋರು ಎನ್ನುವ ಬೆಡಗಿನವರು ಯಜಮಾನರಾಗಿದ್ದಾರೆ. ದೇವರ ಕಾರ್ಯಗಳ ಪೂರ್ಣ ಜವಾಬ್ದಾರಿ ಯಜಮಾನನದು. ಇವರ ಜೊತೆಗೆ ಏಳು ಜನ ಹಿರಿಯರು (ಪೆದ್ದಗಳು) ಇರುತ್ತಾರೆ. ಇಡೀ ಸಮುದಾಯವನ್ನು ಮೂಗನೋರು, ಕಂಪಲಯ್ಯಗಳು, ಪುರ್ನಾರು, ಬೊರಗಲು, ಗುಡ್ಡಪೋರು, ನಲಗೇತಲು ಮುಂತಾಗಿ ಏಳು ಗುಂಪುಗಳಾಗಿ ವಿಭಾಗಿಸಿ, ಒಂದೊಂದು ಗುಂಪಿಗೆ ಒಬ್ಬೊಬ್ಬ ಹಿರಿಯರನ್ನು ನೇಮಿಸುತ್ತಾರೆ.

ಯಜಮಾನನಿಗೆ ಸಲಹೆ ಸೂಚನೆಗಳ ಮೇರೆಗೆ ದೇವರ ಕಾರ್ಯ ಮಾಡಬೇಕಾದುದು ಹಿರಿಯರ ಕರ್ತವ್ಯ. ಇವರ ಜೊತೆಗೆ ಒಂದೊಂದು ಮನೆತನದವರಿಗೆ ಒಂದೊಂದು ಕಾರ್ಯ ಮಾಡಬೇಕಾದ ಜವಾಬ್ದಾರಿ ಇರುತ್ತದೆ. ಮೀಸಲು ಹೇಳುವುದು, ಡಗಮು ಬಡಿಯುವುದು, ಪತ್ರೆ ತರುವುದು, ವಾಸಿಕೊಯ್ಯುವುದು, ದೇವರ ಗರ್ಭಗುಡಿಯಲ್ಲಿ ಪೂಜಾರಿಗೆ ಸಹಕರಿಸುವುದು ಇಂಥ ಅನೇಕ ಕಾರ್ಯಗಳು ಮನೆತನಗಳ ಮೇಲೆ ಹಂಚಿಕೆಯಾಗಿದೆ. ಇವರ ಜೊತೆಗೆ ದೇವರ ಸೇವಕರಾಗಿ ಪೂಜಾರಿ, ಕಿಲಾರಿ, ದಾಸಯ್ಯಗಳು ಇರುತ್ತಾರೆ. ಉರುಮೆ, ತಪ್ಪಡಿಗಳನ್ನು ಬಡಿಯಲು ಬೇರೆ ಜಾತಿಯಿಂದ ಅಂದ್ರೆ ಮಾದಿಗ ಹಾಗೂ ಹೊಲೆಯ ಕುಲಗಳಿಂದ ಬರುತ್ತಾರೆ. ಇವರೆಲ್ಲರ ಜೊತೆಗೆ ಭಕ್ತ ಸಂಕುಲ ಇರುತ್ತವೆ. ಇಡೀ ವ್ಯವಸ್ಥೆಯೊಳಗೆ ಈಗಾಗಲೇ ಹೇಳಿರುವ ಹಾಗೆ ಯಜಮಾನ ಮತ್ತು ಹಿರಿಯರದೇ (ಪೆದ್ದಗಳು) ಮುಖ್ಯ ಸ್ಥಾನ. ಇವರು ಯಾವುದೇ ತೀರ್ಮಾನ ತೆಗೆದುಕೊಂಡರೂ ಭಕ್ತ ಸಮೂಹ ಒಪ್ಪಬೇಕಾಗುತ್ತದೆ.

ಒಂದೇ ಗುಡಿಯಲ್ಲಿ ಪ್ರತಿಷ್ಠಾಪಿತವಾಗಿರುವ ನಾಲ್ಕು ದೈವಗಳಿಗೂ (ಮುತ್ತಯ್ಯಗಳು, ಚನ್ನಕೇಶವ, ಗಾದ್ರಿಪಾಲನಾಯಕ, ಮಂದಬೊಮ್ಮದೇವರು) ಒಕ್ಕಲು ಪ್ರತ್ಯೇಕವಾಗಿದ್ದರೂ ಒಬ್ಬರಿಗೊಬ್ಬರು ಅನ್ಯೋನ್ಯವಾಗಿದ್ದಾರೆ. ಅಷ್ಟೇ ಅಲ್ಲದೆ ಇವೆಲ್ಲ ಬೇರೆ ಬೇರೆ ದೇವರುಗಳಲ್ಲ ಎಂಬುದೇ ಇವರ ಭಾವನೆ. ಆದ್ದರಿಂದಲೇ ಈ ಎಲ್ಲಾ ದೇವರುಗಳನ್ನು ಒಂದೇ ಗುಡಿಯೊಳಗೆ ಪ್ರತಿಷ್ಠಾಪಿಸಿದ್ದಾರೆ.

ಒಂದು ವರ್ಷದಲ್ಲಿ ಅಮವಾಸ್ಯೆ, ಹುಣ್ಣಿಮೆಗೆ ಒಂದರಂತೆ ಹಬ್ಬಗಳನ್ನು ಮಾಡುವ ಇವರಿಗೆ ಕಟ್ಲೆಗಳನ್ನು ಮಾಡಲು ಯಾವುದೇ ತರಹದ ಬೇಸರವಿಲ್ಲ. ಮನೆಯ ಕೆಲಸಗಳು ಒಂದು ದಿನ ತಡವಾದರೂ ತೊಂದರೆಯಿಲ್ಲ. ಆದರೆ ದೇವರ ಕೆಲಸ ಮೊದಲು ಮುಗಿಯಬೇಕು ಅನ್ನುವುದು ಇಲ್ಲಿಯ ದೃಢ ಭಾವನೆ. ಈ ಹಿನ್ನೆಯೊಳಗೆ ನಲಗೇತಲಹಟ್ಟಿಯೊಳಗೆ ಆಚರಿಸುವ ಹಬ್ಬಗಳ ವಿವರ ಹೀಗಿದೆ : ವರ್ಷದಲ್ಲಿ ಎತ್ತಿನ ಹಬ್ಬದ ಮೂಲಕ ಆರಂಭಗೊಂಡು ಕಂಬಲಯ, ನಾಗಪ್ಪಲು (ನಾಗರಪಂಚಮಿ), ಮಾರಮ್ಮ, ದೀವಳಿಗೆ, ಗುಗ್ಗರಿಹಬ್ಬ, ಯುಗಾದಿಯಲ್ಲಿ ಪರಿಸಮಾಪ್ತಿಯಾಗುತ್ತದೆ. ಎತ್ತನ್ನು ಅತ್ಯಂತ ಗೌರವ ಸ್ಥಾನದಲ್ಲಿಟ್ಟು ನೋಡುವ ಈ ಸಮುದಾಯಕ್ಕೆ ವರ್ಷ ಆರಂಭವಾಗುವುದೇ ಎತ್ತನ್ನು ಪೂಜಿಸುವುದರ ಮೂಲಕ. ಇಲ್ಲಿ ಹೇಳಿದ ಹಬ್ಬಗಳು ಪ್ರತಿವರ್ಷ ಕಡ್ಡಾಯವಾಗಿ ಮಾಡುವಂತಹುಗಳು. ಇವುಗಳ ಜೊತೆಗೆ ಇನ್ನು ಒಂದೊಂದು ದಿನ ಪೂಜೆ ಮಾಡುವ ಹಬ್ಬಗಳೂ ಇವೆ. ನಲಗೇತು ಎರಗಯ್ಯ, ಫಲಮಾರು ಗುಡ್ಡೆ, ಕಂಪಳದೇವರು ಇನ್ನೂ ಮೊದಲಾದವು. ಹಾಗೆಯೆ ಮೂರು ವರ್ಷಕ್ಕೊಮ್ಮೆಯೋ ಅಥವಾ ಇನ್ನೂ ಹೆಚ್ಚಿನ ವರ್ಷಗಳಿಗೆ ಒಮ್ಮೆಯೋ ಆಚರಿಸಲ್ಪಡುವ ದೊಡ್ಡ ಹಬ್ಬಗಳೂ ಇವೆ. ಅವುಗಳೆಂದರೆ ಉದಿ ಪದಿಯಾಗಳ ದೇವರು, ಪೂರ್ವದ ದೇವರು, ಮುತ್ತಯ್ಯಗಳ ಮಾರಮ್ಮ ಮೊದಲಾದವು.

ಒಟ್ಟಾರೆ ಶ್ರೀಮಂತ ಸಂಸ್ಕೃತಿಯ ಒಂದು ಪ್ರಬಲ ನೆಲೆಯಾಗಿ ನಲಗೇತಲಹಟ್ಟಿ ಕಂಡು ಬರುತ್ತದೆ. ಆಚರಣೆಗಳನ್ನು ಸಂಪ್ರದಾಯಗಳನ್ನು ಅತ್ಯಂತ ಕಟ್ಟುನಿಟ್ಟಾಗಿ ಪಾಲಿಸುತ್ತಾ, ತನ್ನದೇ ಆದ ಅನನ್ಯತೆಯನ್ನು ಉಳಿಸಿಕೊಂಡು ಬಂದಿದೆ. ಇಂಥ ಪ್ರಬಲ ಸಾಂಸ್ಕೃತಿಕ ತಾಣಗಳೊಳಗೆ ಈಗಿನ ಜಾಗತೀಕರಣ, ಉದಾರೀಕರಣ ನೀತಿಗಳು ಪ್ರವೇಶ ಪಡೆದು ತಲ್ಲಣಗಳನ್ನು ಉಂಟುಮಾಡುತ್ತಿರುವುದು ತೀರಾ ಸಾಮಾನ್ಯವಾಗಿದೆ. ಈ ಸ್ಥಿತಿ ನಲಗೇತಲಹಟ್ಟಿಯಲ್ಲಿ ಭಿನ್ನವಾಗಿಲ್ಲ ಎಂದು ಬೇರೆ ಹೇಳಬೇಕಾಗಿಲ್ಲ. ಮುಖ್ಯವಾಗಿ ಸರ್ಕಾರದ ಅಧಿಕಾರ ವಿಕೇಂದ್ರಿಕರಣದ ಪರಿಣಾಮ (ಗ್ರಾಮ ಪಂಚಾಯಿತಿ ಚುನಾವಣೆಗಳು) ಹಟ್ಟಿಯಲ್ಲಿ ಒಂದು ರೀತಿ ಬಿಗುವಿನ, ಉಸಿರು ಕಟ್ಟಿಸುವ ವಾತಾವರಣವಿದೆ. ಇದು ಬಹುತೇಕ ಹಳ್ಳಿಗಳಲಿ ಸಾಮಾನ್ಯ ಸಮಸ್ಯೆ. ಎಷ್ಟೋ ಕಡೆ ಇಂಥ ಒಳ ಜಗಳಗಳ ಪರಿಣಾಮ ಹಬ್ಬಗಳೇ ರದ್ದಾಗುತ್ತಿವೆ. ನಲಗೇತಲಹಟ್ಟಿಯ ಒಳಗೂ ಇಂಥ ಪರಿಣಾಮ ಆಗಿದ್ದು, ದೇವರ ಪೂಜಾರಿಕೆ ಹಾಗೂ ಯಜಮಾನಿಕೆಯ ವಿಷಯದಲ್ಲಿ ಸಾಕಷ್ಟು ವಿವಾದಗಳು ಸೃಷ್ಟಿಯಾಗಿದ್ದು ಈ ವಿಷಯ ಈಗ ನ್ಯಾಯಾಲಯದ ಮೆಟ್ಟಲೇರಿದೆ.

ಈ ಮೊದಲು ಊರಿನ ಜನರ ವೈಷಮ್ಯಗಳು ಏನೇ ಇದ್ದರೂ ದೇವರ ಕಟ್ಟೆಗಳು ಪ್ರಾರಂಭವಾಗುವವರೆಗೆ ಮಾತ್ರ ಇರುತ್ತಿದ್ದವು. ಆನಂತರ ಎಲ್ಲರೂ ಸಮಾಗಮ. ಕಟ್ಲೆಗಳೊಳಗೆ ಕೂಡಿ ಮಾಡಬೇಕಾದುದು ಹಟ್ಟಿಯ ಬಾಂಧವ್ಯವನ್ನು ಯಾಂತ್ರಿಕ ಸ್ವರೂಪದಲ್ಲಿಯಾದರೂ ಉಳಿಸಿತ್ತು. ಆದರೆ ಈ ಪರಿಸ್ಥಿತಿ ಆಧುನಿಕತೆ ಮನುಷ್ಯನಿಗೆ ಕೊಟ್ಟ ವೈಯುಕ್ತಿಕ ಮೇಲಾಟದ ಮನೋಭಾವಗಳಿಂದಾಗಿ

ನಲಗೇತಲಹಟ್ಟಿಯ ಸಾಂಸ್ಕೃತಿಕ ಬದುಕು ತನ್ನ ಪರಂಪರೆಯ ಶ್ರೀಮಂತಿಕೆ ಹಾಗೂ ಬಿಗುವಿನ ಬಂಧವನ್ನು ಕಳೆದುಕೊಳ್ಳುತ್ತಿದೆ ಎಂಬುದು ಅತ್ಯಂತ ವಿಷಾದದ ಸಂಗತಿ

## ಮ್ಯಾಸ ನಾಯಕರ ಯುಗಾದಿ ಹಬ್ಬ

ಯುಗಾದಿ ರಾಷ್ಟ್ರದಾದ್ಯಂತ ಜರಗುವ ಒಂದು ಹಬ್ಬ . ಆದರೂ ಎಲ್ಲಾ ಕಡೆ ಒಂದೇ ರೀತಿಯಲ್ಲಿ ಜರಗುವುದಿಲ್ಲ. ಇದಕ್ಕೆ ಪ್ರಮುಖ ಕಾರಣ ಭೌಗೋಳಿಕ ಮತ್ತು ಧಾರ್ಮಿಕ ಅನನ್ಯತೆಯ ಸುಪ್ತ ಪ್ರಜ್ಞೆ, ಯುಗಾದಿ ಎಂದರೆ ಹೊಸ ಯುಗದ ಆದಿಯನ್ನು ಸಂಭ್ರಮದಿಂದ ಸ್ವಾಗತಿಸಲು ಆಚರಿಸುವ ಆಚರಣೆ. ಆ ದಿನಗಳಲ್ಲಿ ನಾವು ಹೇಗೆ ವರ್ತಿಸುತ್ತೇವೆಯೋ ಅದೇ ನಡಾವಳಿಗಳು ಮುಂದಿನ ವರ್ಷದುದ್ದಕ್ಕೂ ಮುಂದುವರೆಯುತ್ತವೆ. ಎಂದು ನಂಬಲಾಗಿದೆ. ಹೊಸ ವರ್ಷದಲ್ಲಿ ಚಂದ್ರನ ದರ್ಶನ ಪಡೆದು ಕೃತಾರ್ಥರಾಗುವುದು, ಬೇವು ಬೆಲ್ಲ ಸೇವಿಸಿ ಮುಂದಿನ ದಿನಮಾನಗಳಲ್ಲಿ ಸಿಹಿ ಕಹಿ ಘಟನೆಗಳನ್ನು ಸಮಾನವಾಗಿ ಸ್ವಾಗತಿಸುವ ಮನೋಭಾವವನ್ನು ಬೆಳೆಸಿಕೊಳ್ಳಲು ಸಿದ್ಧವಾಗುವುದು ಈ ಹಬ್ಬದ ವಿಶೇಷ. ಇವು ಪ್ರಪಂಚದ ಎಲ್ಲೆಡೆ ಪ್ರಚಲಿತವಿರುವ ಸಾಮಾನ್ಯ ನಂಬಿಕೆಗಳು. ಈ ಸಾಮಾನ್ಯ ನಂಬಿಕೆಗಳನ್ನು ರಾಷ್ಟ್ರಾದ್ಯಂತ ಹಲವು ಜಾತಿ ಜನಾಂಗ ಮತ ಸಮುದಾಯಗಳು ತಮ್ಮವನ್ನಾಗಿಸಿಕೊಂಡಿರುವ ಜೊತೆಗೆ ಇನ್ನಷ್ಟು ನಂಬಿಕೆಗಳನ್ನು ತಮ್ಮ ಅನುಕೂಲಕ್ಕೆ ತಕ್ಕಂತೆ ಸೇರಿಸಿಕೊಂಡು ಆಚರಣೆಗೊಳಪಡಿಸುವ ಪರಿ ತುಂಬಾ ಕೂತೂಹಲಕರವಾದುದು.

ಚಿತ್ರದುರ್ಗ ಜಿಲ್ಲೆಯಾದ್ಯಂತ ಮ್ಯಾಸನಾಯಕರ ಹಟ್ಟಿಗಳಿದ್ದು ಅವೆಲ್ಲವುಗಳ ಕೇಂದ್ರ ಬಿಂದುಗಳಾಗಿ ಕಂಗೊಳಿಸುತ್ತಿರುವ ಹಟ್ಟಿಗಳಲ್ಲಿ ಚಿತ್ರದುರ್ಗ ಜಿಲ್ಲೆ ಚಳ್ಳಕೆರೆ ತಾಲ್ಲೂಕಿನ ನಲಗೇತನಹಟ್ಟಿಯೂ ಒಂದು. ಈ ಹಟ್ಟಿಯ ಯುಗಾದಿ ಹಬ್ಬದ ಆಚರಣೆಗಳನ್ನು ಸಾಂಸ್ಕೃತಿಕ ಅನನ್ಯತೆಯ ದೃಷ್ಟಿಯಿಂದ ವಿವೇಚನೆಗೆ ಒಳಪಡಿಸುವುದು ಪ್ರಸ್ತುತ ಲೇಖನದ ಮುಖ್ಯ ಉದ್ದೇಶವಾಗಿದೆ.

ನಲಗೇತನಹಟ್ಟಿ ಮ್ಯಾಸನಾಯಕ, ಹೊಲೆಮಾದಿಗ ಮತ್ತು ಪಿಂಜಾರ ಜನಾಂಗಗಳ ತ್ರಿಜಾತಿ ಸಂಗಮ. ಇಲ್ಲಿ ಈ ಮೂರು ಸಮುದಾಯಗಳು ಒಂದೊಕ್ಕೊಂದು ಸಂಪೂರ್ಣವಾಗಿ ಅನ್ಯೂನ್ಯವಾಗಿ ತಮ್ಮ ಬದುಕುಗಳನ್ನು ಸಾಗಿಸುತ್ತಿವೆ. ಪಿಂಜಾರ ಸಮುದಾಯದ ಕೆಲವು ಹಬ್ಬಗಳನ್ನು ಉಳಿದೆರಡು ಸಮುದಾಯಗಳು ಆಚರಿಸುವ ವಿಶಿಷ್ಟತೆಯನ್ನು ಇಲ್ಲಿ ಕಾಣಬಹುದು. ಹಾಗೆಯೇ ಪಿಂಜಾರರು ಕೂಡ ಉಳಿದ ಎರಡು ಸಮುದಾಯಗಳ ಹಬ್ಬಗಳಲ್ಲಿ ಎಲ್ಲರಂತೆ ಭಾಗವಹಿಸುವ ಕ್ರಮವೂ ಇದೆ ಮಾದಿಗರು ಮತ್ತು ಮ್ಯಾಸನಾಯಕರ ಹಬ್ಬಗಳಲ್ಲಿ ನಡೆಯುವ ಆಚರಣೆಗಳಿಗೆ ಬಹಳಷ್ಟು ವ್ಯತ್ಯಾಸವಿಲ್ಲ. ಇಲ್ಲಿ ಪ್ರಚಲಿತವಿರುವ ಕೆಲವು ಆಚರಣೆಗಳನ್ನು ಈ ಮುಂದಿನಂತೆ ವಿವರಿಸಬಹುದು.

ಯುಗಾದಿ ಗೂಡು ಮತ್ತು ಚರಗ

ಈ ಹಟ್ಟಿಯಲ್ಲಿ ಯುಗಾದಿ ಒಟ್ಟು ನಾಲ್ಕು ದಿಗಳ ಕಾಲ ನಡೆಯುತ್ತದೆ. ಈ ನಾಲ್ಕು ದಿನಗಳಲ್ಲಿ ಮೊದಲನೇ ದಿನವಾದ ಅಮವಾಸೆಯ ದಿನ ರಾತ್ರಿ ದೇವರೆತ್ತುಗಳ ಗೂಡಿನಲ್ಲಿ ಮತ್ತು ತಮ್ಮ ತಮ್ಮ ಕುರಿಗಳ ದೊಡ್ಡಿಯಲ್ಲಿ ಚರಗ ಚೆಲ್ಲುವ ಕಾರ್ಯಕ್ರಮ ನಡೆಯುತ್ತದೆ. ದೇವರ ಎತ್ತುಗಳ ಗೂಡು ಕಾಡಿಗೆ ಹೊಂದಿಕೊಂಡು ಇರುತ್ತದೆ. ಆದರೆ ಈ ದಿನ ಭಕ್ತಾದಿಗಳ ಕೋರಿಕೆಯ ಮೇರೆಗೆ ಯಾವುದಾದರೂ ಒಬ್ಬ ಭಕ್ತನ ಹೊಲಕ್ಕೆ ಗೂಡನ್ನು ಸ್ಥಳಾಂತರಿಸುತ್ತಾರೆ. ತಾತ್ಕಾಲಿಕವಾಗಿ ಆ ದಿನ ಅಲ್ಲಿ ಗೂಡು ನಿರ್ಮಿಸಿ ಕೆಲವು ವಿಶಿಷ್ಟ ಆಚರಣೆಗಳನ್ನು ನಡೆಸಲಾಗುತ್ತದೆ. ಅವುಗಳಲ್ಲಿ ಮುಖ್ಯವಾಗಿ ದೇವರ ಎತ್ತುಗಳ ಗೂಡಿಗೆ ಚರಗ ಚೆಲ್ಲುವುದು. ಚರಗ ಚಲ್ಲುವುದಕ್ಕೆ ಕೆಲವು ನಿರ್ದಿಷ್ಟ ಕುಲದವರು ಬೇಟೆಯನ್ನು(ಕುರಿ ಮಾತ್ರ) ನೀಡಿತ್ತಾರೆ. ಅದನ್ನು ಬಲಿಮಾಡಿ ಅದರ ಕರಸು ಮತ್ತು ಪದಿಯಲ್ಲಿನ ಹಣ್ಣ ಕಾಯಿಗಳನ್ನು ಸೇರಿಸಿ ದೇವರ ಎತ್ತುಗಳಿಗೆ ಚರಗ ಚೆಲ್ಲುತ್ತಾರೆ. ಇದರ ಜೊತೆಗೆ ಗೂಡು ಹಾಕಿಸಿದ ಹೊಲದ ಯಜಮಾನ ಒಂದೋ ಎರಡೋ ಕುರಿಗಳನ್ನು ನೀಡುತ್ತಾನೆ. ಹಾಗೆಯೇ ಕೆಲವು ಭಕ್ತರು ಗೂಡಲ್ಲಿ ಜವಳ ತೆಗೆಸುವುದಾಗಿಯೋ ಅಥವಾ ಕುರಿಗಾರರು ತಮಗೆ ಒಳ್ಳೆಯದಾಗಲಿ ಎಂದೋ ತಮ್ಮ ಶಕ್ತಿಯನುಸಾರ ಕುರಿಗಳನ್ನು ನೀಡುತ್ತಾರೆ. ಇವೆಲ್ಲವುಗಳನ್ನು ಬಲಿ ನೀಡಿ ಚರಗಕ್ಕೆ ಬಲಿ ನೀಡಿದ ಕುರಿಯ ಮಾಂಸದ ಅಡಿಗೆ ಮಾಡಿ ಬೆಳಗ್ಗೆ ಗೂಡಿಗೆ ಬಂದ ಎಲ್ಲರೂ ಸೇರಿ ಊಟಮಾಡುತ್ತಾರೆ. ಊಟಕ್ಕೂ ಮೊದಲು ಗೂಡಿನಲ್ಲಿ ಬೇವಿನ ಹೂವು, ಹುಣಿಸೆ ರಸ ಹಾಗೂ ಬೆಲ್ಲದಿಂದ ತಯಾರಿಸಿದ ಬೇವನ್ನು ಭಕ್ತರೆಲ್ಲರೂ ಎಕ್ಕೆ ಎಲೆ ಇಲ್ಲವೇ ಇಸ್ತ್ರಿ ಎಲೆಯಲ್ಲಿ ಸ್ವೀಕರಿಸುತ್ತಾರೆ.

ಬೇವು ಬೆಲ್ಲ

ಗೂಡಿಂದ ವಾಪಾಸ್ಸಾದ ಭಕ್ತರು ತಮ್ಮ ಮನೆಗಳಲ್ಲಿ ಎಡೆ ಹಾಕಿ ಪೂಜೆ ಸಲ್ಲಿಸುತ್ತಾರೆ. ಇತ್ತ ದೇವಾಸ್ಥಾನದ ಬಳಿ ಪೂಜಾರಿ ದೇವರೆತ್ತುಗಳ ಗೂಡಲ್ಲಿ ತಯಾರಿಸಿದ ಮಾದರಿಯಲ್ಲೇ ಬೇವನ್ನು ತಯಾರಿಸುತ್ತಾನೆ. ಇದನ್ನು ಎಲ್ಲಾ ಮನೆಗಳವರು ಪಡೆದುಕೊಂಡು ಪೂಜೆಗೆ ಇಟ್ಟು ಬೇವು ಕುಡಿಯುತ್ತಾರೆ. ಇದರ ಜೊತೆಗೆ ಮನೆಗಳಲ್ಲಿ ಬೇವಿನ ಹೂವು, ಕಡ್ಲೆ ಮತ್ತು ಬೆಲ್ಲವನ್ನು ಬೆರಸಿ ಮತ್ತೊಂದು ಮಾದರಿಯಲ್ಲಿ ಸಿದ್ಧಮಾಡಿದ ಬೇವುಬೆಲ್ಲವನ್ನು ತಿಂದು ನಂತರ ಊಟಮಾಡುತ್ತಾರೆ. ಇಲ್ಲಿ ಗಮನಿಸ ಬೇಕಾದ ಸಂಗತಿಯೆಂದರೆ ನಮ್ಮ ನಾಗರೀಕ ಸಮಾಜದ ಬೇವುಬೆಲ್ಲಕ್ಕೆ ಬದಲಾಗಿ ಬೇವು, ಹುಣಿಸೆ ಮತ್ತು ಬೆಲ್ಲವನ್ನು ಬೆರಸಿ ತಿನ್ನುವ ಕ್ರಮ. ಇದು ಈ ಸಮುದಾಯದ ಆದಿಮಾ ಸ್ಥಿತಿಯನ್ನು ತೋರಿಸುತ್ತದೆ.

ಚಂದ್ರ ದರ್ಶನ

ಹೊಸ ವರ್ಷದ ಚಂದ್ರನ ದರ್ಶನ ಪಡೆದು ಕೃತಾರ್ಥಭಾವ ತಾಳುವುದು ಈ ಹಬ್ಬದ ಮತ್ತೊಂದು ವಿಶೇಷ. ಈ ಆಚರಣೆಯಲ್ಲಿ ಎಂದೂ ಧನ್ಯತಾ ಭಾವ ತಾಳುವುದು ತುಂಬಾ ಕೂತೂಹಲ ಮತ್ತು ಸಂತಸ ತರುವ ವಿಷಯ. ಚಂದ್ರನನ್ನು ನೋಡಿದ ಅನಂತರ ಊರಿನ ಹಿರಿಯರಿಗೆ ನಮಸ್ಕರಿಸುವುದು ತುಂಬಾ ಅರ್ಥಪೂರ್ಣ. ಪ್ರಕೃತಿಯಲ್ಲಿ ಭವಿಷ್ಯವನ್ನು ಕಂಡುಕೊಳ್ಳುವ ಮನೋಭಾವದ ಈ ಬುಡಕಟ್ಟು ಯುಗಾದಿಯ ಚಂದ್ರನ ದರ್ಶನದಲ್ಲೂ ಭವಿಷ್ಯವನ್ನು ಕಂಡುಕೊಳ್ಳುವುದು ತಂಬಾ ಕುತೂಹಲದ ಸಂಗತಿ. ಅರ್ದ ಚಂದ್ರನಾಗಿರುವ ಆ ದಿನದ ಚಂದ್ರನ ತುದಿಗಳು ಯಾವ ಕಡೆ ಬಿದ್ದಿದೆ, ಯಾವ ಕಡೆ ಎದ್ದಿದೆ ಎನ್ನುವುದರ ಆಧಾರದ ಮೇಲೆ ಇಡೀ ವರ್ಷದ ಧನ ದಾನ್ಯಗಳ ಪ್ರಮಾಣವನ್ನು ನಿರ್ಧರಿಸಿಕೊಳ್ಳುತ್ತಾರೆ. ಅರ್ಧ ಚಂದ್ರನ ತೆಂಕ ತುದಿ ಮೇಲೆದ್ದು ಬಡಗ ತುದಿ ಕೆಳಗಿಳಿದರೆ ಆ ವರ್ಷ ಹಣ ಹೆಚ್ಚು ದಾನ್ಯ ಕಡಿಮೆ ಎನ್ನುವುದು ಇವರ ಅಭಿಪ್ರಾಯ. ಇವರ ಇಂಥ ಲೋಕ ದೃಷ್ಟಿಗಳಲ್ಲಿ ಬರೀ ಮೂಢನಂಬಿಕೆ ತುಂಬಿದೆಯೇ? ಅಥವಾ ಅವುಗಳಲ್ಲಿ ಏನಾದರೂ ವೈಜ್ಞಾನಿಕತೆ ಇದೆಯೇ? ಎಂಬುದರ ಬಗ್ಗೆ ಆಲೋಚಿಸಬೇಕಿದೆ. ಬಹುಶಃ ಚಂದ್ರನ ಅಂದಿನ ಸ್ಥಿತಿ ಮುಂದಿನ ಮಳೆ ಮತ್ತು ವಾತಾವರಣದ ಸೂಚಕವಿರಬಹುದು.

ಸಾಗು ಹೊಡೆಯುವುದು

ರೈತರು ಯುಗಾದಿಯ ಸಂದರ್ಭಕ್ಕೆ ತಮ್ಮ ಎಲ್ಲಾ ಬೆಳೆಗಳನ್ನು ಕಟಾವು ಮಾಡಿ ಬಿಡುವಿನ ಕಾಲದಲ್ಲಿರುತಾನೆ. ಹಾಗೆಯೇ ಮಳೆರಾಯನ ಆಗಮನದ ನಿರೀಕ್ಷೆಯಲ್ಲಿರುತ್ತಾನೆ. ಉಗಾದಿಯ ಬೇವು ಬೆಲ್ಲ ತಿನ್ನುವ ದಿನ ಒಳ್ಳೆಯ ದಿನವೆಂದು ಭಾವಿಸಿ ಆ ದಿನ ಹೊಲಕ್ಕೆ ಹೊನ್ನಾರು ಹೂಡುತ್ತಾನೆ. ಇದನ್ನೇ ಸಾಗು ಹೂಡುವುದು ಎನ್ನುತ್ತಾರೆ. ಆ ದಿನ ರೈತ ನೇಗಿಲು ಊಡಿ ಅದರ ಮುಂದೆ ಮೂರು ಚಿಕ್ಕ ಕಲ್ಲುಗಳನ್ನಿಟ್ಟು ಪೂಜಿಸಿ ನಾಮಾಕಾವಸ್ಥೆಗೆ ಮೂರೋ ಇಲ್ಲವೇ ಐದು ಸಾಲು ಹೊಡೆದು ಮುಗಿಸುತ್ತಾನೆ.

ಬೇಟೆ ಹೊರಡುವುದು

ಮ್ಯಾಸ ನಾಯಕರ ತಮ್ಮ ಆದಿಮ ವೃತ್ತಿಯಾಗಿದ್ದ ಬೇಟೆಯನ್ನು ಒಂದು ಸಂಪ್ರದಾಯವಾಗಿ ಕೆಲವು ಹಬ್ಬಗಳಲ್ಲಿ ಉಳಿಸಿಕೊಂಡು ಬಂದಿರುವುದನ್ನು ಕಾಣಬಹುದು. ಈ ಸಂಪ್ರದಾಯ ಯುಗಾದಿಯ ಹಬ್ಬದಲ್ಲೂ ಆಚರಣೆಯಲ್ಲಿದೆ. ಯುಗಾದಿಯ ಬೇವು ಬೆಲ್ಲವನ್ನು ತಿನ್ನುವ ದಿನ ಹಟ್ಟಿಯಲ್ಲಿ ಪ್ರತೀ ಕುಟುಂಬಕ್ಕೆ ಒಬ್ಬರಂತೆ ಸೇರಿ ಬೇಟೆ ಹೊಡುತ್ತಾರೆ. ಇವರು ಬೇಟೆಯಲ್ಲಿ ಕೇವಲ ಮೊಲಗಳನ್ನು ಮಾತ್ರ ಬೇಟೆಯಾಡುತ್ತಾರೆ. ಬೇಟೆ ಹೊರಟು ಮ್ಯಾಸರು ತಮ್ಮ ಕಂಪಳದ ದೈವ ಕಂಪಳರಂಗನನ್ನು ಮುಂದಿಟ್ಟುಕೊಂಡು ಬೇಟೆಗೆ ಹೊರಡುತ್ತಾರೆ. ಆ ದಿನ ಬೇಟೆಗೆ ಹೋದ ಜನ ಬೇಟೆ ಮುಗಿಸಿ ಸಂಜೆ ಹಟ್ಟಿಗೆ ವಾಪಾಸ್ಸಾಗುತ್ತಾರೆ. ಅವರು ಬರುವಾಗ ಹಟ್ಟಿಯ ಸಣ್ಣ ವಯಸ್ಸಿನ ಹೆಣ್ಣು ಮಕ್ಕಳು

ಬೇಟೆಗಾರರಿಗೆ ಆರತಿ ಎತ್ತಿ ಸ್ವಾಗತಿಸುತ್ತಾರೆ. ಆರತಿ ಎತ್ತಿದ ಮಕ್ಕಳಿಗೆಲ್ಲ ದುಡ್ಡು ಕೊಡುವ ಪದ್ಧತಿಯೂ ಇದೆ. ಬೇಟೆಯಲ್ಲಿ ಸಿಕ್ಕ ಮೊಲಗಳ ಸಂಖ್ಯೆಯ ಆಧಾರದಲ್ಲಿ ಪೂಜಾರಿ, ಕಿಲಾರಿ, ಯಜಮಾನ ಇವರಿಗೆ ಹಂಚಿಕೆಯಾಗುತ್ತದೆ. ಹೀಗೆ ಹಂಚಿಕೆಯಾದ ಮೊಲಗಳನ್ನು ಸಾರು ಮಾಡಿ ತಮ್ಮ ಅಣ್ಣ ತಮ್ಮಂದಿರಿಗೆ ಹಂಚುವುದು ಒಮದು ಸಂಪ್ರದಾಯ. ಇಲ್ಲಿ ಪ್ರಸ್ತಾಪಿಸ ಬೇಕಾದ ಮತ್ತೊಂದು ಅಂಶವೆಂದರೆ ಯುಗಾದಿಯ ಅಮವಾಸೆದಿನ ಜೇನು ಬೇಟೆಯನ್ನು ಹಟ್ಟಿಯ ಜನ ತಮ್ಮ ಇಚ್ಛೆಯನುಸಾರ ಮಾಡುತ್ತಾರೆ. ಈ ದಿನ ಸಂಗ್ರಹಿಸಿದ ಜೇನು ತುಪ್ಪ ಶ್ರೇಷ್ಟವೆಂದು ಭಾವಿಸಿ ಅನೇಕ ಔಷಧಿಗಳಿಗೆ ಬಳಕೆಮಾಡುತ್ತಾರೆ.

ಕ್ರೀಡೆಗಳು

ಕ್ರೀಡೆಗಳು ಮಾನವನ ಬದುಕಿನ ಅವಿಭಾಜ್ಯ ಅಂಗಗಳು. ಇವು ಮನರಂಜನೆಯ ಪ್ರಧಾನ ಉದ್ದೇಶದಿಂದ ಪ್ರದರ್ಶನಗೊಳ್ಳುತ್ತವೆ ಆದರೂ ಅವುಗಳ ಹಿಂದಿನ ಆಶಯಗಳು ಮನುಷ್ಯ ಸಂಬಂಧಗಳನ್ನು ಬೆಸೆಯುವ ಉದ್ದೇಶವನ್ನು ಹೊಂದಿರುತ್ತವೆ. ಕ್ರೀಡೆಗಳನ್ನು ಕೇವಲ ಮಕ್ಕಳ ಆಟಗಳೆಂದು ತಿಳಿದಿರುವ ನಮಗೆ ಮ್ಯಾಸ ನಾಯಕರ ಯುಗಾದಿ ಹಬ್ಬದಲ್ಲಿ ವಯೋ ಭೇದವಿಲ್ಲದೆ ಆಡುವುದನ್ನು ನೋಡಿದರೆ ಅಶ್ಚರ್ಯವಾಗುತ್ತದೆ. ವಿಶೇಷವಾಗಿ ಇಲ್ಲಿ ನಡೆಯುವ ಕ್ರೀಡಾ ಸ್ಪರ್ಧೆಗಳೆಂದರೆ : ಭಾರ ಎತ್ತುವುದು ( ಗುಗ್ಗರು ಗುಂಡು ಎತ್ತುವುದು), ಕುದುರೆ ಚಂಡಾಟ, ಕಾಯಿ ಗುದ್ದುವುದು . ಇತ್ತೀಚೆಗೆ ಹೊಸ ತಲೆಮಾರಿನ ಯುವಕರು ಆಧುನಿಕ ಕ್ರೀಡೆ ಕ್ರಿಕೆಟ್ ಆಟವನ್ನು ಇದರೊಳಗೆ ಸೇರಿಸಿದ್ದಾರೆ. ಈ ಕ್ರೀಡೆಗಳಿಗೆ ತಂಡಗಳನ್ನು ರಚಿಸುವಾಗ ಬಳಿಗಳ(ಎನುಮಲರು, ಮಂದಲರು) ಆಧಾರದ ಮೇಲೆ ಎರಡು ಗುಂಪುಗಳಾಗಿ ಮಾಡಿಕೊಳ್ಳುತ್ತಾರೆ. ಈ ತಂಡಗಳಲ್ಲಿ ಸೋತ ತಂಡವನ್ನು ಗೆದ್ದ ತಂಡ ಹಿಯ್ಯಾಳಿಸಿ ಹಾಸ್ಯಮಾಡುವುದನ್ನು ಕಾಣಬಹುದು.

ಮೊಂಡರ ವೇಷ

ಮ್ಯಾಸನಾಯಕರ ಯುಗಾದಿ ಹಬ್ಬದಲ್ಲಿ ಮಂದಲರ ಪುರುಷರು ಮೊಂಡರ ವೇಷ ಧರಿಸಿ ಮನೆ ಮನೆಗೆ ತೆರಳಿ ಭಿಕ್ಷೆ ಮಾಡುವುದುಂಟು. ಬರೀ ಮೈಯಲ್ಲಿ ಕಂಬಳಿ ಕೋರೆಯನ್ನು ಎಗಲ ಮೇಲೆ ಹಾಕಿಕೊಂಡು ಕೈಯಲ್ಲಿ ಒನಕೆ ಹಿಡಿದು ತಮಾಷೆ ಮಾಡುತ್ತಾ ಮನೆಗಳಲ್ಲಿ ಹೋಳಿಗೆ ಮೊದಲಾದ ಪದಾರ್ಥಗಳನ್ನು ಹಾಗೂ ಹಣವನ್ನು ಸಂಗ್ರಹಿಸುತ್ತಾರೆ. ಈ ಸಂದರ್ಭದಲ್ಲಿ ಸಂಗ್ರಹವಾದ ಹಣವನ್ನು ತಮ್ಮ ಸ್ವಾರ್ಥಕ್ಕಾಗಿ ಬಳಸದೆ ಯಾವುದಾದರೂ ದೇವರ ಕಾರ್ಯಕ್ಕೆ ಬಳಸುತ್ತಾರೆ. ಈ ವೇಷ ಹಾಕುವುದರಲ್ಲಿ ಹೆಣ್ಣು ಮಕ್ಕಳು ಕೂಡ ವಿವಿಧ ವೇಷಗಳನ್ನು ಧರಿಸಿ ಹಣ ಸಂಗ್ರಹ ಮಾಡುತ್ತಾರೆ. ಇವರು ಮನೆ ಮನೆಗೆ ತೆರಳಿ ಹಣ ಕೇಳಿದಾಗ ಬೇಡಿದಷ್ಟು ಕಾಸು ನೀಡದಿದ್ದರೆ ಅವರ ಮನೆಗಳಲ್ಲಿ ಯಾವುದಾದರು ವಸ್ತುಗಳನ್ನು ಕದ್ದು ಅವರಿಂದ ಹಣ ವಸೂಲಿ ಮಾಡುವ ತಂತ್ರವನ್ನು ಅನುಸರಿಸುತ್ತಾರೆ. ಈ ಹೆಣ್ಣು ಮಕ್ಕಳು ಹೀಗೆ ಸಂಗ್ರಹಿಸಿದ ಹಣದಿಂದ ಇತ್ತಿಚೆಗೆ ದೇವರಿಗೆ ಎರಡು ಛತ್ರಿಗಳನ್ನು ಮಾಡಿಸಿದ್ದಾರೆ.

ನೀರು ಚೆಲ್ಲಾಟ

ಮ್ಯಾಸ ನಾಯಕರ ಯುಗಾದಿ ಹಬ್ಬದ ಕೊನೆಯ ದಿನ ನೆಂಟರು ಬಂಟರು ಪರಸ್ಪರ ನೀರು ಚಲ್ಲಾಟ ಆಡುತ್ತಾರೆ. ಶಿಷ್ಟರ ಓಕಳಿ ಆಟಕ್ಕಿಂತ ಮೊದಲೇ ಆಚರಣೆಯಲ್ಲಿದ್ದ ಈ ಪದ್ಧತಿ ಈ ಸಮುದಾಯದ ಲೋಕ ದೃಷ್ಟಿಯನ್ನು ಕಾಣಿಸುತ್ತದೆ.

ಇಂಥ ಹಲವು ಆಚರಣೆಗಳನ್ನು ತಮ್ಮ ಯುಗಾದಿ ಹಬ್ಬದಲ್ಲಿ ನಡಸುವ ಮ್ಯಾಸನಾಯಕರು ನಾಗರೀಕ ಸಮಾಜದ ಯುಗಾದಿಗಿಂತ ಭಿನ್ನ ರೀತಿಯಲ್ಲಿ ಹಬ್ಬವನ್ನು ಆಚರಿಸುವುದರ ಮೂಲಕ ತಮ್ಮದೇ ಆದ ಅನನ್ಯತೆಯನ್ನು ಮೆರೆದಿದ್ದಾರೆ.

# ಮ್ಯಾಸ ನಾಯಕರ ಜನಪದ ಸಾಹಿತ್ಯ: ಚಾರಿತ್ರಿಕ ವಿವೇಚನೆ

ಪ್ರಪಂಚದ ಪ್ರತಿ ಸಮುದಾಯದೊಳಗೂ ಅದರದೇ ಆದ ಮೌಖಿಕ ಸಾಹಿತ್ಯ ಪರಂಪರೆಯೊಂದು ಇದ್ದೇ ಇರುತ್ತದೆ. ಅಂಥ ಸಾಹಿತ್ಯ ಆಯಾ ಸಮುದಾಯದ ಜೀವನಾಡಿಯಾಗಿರುತ್ತದೆ. ಸಮುದಾಯಗಳು ತಮ್ಮ ಬದುಕಿನ ಭಕ್ತಿ-ಭಾವ-ನೀತಿ-ಚರಿತ್ರೆ ಮತ್ತು ಸಂಸ್ಕೃತಿಯ ಸಂಗತಿಗಳನ್ನು ಅದರಲ್ಲಿ ಅಭಿವ್ಯಕ್ತಿಗೊಳಿಸುತ್ತವೆ.

ಮಧ್ಯ ಕರ್ನಾಟಕದ ಚಿತ್ರದುರ್ಗ ಜಿಲ್ಲೆಯಲ್ಲಿ ನೆಲೆನಿಂತಿರುವ ಆದಿಮ ಬುಡಕಟ್ಟುಗಳಲ್ಲಿ ಮ್ಯಾಸಬೇಡರು, ಕಾಡುಗೊಲ್ಲರು ಪ್ರಧಾನವಾದವು. ಇವೆರಡೂ ಸಾಂಸ್ಕೃತಿಕ ಶ್ರೀಮಂತಿಕೆಯಲ್ಲಿ ಸರಿಸಮನಾಗಿ ನಿಲ್ಲುವಂತಹ ಶಕ್ತಿಶಾಲಿ ಸಮುದಾಯಗಳಾಗಿವೆ. ಇವೆರಡೂ ಸಮುದಾಯಗಳನ್ನು ಅಧ್ಯಯನ ಮಾಡಿದ ವಿದ್ವಾಂಸರಲ್ಲಿ ಕೆಲವರು "ಜನಪದ ಸಾಹಿತ್ಯದ ದೃಷ್ಟಿಯಲ್ಲಿ ಕಾಡುಗೊಲ್ಲರಲ್ಲಿ ದೊರೆಯುವಷ್ಟು ಸಾಹತ್ಯ ಮ್ಯಾಸಬೇಡರಲ್ಲಿ ದೊರೆಯುವುದಿಲ್ಲ" ಎಂಬುದಾಗಿ ಅಭಿಪ್ರಾಯಪಡುತ್ತಾರೆ. ಈ ಮಾತು ಒಂದು ಹಂತದವರೆಗೆ ಸರಿಯೆನಿಸ ಬಹುದು. ಆದರೆ ಪೂರ್ಣ ಸತ್ಯವಂತೂ ಅಲ್ಲ. ಏಕೆಂದರೆ ಮ್ಯಾಸಬೇಡರಲ್ಲಿ ದೊರೆಯುವ ಸಾಹಿತ್ಯ ಸಂಪತ್ತು ನಮ್ಮ ಜಾನಪದದ ವಿದ್ವತ್‌ವಲಯ ಗುರುತಿಸುತ್ತಿರುವ ಜನಪ್ರಿಯ ರೂಪ ಹಾಗೂ ರಚನೆಗಳಲ್ಲಿ ದೊರೆಯುವುದಿಲ್ಲ. ಎಂದ ಮಾತ್ರಕ್ಕೆ ಅವರಲ್ಲಿ ಸಾಹಿತ್ಯ ಸಂಪತ್ತು ಕಡಿಮೆ ಇದೆ ಎಂದು ತೀರ್ಮಾನಿಸುವುದು ಎಷ್ಟು ಸರಿ? ಮ್ಯಾಸಬೇಡರ ಸಮುದಾಯದೊಳಗೆ ಉಸಿರಾಡುತ್ತಿರುವ ಸಾಹಿತ್ಯ ರಾಶಿಯನ್ನು ಗುರುತಿಸುವಲ್ಲಿ ಸಂಶೋಧನ ವಲಯ ವಿಫಲವಾಗಿದೆ ಎಂದು ಬೇಕಾದರೆ ಹೇಳಬಹುದು. ಈ ಸಮುದಾಯದಲ್ಲಿ ಸಿಗುವ ಸಾಹಿತ್ಯದಲ್ಲಿ ಹೆಚ್ಚಿನ ಪ್ರಮಾಣ ಗದ್ಯ ರೂಪದಲ್ಲಿದೆ ಹಾಗೂ ಅದು ಯಾವಾಗ ಬೇಕು ಆಗ ಅಭಿವ್ಯಕ್ತಿಗೊಳ್ಳುವುದಿಲ್ಲ. ಅಷ್ಟೇ ಅಲ್ಲ. ಇವರಲ್ಲಿ ಕನ್ನಡ ಭಾಷೆಯ ನಿರೂಪಣೆಗಳಿಗಿಂತ ತೆಲುಗು ಭಾಷೆಯ ನಿರೂಪಣೆಗಳೇ ಹೆಚ್ಚು. ಹಾಗಾಗಿ ಮ್ಯಾಸಬೇಡ ಸಮುದಾಯದ ಸಾಹಿತ್ಯವನ್ನು ನಿರ್ದಿಷ್ಟ ಪ್ರಕಾರ ಎಂಬ ಮಾನದಂಡವನ್ನು, ಕನ್ನಡ ಭಾಷೆಯ ಗಡಿಯನ್ನು ದಾಟಿ ಹುಡುಕಾಡಬೇಕಾಗುತ್ತದೆ. ಇಂಥ ಪ್ರಯತ್ನಕ್ಕೆ ಕೈಮರವಾಗುವ ಪ್ರಯತ್ನ ಈ ಲೇಖನದ್ದಾಗಿದೆ.

ಮ್ಯಾಸಬೇಡ ಸಮುದಾಯವು ಚಿತ್ರದುರ್ಗ ಮಾತ್ರವಲ್ಲದೆ ಬಳ್ಳಾರಿಯ ಕೂಡ್ಲಿಗಿ, ಹೊಸಪೇಟೆ; ದಾವಣಗೆರೆಯ ಜಗಳೂರು, ತುಮಕೂರಿನ ಪಾವಗಡ ಇವೇ ಮೊದಲಾದ ತಾಲೂಕುಗಳಲ್ಲಿ ನೆಲೆನಿಂತಿರುವುದನ್ನು ಗುರುತಿಸಬಹುದು. ಬೇಟೆ ಇವರ ಮೂಲವೃತ್ತಿ ಯಾಗಿದ್ದರೂ ಕಾಲದ ಚಲನೆಯಲ್ಲಿ ಆಗಿರುವ ಬದಲಾವಣೆಯಿಂದಾಗಿ ಪಶುಪಾಲನೆ ಹಾಗೂ ಕೃಷಿಯ ಕಡೆಗೆ ಪಲ್ಲಟಗೊಂಡಿರುವುದನ್ನು ಕಾಣಬಹುದು. ಇಂದು ಬೇಟೆ ಏನಿದ್ದರೂ ಒಂದು ಪ್ರವೃತ್ತಿಯಾಗಿ, ಆಚರಣೆಯ ಮೂಲವಾಗಿ ಉಳಿದುಬಂದಿರುವುದನ್ನು ನೋಡಬಹುದು. ಆಂಧ್ರದ ಶ್ರೀಶೈಲ ಮೂಲದವರಾದ ಇವರು ತಮ್ಮ ಪಶುಗಳಿಗೆ ಹುಲ್ಲು-ನೀರು ಹರಸಿ ಕರ್ನಾಟಕದ ಹಂಪೆಯ ಪರಿಸರಕ್ಕೆ ಕಾಲಿಟ್ಟು ಆನೆಗೊಂದಿಯ ಬಳಿ ಬೀಡುಬಿಟ್ಟಿದ್ದಾರೆ. ಆಗ ಆ ಪ್ರದೇಶವನ್ನು ಆಳ್ವಿಕೆ ಮಾಡುತ್ತಿದ್ದ ವಿಜಯನಗರದ ಅರಸರ ಪ್ರೀತಿಗೂ ಪಾತ್ರರಾಗಿದ್ದಾರೆ. ನಂತರ ವಿಜಯನಗರ ಸಾಮ್ರಾಜ್ಯ ಪತನಗೊಳ್ಳುತ್ತದೆ. ಅಲ್ಲಿಂದ ಚಿತ್ರದುರ್ಗ ಹಾಗೂ ತುಮಕೂರು ಜಿಲ್ಲೆಗಳ ಕಡೆ ವಲಸೆ ಬರುತ್ತಾರೆ. ಮೂಲತಃ ತೆಲುಗು ಭಾಷಿಕರಾದ ಇವರು ಕರ್ನಾಟಕಕ್ಕೆ ಬಂದ ನಂತರ ತಮ್ಮ ಬಾಹ್ಯ ವ್ಯವಹಾರಗಳಿಗೆ ಕನ್ನಡ ಕಲಿತಂತೆ ಕಾಣುತ್ತದೆ. ಆದರೆ ಸಮುದಾಯದ ಆಂತರಿಕ ವ್ಯವಹಾರಗಳಿಗೆ ತೆಲುಗು ಮಾತ್ರ ಇಂದಿಗೂ ಅತೀ ಭದ್ರವಾಗಿದೆ. ಈ ಕಾರಣಕ್ಕಾಗಿಯೇ ಮ್ಯಾಸಬೇಡರಲ್ಲಿ ಕನ್ನಡ ಮತ್ತು

ತೆಲುಗು ಭಾಷೆಗಳಲ್ಲಿ ಮೌಖಿಕ ಸಾಹಿತ್ಯ ಇದ್ದರೂ ತೆಲುಗಿನಲ್ಲಿ ದೊರೆಯುವ ಸಾಹಿತ್ಯ ಅವರ ಸಂಸ್ಕೃತಿಯನ್ನು ಅರ್ಥೈಸಿಕೊಳ್ಳಲು ಹೆಚ್ಚಿನ ರೀತಿಯಲ್ಲಿ ಸಹಕಾರಿ ಯಾಗುತ್ತದೆ. ದುರಾದೃಷ್ಟವೆಂದರೆ ಈವರೆಗೂ ಈ ಸಮುದಾಯವನ್ನು ಅಧ್ಯಯನ ಮಾಡಿರುವ ಬಹುತೇಕರು ಕನ್ನಡ ಭಾಷೆಯ ಸಾಹಿತ್ಯವನ್ನು ಮಾತ್ರ ಗಮನಿಸಿ ತೆಲುಗು ಸಾಹಿತ್ಯದ ಕಡೆ ನಿರ್ಲಕ್ಷೆ ಮಾಡಿದ್ದಾರೆ. ಅಷ್ಟೇ ಅಲ್ಲದೆ ಸಮುದಾಯದ ಒಳಗೂ ಕಾಲದ ಕಾರಣದಿಂದ ತೆಲುಗು ನಿರೂಪಣೆಗಳು ತಲೆಮಾರುಗಳಿಗೆ ಸರಿಯಾದ ರೀತಿಯಲ್ಲಿ ವರ್ಗಾವಣೆಯಾಗುತ್ತಿಲ್ಲ. ಈ ಎಲ್ಲಾ ಕಾರಣಗಳಿಂದಾಗಿ ಮ್ಯಾಸಬೇಡರ ತೆಲುಗು ಸಾಹಿತ್ಯದ ಕಡೆಗೆ ಹಾಗೂ ವಿಶಿಷ್ಟ ರಚನೆಗಳ ಕಡೆ ವಿಶೇಷ ಗಮನ ನೀಡಿ ಗಂಭೀರವಾದ ಅಧ್ಯಯನಗಳು ನಡೆಯಬೇಕಾದುದು ಅತೀ ಜರೂರು ಎನಿಸುತ್ತಿದೆ.

ಮ್ಯಾಸಬೇಡರಲ್ಲಿ ಸಿಗುವ ಜನಪದ ಸಾಹಿತ್ಯದ ಸಂಗ್ರಹ ಆಗಬೇಕಾದಷ್ಟು ಪ್ರಮಾಣದಲ್ಲಿ ಆಗಿಲ್ಲ. ಆದರೆ ಈ ದಿಕ್ಕಿನ ಪ್ರಯತ್ನಗಳೂ ನಡೆದೇ ಇಲ್ಲ ಎಂದು ಹೇಳಲು ಆಗದು. ಇಂಥ ಕೆಲವಾರು ಪ್ರಯತ್ನಗಳು ಸಮುದಾಯದ ಆರಂಭಿಕ ಅಧ್ಯಯನಗಳಿಂದ ಇಂದಿನ ವರೆಗೂ ನಡೆದಿವೆ. ಇಂಥ ಅಧ್ಯಯನಗಳ ಮಾಹಿತಿಯನ್ನು ಹಾಗೂ ಸಂಗ್ರಹವಾಗದೆ ಉಳಿದಿರುವ ಕ್ಷೇತ್ರಗಳ ಮಾಹಿತಿಯನ್ನು ಗಮನವಹಿಸಿ ಮ್ಯಾಸಬೇಡರ ಜನಪದ ಸಾಹಿತ್ಯದ ಸಂಪತ್ತಿನ ಶ್ರೀಮಂತಿಕೆಯನ್ನು ಈ ಮುಂದಿನಂತೆ ವಿವಿಧ ವಿಭಾಗಗಳಲ್ಲಿ ಗುರುತಿಸ ಬಹುದಾಗಿದೆ.

೧. ಸೋಬಾನೆ ಪದಗಳು
೨. ದೇವರ ಪದಗಳು
೩. ದೇವರ ಕಥೆಗಳು
೪. ಕುಲ ಚರಿತ್ರೆಗಳು
೫. ಕಟ್ಟೆಮನೆ ಪತ್ರ ಸಾಹಿತ್ಯ
೬. ಕೋಲಾಟ ಮತ್ತು ಭಜನೆ ಪದಗಳು
೭. ಜನಪದ ಮಹಾಕಾವ್ಯಗಳು ಮತ್ತು ಕಥನ ಕಾವ್ಯಗಳು
೮. ಗಾದೆ – ಒಗಟುಗಳು ಇತ್ಯಾದಿ.

೧. ಸೋಬಾನೆ ಪದಗಳು : ಮ್ಯಾಸಬೇಡರ ಹಬ್ಬಗಳ ಸಂದರ್ಭದಲ್ಲಿ ಹೆಣ್ಣು ಮಕ್ಕಳು ದೇವರ ಸನ್ನಿಧಿಯಲ್ಲಿ ಸೋಬಾನೆ ಪದಗಳನ್ನು ಹಾಡುತ್ತಾರೆ. ತಮ್ಮ ಇಷ್ಟ ದೈವದ ಹುಟ್ಟು–ಬೆಳವಣಿಗೆ–ಸಾಧನೆ ಮುಂತಾದ ಸಂಗತಿಗಳ ವರ್ಣನೆಯನ್ನು ಮಾಡುವ ಈ ಪದಗಳನ್ನು ತಾಸುಗಟ್ಟಲೆ ಹಾಡುತ್ತಾರೆ. ಮ್ಯಾಸಬೇಡರ ಪ್ರತೀ ಹಟ್ಟಿಯಲ್ಲೂ ತಮ್ಮ ದೈವಗಳನ್ನು ತಾವು ಕಂಡಂತೆ ವಿಶಿಷ್ಟ ರೂಪದಲ್ಲಿ ವರ್ಣಿಸುವ ಪ್ರಯತ್ನ ಈ ಸೋಬಾನೆ ಹಾಡುಗಳಲ್ಲಿ ಕಾಣಬಹುದು.

ಕುತೂಹಲದ ಸಂಗತಿಯೆಂದರೆ ಬೇರೆ ಬೇರೆ ದೈವಕ್ಕೆ ಸಂಬಂಧಿಸಿದ ಈ ಪದಗಳಲ್ಲಿ ಕೆಲವು ಸಾಮಾನ್ಯ ಸಂಗತಿಗಳಿದ್ದರೆ, ಒಂದೇ ದೇವರಿಗೆ ಸಂಬಂಧಿಸಿದ ಬೇರೆ ಬೇರೆ ಹಟ್ಟಿಯ ಹಾಡುಗಳಲ್ಲಿ

ಅನೇಕ ಭಿನ್ನತೆಗಳು ಇರುತ್ತವೆ. ಈ ಸೋಬಾನೆ ಪದಗಳನ್ನು ಹಬ್ಬಗಳಲ್ಲಿ ಮಾತ್ರವಲ್ಲದೆ ಬಿಡುವಿನ ಕೆಲಸಗಳನ್ನು ಮಾಡುವಾಗಲೂ ಹಾಡುವುದುಂಟು.

ಈ ಸಮುದಾಯದಲ್ಲಿ ಹಾಡುವ ಸೋಬಾನೆ ಪದಗಳ ಮತ್ತೊಂದು ಮಾದರಿ ಮದುವೆ ಸಂದರ್ಭದಲ್ಲಿ ಮದುಮಗಳನ್ನು ಹಸಿರು ಗುಡಿಸಲಿಗೆ ಕೂರಿಸುವ ಸಂದರ್ಭದಲ್ಲಿ ಹಾಡುವುದುಂಟು. ಗುಡಿಸಲಿಗೆ ಕುಳಿತ ಮದುಮಗಳಿಗೆ ಸಂಬಂಧಿಗಳು 'ಹೊಸಗೆ' ಹಾಕುವಾಗ ಹಾಡುವ ಈ ಹಾಡುಗಳು ಹೊಸಗೆ ಹೊಯ್ಯುವ ಕುಟುಂಬ, ಕುಟುಂಬದ ಹಿರಿಯರನ್ನು ಕೀರ್ತಿಸುವ ಕೆಲಸ ಮಾಡುತ್ತವೆ. ಇಷ್ಟು ವೈವಿಧ್ಯಮಯವಾದ ಸೋಬಾನೆ ಪದ ಹಾಗೂ ಮ್ಯಾಸಬೇಡರನ್ನು ಕುರಿತಂತೆ ಅಧ್ಯಯನ ಮಾಡಿದ ಕೃಷ್ಣಮೂರ್ತಿ ಹನೂರು, ಕರಿಶೆಟ್ಟಿ ರುದ್ರಪ್ಪ, ಮೀರಾಸಾಬಿಹಳ್ಳಿ ಶಿವಣ್ಣ ವಿರೂಪಾಕ್ಷಿ ಪೂಜಾರಹಳ್ಳಿ ಮೊದಲಾದವರು ಪ್ರಾಸಂಗಿಕವಾಗಿ ಗಮನಿಸಿದ್ದಾರೆ. ಆದರೆ ಪ್ರತ್ಯೇಕವಾಗಿ ಸಂಗ್ರಹಿಸಿ ಪ್ರಕಟಿಸುವ ಯಾವ ಪ್ರಯತ್ನವೂ ಕನ್ನಡ ಜಾನಪದ ಅಧ್ಯಯನದ ಸಂದರ್ಭದಲ್ಲಿ ನಡೆದಿಲ್ಲ. ವಾಸ್ತವವಾಗಿ ನೋಡುವುದಾದರೆ ಮ್ಯಾಸರ ಸಾಂಸ್ಕೃತಿಕ ಅಧ್ಯಯನಕ್ಕೆ ಅತ್ಯಂತ ಪೂರಕ ಸಾಮಾಗ್ರಿ ಇದಾಗಿದ್ದು ಈ ಎಲ್ಲಾ ಪದಗಳನ್ನು ಸಂಗ್ರಹಿಸಿ, ಅಧ್ಯಯನಕ್ಕೆ ಬಳಸಿಕೊಳ್ಳಬೇಕಾದುದು ಇಂದಿನ ಅತೀ ತುರ್ತಾಗಿದೆ.

೨. ದೇವರ ಪದಗಳು : ಮ್ಯಾಸಬೇಡರ ಸಂಸ್ಕೃತಿಯಲ್ಲಿ ದೇವರ ಪದಗಳ ಪಾತ್ರ ಅತ್ಯಂತ ಮಹತ್ವದ್ದಾಗಿದೆ. ತಮ್ಮ ಮ್ಯಾಸಗಂಪಳದ ಸುಮಾರು ೩೨ ವಿವಿಧ ದೈವಗಳ ಬಗ್ಗೆ ಅವರು ಕಟ್ಟಿ ಹಾಡುತ್ತಿರುವ ೩೨ಕ್ಕೂ ಹೆಚ್ಚಿನ ಹಾಡುಗಳು ತೆಲುಗಿನಲ್ಲಿವೆ. ಈ ಪದಗಳು ೪ ಅಥವಾ ೬ ಸಾಲುಗಳಿದ್ದು, ಅಷ್ಟರಲ್ಲೇ ಒಂದು ದೈವದ ಇಡೀ ಕಥೆಯನ್ನು ಸಾರಾಂಶ ರೂಪದಲ್ಲಿ ಹೇಳುತ್ತಿವೆ. ಉದಾ:- ಮ್ಯಾಸರ ಮಹತ್ವದ ದೈವ ಕಂಪಳದೇವರ ಬಗ್ಗೆ ಇರುವ ಒಂದು ಪದವನ್ನು ನೋಡಬಹುದು.

ಅದಿ ಮಲ ಇದಿ ಮಲ ನಡುಮಿದಯ್ಯ ಸ್ವಾಮಿ ಮಲ
ಸ್ವಾಮಿ ಮಲ ಕೆಂದಿವಾಡೂರಾ। ಮೇಲೌರಾ ಜಾಣ।
ಸನ್ನ ನಾಮಲು ಚಿನ್ನವಾಡುರಾ॥
ಅಡ್ರಿಕೊಟ್ಟು ವಡ್ರಿಸಿಂಬ ನೆತ್ತಿಮೀದ ಪೆಟ್ಟಿಕೋನಿ
ದಂಡುಲಾಕಿ ತಾನೇ ವಚ್ಚೇರಾ। ಮೇಲೌರಾ ಜಾಣ।
ಬುದ್ಧಿವಂತಡು ಭೂಮಿರಾಜುರಾ॥

ಈ ಪದದಲ್ಲಿ ಮ್ಯಾಸರ ಕಾಡಿನ ಪಯಣದಲ್ಲಿ ಕಂಪಳರಂಗ ಸಣ್ಣ ನಾಮಧರಿಸಿ ಪೆಟ್ಟಿಗೆ ರೂಹದಲ್ಲಿ ಗುಂಪಿಗೆ ಬಂದು ಸೇರಿದ ಬಗ್ಗೆ ಮಾಹಿತಿ ಇದೆ. ಸಮುದಾಯವೊಂದರ ಚರಿತ್ರೆಯನ್ನು ಕಟ್ಟುವಲ್ಲಿ ಇಂಥ ಮಾಹಿತಿಗಳು ಮಹತ್ವದ ಪಾತ್ರವಹಿಸುತ್ತವೆ. ಇಂಥ ೩೨ ಹಾಡುಗಳನ್ನು ನಾನು ಸಂಗ್ರಹಿಸಿದ್ದು, ಅವುಗಳನ್ನು 'ಬಡಗಿಕಟ್ಟಿದ ಬೆಡಗಿನ ಮಾಳಿಗೆ' ಕೃತಿಯಲ್ಲಿ ಸೇರಿಸಿ ಪ್ರಕಟಿಸಿದ್ದೇನೆ. ಇದು ಬಿಟ್ಟರೆ ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಪಿಎಚ್.ಡಿ. ಪದವಿಗಾಗಿ ಸಂಶೋಧನೆ ಮಾಡಿದ ಬಿ. ಪಾಪಣ್ಣ ಅವರು ಇಂಥ ಕೆಲವು ಪದಗಳನ್ನು ತಮ್ಮ ಪ್ರಬಂಧದಲ್ಲಿ ದಾಖಲಿಸಿದ್ದಾರೆ. ಇದರ ಹೊರತಾಗಿ ಇನ್ನೂ ಗಂಭೀರ ವಾದ ಸಂಗ್ರಹ ಸಂಪಾದನೆ ಅಧ್ಯಯನ ಕಾರ್ಯಗಳು ನಡೆಯಬೇಕಿದೆ.

೩. ದೇವರ ಕಥೆಗಳು : ಮ್ಯಾಸಬೇಡರಲ್ಲಿ ಪ್ರಸಾರದಲ್ಲಿರುವ ಸಾಹಿತ್ಯರಾಶಿಯಲ್ಲಿ ದೇವರ ಕಥೆಗಳದೂ ಒಂದು ದೊಡ್ಡ ಭಾಗ. ತಮ್ಮ ಕುಲ ದೈವಗಳ ಬಗ್ಗೆ ತಮ್ಮ ಪೂರ್ವಿಕರಿಂದ ಕೇಳಿ ತಿಳಿದು ಹೇಳುತ್ತಾ ಬಂದಿರುವ ಗದ್ಯ ಪ್ರಕಾರಗಳು ಈ ಗುಂಪಿನಲ್ಲಿ ಬರುತ್ತವೆ. ಸಾಮಾನ್ಯವಾಗಿ ತೆಲುಗು ಭಾಷೆಯಲ್ಲಿರುವ ಈ ಕಥೆಗಳು ಸಮುದಾಯದ ಸಾಂಸ್ಕೃತಿಕ ನಾಯಕರಾದ ಗಾದರಿಪಾಲನಾಯಕ, ಪಾಪನಾಯಕ, ಯರಗಾಟ ನಾಯಕ ಮೊದಲಾದವರ ಬಗ್ಗೆ ಮಾಹಿತಿ ನೀಡುತ್ತವೆ. ಇಂಥ ಸಾಹಿತ್ಯವನ್ನು ಈವರೆಗಿನ ಅಧ್ಯಯನ ಕಾರರು ತಮ್ಮ ಕ್ಷೇತ್ರಕಾರ್ಯದಲ್ಲಿ ಸಿಕ್ಕ ಸಣ್ಣ ಪ್ರಮಾಣದಲ್ಲಿ ಗಮನಿಸಿರುವುದನ್ನು ಬಿಟ್ಟರೆ ಸಮಗ್ರವಾದ ಸಂಗ್ರಹ ಆಗಿಲ್ಲ ಎಂಬುದನ್ನು ಗಮನಿಸಬೇಕಾಗಿದೆ.

೪. ಕುಲ ಚರಿತ್ರೆಗಳು : ಮ್ಯಾಸಬೇಡರ ಸಮುದಾಯದ ಚರಿತ್ರೆ ಬರೆಹದ ಸಂಸ್ಕೃತಿ ಚರಿತ್ರೆಗಳಲ್ಲಿ ದಾಖಲಾಗಿಲ್ಲ. ಆದರೆ ಸಮುದಾಯದ ಅನುಭವಿ ಹಿರಿಯರ ಬಾಯಲ್ಲಿ ಸಾಕಷ್ಟು ಮಾಹಿತಿ ಹರಿದಾಡುತ್ತಿರುವುದನ್ನು ಇಂದಿಗೂ ಕಾಣಬಹುದು. ತೆಲುಗು ಹಾಗೂ ಕನ್ನಡ ಈ ಎರಡೂ ಭಾಷೆಗಳಲ್ಲಿ ಹೇಳಲ್ಪಡುವ ಈ ಕಥನಗಳ ಪ್ರಮಾಣ ದೊಡ್ಡದು. ಮ್ಯಾಸಬೇಡರ ಮೂಲಪುರುಷ ಚೆಟ್ಲುಗುಟ್ಲು ಮಲ್ಲಿನಾಯಕನಿಂದ ಶುರುವಾಗಿ ಅಲ್ಲಿಂದ ಸರಿಸುಮಾರು ೮ ರಿಂದ ೧೦ ತಲೆಮಾರುಗಳ ದೀರ್ಘ ಇತಿಹಾಸವನ್ನು ನಿರೂಪಿಸುವ ಕುಲ ಚರಿತ್ರೆಗಳು ಈ ಸಮುದಾಯದ ಪ್ರತೀ ಹಟ್ಟಿಯಲ್ಲೂ ತಮ್ಮದೇ ಆದ ವಿಶಿಷ್ಟತೆ ಯೊಂದಿಗೆ ನಿರೂಪಿಸಲ್ಪಡುತ್ತಿರುವುದು ಕುತೂಹಲದ ಸಂಗತಿಯಾಗಿದೆ. ಇತ್ತೀಚೆಗೆ ಅಕ್ಷರ ಬಲ್ಲ ಕೆಲವು ಹಿರಿಯರು ಬರೆಹದ ರೂಪದಲ್ಲಿ ಈ ಕುಲ ಚರಿತ್ರೆಗಳನ್ನು ಬರೆದಿಡುತ್ತಿದ್ದಾರೆ. ಜಗಳೂರು ತಾಲ್ಲೂಕಿನ ಐಯ್ಯನಹಳ್ಳಿ ತಿಪ್ಪೇಸ್ವಾಮಿ ಅವರು ಮ್ಯಾಸಬೇಡರ ಕುಲ ಚರಿತ್ರೆಯನ್ನು ಮೂರು ಸಂಪುಟಗಳಲ್ಲಿ ಬರೆದಿದ್ದಾರೆ. ಇದಲ್ಲದೆ ಅನೇಕ ಹಿರಿಯರು ತಮಗೆ ಬರೆಯಲು ಬರದಿದ್ದರೂ ಅಕ್ಷರ ಬಲ್ಲವರ ಸಹಾಯದಿಂದ ಹೇಳಿ ಬರೆಸಿದ್ದಾರೆ. ನಮ್ಮ ಮುಂದಿನ ತಲೆಮಾರಿಗೆ ಈ ಮಾಹಿತಿ ಸಿಗುವಂತಾಗಲಿ ಎಂಬ ಭಾವನೆ ಇಂಥ ಬರೆಹಗಳ ಹಿಂದಿನ ಆಶಯವಾಗಿದೆ. ಇಂಥ ಬರೆಹಗಳನ್ನು ಸಮುದಾಯದ ಜನ ತಮ್ಮ ಪರಂಪರೆಯ ಆಸ್ತಿ ಎಂಬಂತೆ ಕಾಪಾಡುತ್ತಿದ್ದಾರೆ. ಆದರೂ ಇನ್ನೂ ಹಲವಾರು ಹಟ್ಟಿಗಳಲ್ಲಿ ಪ್ರಚಲಿತವಿರುವ ಕುಲ ಚರಿತ್ರೆಗಳನ್ನು ಮೌಖಿಕ ರೂಪದಿಂದ ಬರೆಹ ಮಾಧ್ಯಮಕ್ಕೆ ತರಬೇಕಿದೆ. ಇದು ಸಾಧ್ಯವಾದರೆ ಮ್ಯಾಸಬೇಡರ ಕುಲ ಮೂಲ ಸಂಶೋಧನೆಗೆ ಸಾಕಷ್ಟು ಸಹಾಯವಾಗಲಿದೆ.

೫. ಕಟ್ಟೆಮನೆಗಳ ಪತ್ರಸಾಹಿತ್ಯ : ಮ್ಯಾಸಬೇಡರ ಕಟ್ಟೆಮನೆಗಳ ಸಂಖ್ಯೆ ಮತ್ತು ಸ್ವರೂಪದ ನಿಖರತೆಯ ಬಗ್ಗೆ ವಿದ್ವತ್‌ವಲಯದಲ್ಲಿ ಸಾಕಷ್ಟು ಚರ್ಚೆಗಳು ನಡೆಯುತ್ತಿವೆ. ಈ ಸಮುದಾಯಕ್ಕೆ ಬೇರೆ ಬೇರೆ ಕಾಲಮಾನದಲ್ಲಿ ಒಟ್ಟು ೧೨ ಕಟ್ಟೆಮನೆಗಳಿರುವ ಬಗ್ಗೆ ಆಧಾರಗಳಿವೆ. ಅದರಲ್ಲಿ ಕೆಲವು ಕಟ್ಟೆಮನೆಗಳಿಗೆ ಸಂಬಂಧಿಸಿದ ಕಾಗದ ಪತ್ರಗಳೂ ಇಂದಿಗೂ ದೊರೆಯುತ್ತವೆ. ನನ್ನಿವಾಳ, ನಾಯಕನಹಟ್ಟಿ, ಗೋನೂರು ಈ ಮೂರು ಕಟ್ಟೆಮನೆಗಳ ದಾಖಲೆಗಳಂತೂ ಸಾಕಷ್ಟು ಇದ್ದು ಅವುಗಳನ್ನು ಸಮಗ್ರತೆಯ ರೂಪದಲ್ಲಿ ಸಂಗ್ರಹಸಿ ಪ್ರಕಟಿಸಬೇಕಿದೆ. ಈ ದಾಖಲೆಗಳಲ್ಲಿ ನ್ಯಾಯ ತೀರ್ಮಾನದ ವ್ಯವಹಾರ ಪತ್ರಗಳು, ನ್ಯಾಯ ಮಾಡಿ ಹೊರಡಿಸಿದ ಆದೇಶ ಪತ್ರಗಳು, ಹಬ್ಬ

ಹರಿದಿನಗಳಿಗೆ ಹೊರಡಿಸಿದ ಆಹ್ವಾನ ಪತ್ರಿಕೆಗಳು ಮುಖ್ಯವಾಗುತ್ತವೆ. ಇವೆಲ್ಲವೂ ಬರೆಹ ರೂಪದಲ್ಲಿದ್ದರೂ ಜನಪದ ಸಾಹಿತ್ಯದ ಪರಿಧಿಯೊಳಗೇ ಪರಿಗಣಿಸಬೇಕಾಗುತ್ತದೆ. ಈವರೆಗೆ ಅಧ್ಯಯನ ಮಾಡಿರುವ ಕೆಲವರು ಈ ದಾಖಲೆಗಳನ್ನು ಸ್ವಲ್ಪ ಪ್ರಮಾಣದಲ್ಲಿ ಸಂಗ್ರಹಿಸಿ ತಮ್ಮ ಅಧ್ಯಯನಗಳಿಗೆ ಬಳಸಿಕೊಂಡಿರುವುದುಂಟು. ಅಂಥ ಪ್ರಯತ್ನಗಳಲ್ಲಿ ಕೃಷ್ಣಮೂರ್ತಿ ಹನೂರು, ವಿರೂಪಾಕ್ಷಿ ಪೂಜಾರಹಳ್ಳಿ, ಹೆಚ್.ಆರ್. ತಿಪ್ಪೇಸ್ವಾಮಿ, ಬಿ. ಪಾಪಣ್ಣ ಅವರನ್ನು ಸ್ಮರಿಸಬಹುದು.

೬. ಕೋಲು ಮತ್ತು ಭಜನೆ ಪದಗಳು : ಕೋಲಾಟ ಮತ್ತು ಭಜನೆ ಮ್ಯಾಸಬೇಡರ ಸಮುದಾಯದಲ್ಲಿ ಪ್ರಚಲಿತವಿರುವ ಕಲೆಗಳಲ್ಲಿ ಪ್ರಧಾನವಾದವುಗಳಾಗಿವೆ. ಈ ಕಲೆಗಳಿಗೆ ಹೊಂದಿಕೊಂಡಂತಿರುವ ಸಾಹಿತ್ಯವಿದೆ. ಇದು ತೆಲುಗು ಮತ್ತು ಕನ್ನಡ ಭಾಷೆಗಳಲ್ಲಿ ಪ್ರಸರಣಗೊಳ್ಳುತ್ತಿದ್ದು ಅದನ್ನು ಸಂಗ್ರಹಿಸಿ ಅಧ್ಯಯನ ಮಾಡಬೇಕಾದ ತುರ್ತು ಇದೆ. ಈ ಮೌಖಿಕ ಸಾಹಿತ್ಯದಲ್ಲಿ ಬರೆಹದ ಸಂಸ್ಕೃತಿಯಲ್ಲಿರುವ ದಾಸರ ಪದಗಳು ಹಾಗೂ ತತ್ವಪದಕಾರರ ಹಾಡುಗಳು ಕೋಲಾಟ ಮತ್ತು ಭಜನೆಯ ತಾಳ–ಲಯಗಳಿಗೆ ಅನುಗುಣವಾಗಿ ರೂಪಾಂತರಗೊಂಡು ಬಳಕೆಗೊಳ್ಳುತ್ತಿವೆ. ಹಾಗೆಯೇ ರಾಮಾಯಣ–ಮಹಾಭಾರತ ಮೊದಲಾದ ಪುರಾಣ ಕಾವ್ಯಗಳ ಕಥೆಗಳನ್ನು ಆಧರಿಸಿದ ಪದಗಳೂ ಸೇರಿವೆ. ಇತಿಹಾಸ ಮತ್ತು ಸಂಸ್ಕೃತಿಯ ವಿಷಯಗಳೂ ಕೂಡ ಇವೆ. ತೆಲಗು ಭಾಷೆಯ ಪದಗಳ ಸಂಖ್ಯೆಯೂ ವಿಪುಲವಾಗಿದೆ ಎಂಬುದನ್ನು ಇಲ್ಲಿ ವಿಶೇಷವಾಗಿ ಪ್ರಸ್ತಾಪಿಸಬಹುದು.

ತೆಲುಗು ಭಾಷೆಯ ಹಾಡುಗಳ ಮಾದರಿಗಾಗಿ ಕೋಲು ಪದಗಳಲ್ಲಿ ಸಿಗುವ ಒಂದು ಉದಾಹರಣೆಯನ್ನು ನೋಡುವುದಾದರೆ :

ದಾತ ಲಚ್ಚಂ ಪಟ್ಟರ ಜೋಗಿ
ಕಾಶಿ ಕಾವುಂಡಲ ಧರಿಸ್ಯಾರೆ ಜೋಗಿ
ಸಂಕಾಕಿ ಜೋಳಿಗ ಎಯ್ಯಾರ ಜೋಗಿ
ಚೇತೂಲ ಕಿನ್ನೂರಿ ನುಡಿಸ್ಯಾರ ಜೋಗಿ
ದೇಶಂ ದೇಶಂ ತಿರುಗ್ಯಾರ ಜೋಗಿ ॥ಪ॥

ಈ ಮೇಲಿನ ತೆಲುಗು ಹಾಡಿನ ಸಾಲುಗಳು ಜೋಗಿಯೊಬ್ಬನ ವರ್ಣನೆ ಮಾಡುತ್ತಿವೆ. ಬಹುಶಃ ಈ ರೀತಿಯ ಪದಗಳೆಲ್ಲವೂ ಸಮುದಾಯದ ಆದಿ ಮೂಲದ ಉಳಿಕೆಗಳು ಆಗಿರಲು ಸಾಧ್ಯ. ಹಾಗಾಗಿ ಇಂಥ ವಿಶಿಷ್ಟ ರಚನೆಗಳ ಬಗ್ಗೆ ನಮ್ಮ ಅಧ್ಯಯನಗಳು ಗಂಭೀರವಾಗಿ ಬೆಳಕು ಚೆಲ್ಲಬೇಕಾದ ಅಗತ್ಯವಿದೆ. ಈ ದಿಕ್ಕಿನಲ್ಲಿ ಇತ್ತೀಚೆಗೆ ಪ್ರಕಟವಾದ 'ಬಡಗಿಕಟ್ಟಿದ ಬೆಡಗಿನ ಮಾಳಿಗೆ' ಕೃತಿಯಲ್ಲಿ ಕೆಲವು ಕೋಲಾಟದ ಪದಗಳನ್ನು ಸಂಗ್ರಹಿಸಿ ಪ್ರಕಟಿಸಿರುವುದನ್ನು ನಮ್ರವಾಗ ತಿಳಿಸಬಯಸುತ್ತೇನೆ. ಈ ಕೃತಿಯಲ್ಲಿ ಚಳ್ಳಕೆರೆ ತಾಲ್ಲೂಕಿನ ನಲಗೇತನಹಟ್ಟಿಯಲ್ಲಿ ಪ್ರಚಲಿತವಿರುವ ೧೨೦ಕ್ಕೂ ಹೆಚ್ಚಿನ ಹಾಡುಗಳನ್ನು ಸಂಗ್ರಹಿಸ ಲಾಗಿದೆ. ಇಂಥ ಇನ್ನೂ ಹಲವಾರು ಪ್ರಯತ್ನಗಳು ನಡೆಯಬೇಕಿದೆ. ಭಜನೆ ಪದಗಳನ್ನು ಇನ್ನೂ ಯಾರೂ ಗಂಭೀರವಾಗಿ ಪರಿಗಣಿಸದೇ ಇರುವುದು ಈ ಕ್ಷೇತ್ರ ಅಧ್ಯಯನದ ಬಹುದೊಡ್ಡ ಕೊರತೆಯಾಗಿ ಕಾಣುತ್ತಿದೆ. ಕೊರತೆಯನ್ನು ನೀಗಿಸುವ ಪ್ರಯತ್ನ ಇನ್ನಾದರೂ ಆರಂಭವಾಗಬೇಕಿದೆ.

೭. ಕಥನಕಾವ್ಯಗಳು ಮತ್ತು ಮಹಾಕಾವ್ಯಗಳು : ಮ್ಯಾಸಬೇಡರ ಮೌಖಿಕ ಸಾಹಿತ್ಯ, ಜಾನಪದ ಸಾಹಿತ್ಯ ಸಂಪತ್ತಿನಲ್ಲಿ ಸಂಸ್ಕೃತಿಯ ಮಹತ್ವ ಪಡೆಯುವ ಗೀತ ಪ್ರಕಾರಗಳೆಂದರೆ ಒಂದು ಕಥನ ಕಾವ್ಯಗಳದ್ದು, ಮತ್ತೊಂದು ಮಹಾಕಾವ್ಯ ಪ್ರಕಾರದ್ದು. ಕಥನಕಾವ್ಯಗಳಲ್ಲಿ ಸಮುದಾಯದ ಸಾಂಸ್ಕೃತಿಕ ವೀರರು, ಪ್ರಾದೇಶಿಕ, ಐತಿಹಾಸಿಕ ವೀರರು ಮೊದಲಾದವರ ವಸ್ತುವಿಷಯಗಳು ಪ್ರಧಾನವಾಗಿದ್ದು ಇಂಥ ನೂರಾರು ಕಾವ್ಯಗಳು ಸಮುದಾಯದ ಒಡಲಲ್ಲಿ ಇನ್ನೂ ಉಸಿರಾಡುತ್ತಿವೆ. ಅಂಥವುಗಳಲ್ಲಿ ನನ್ನಿವಾಳ ಸುತ್ತಲಿನ ಪರಿಸರದ ಕೆಲವು ಗೀತೆಗಳನ್ನು ಡಾ. ಎ.ಎಸ್. ಪ್ರಭಾಕರ್ ಅವರು ಸಂಗ್ರಹಿಸಿ ಪ್ರಕಟಿಸಿದ್ದಾರೆ. ಇದಲ್ಲದೆ ಕೃಷ್ಣಮೂರ್ತಿ ಹನೂರು ಅವರ 'ವೀರಗೀತೆಗಳು', 'ಕತ್ತಲ ದಾರಿ ದೂರ', 'ಸಾವಿರದ ಸಿರಿಬೆಳಗು' ಮೊದಲಾದ ಸಂಕಲನಗಳಲ್ಲಿ ಕೆಲವಾರು ಗೀತೆಗಳನ್ನು ಗುರುತಿಸಿ ಸಂಗ್ರಹಿಸ ಪ್ರಕಟಿಸಿದ್ದಾರೆ. ಇದಲ್ಲದೆ ಮೀರಾಸಾಬಿಹಳ್ಳಿ ಶಿವಣ್ಣ, ವಿರೂಪಾಕ್ಷಿ ಪೂಜಾರಹಳ್ಳಿ (ಗಾದರಿಪಾಲನಾಯಕ) ಮೊದಲಾದ ಸಂಶೋಧಕರು ತಮ್ಮ ಅಧ್ಯಯನಗಳಿಗೆ ಪೂರಕವಾದ ಕೆಲವಾರು ಗೀತೆಗಳನ್ನು ಗುರುತಿಸಿ ಬಳಸಿದ್ದಾರೆ. ಆದರೆ ಅಂಥ ಕಾವ್ಯಗಳನ್ನು ಪ್ರತ್ಯೇಕವಾಗಿ ಪ್ರಕಟಿಸಬೇಕಿದೆ.

'ಮಹಾಕಾವ್ಯ' ಎನ್ನುವ ಹೆಸರಿನಲ್ಲೂ ಈ ಸಮುದಾಯದಲ್ಲಿ ಹತ್ತಾರು ಕಾವ್ಯಗಳು ಪ್ರಚಲಿತದಲ್ಲಿವೆ. ಅವುಗಳಲ್ಲಿ ವಿರೂಪಾಕ್ಷಿ ಪೂಜಾರಹಳ್ಳಿ ಅವರು ಹಂಪಿ ವಿಶ್ವವಿದ್ಯಾಲಯ ದಿಂದ ಗಾದ್ರಿಪಾಲನಾಯಕ ಮಹಾಕಾವ್ಯವನ್ನು ಪ್ರಕಟಿಸಿದ್ದು ಬಿಟ್ಟರೆ ಬೇರೆ ಯಾವ ಕಾವ್ಯವೂ ಪ್ರಕಟಗೊಂಡಿಲ್ಲ. ಗಮನಿಸಬೇಕಾದ ಸಂಗತಿಯೆಂದರೆ ಕಥನಕಾವ್ಯಗಳು ಎಂಬ ಹೆಸರಲ್ಲಿ ಪ್ರಕಟವಾಗಿರುವ ಹಲವಾರು ಕಾವ್ಯಗಳನ್ನು ಮೂಲ ಮಾದರಿಗಳಲ್ಲಿ ಗುರುತಿಸಿ ಪ್ರಕಟಿಸಿದ್ದೇ ಆದರೆ ಇನ್ನೂ ಹತ್ತಾರು ಮಹಾಕಾವ್ಯಗಳು ಮ್ಯಾಸಬೇಡರ ಹೆಸರಲ್ಲಿ ದಾಖಲಾಗುವುದರಲ್ಲಿ ಯಾವುದೇ ಅನುಮಾನವಿಲ್ಲ. ಅಷ್ಟೇ ಅಲ್ಲದೆ ಬರೆಹ ರೂಪಕ್ಕೆ ಸಿಗದೆ ಶುದ್ಧ ಸಾಂಪ್ರದಾಯಿಕವಾಗಿ ಹಾಡಲ್ಪಡುವ ಬೊಮ್ಮಲಿಂಗ, ಚನ್ನಯ್ಯ-ಕ್ಯಾಸಯ್ಯ, ನಲಗೇತು ಎಜಗಯ್ಯ, ಜಗಳೂರು ಪಾಪನಾಯಕ ಇವೆ ಮೊದಲಾದ ಕಾವ್ಯಗಳು ಮಹಾಕಾವ್ಯ ಗಳಾಗಿದ್ದು ಅವುಗಳನ್ನು ಸರಿಯಾದ ರೀತಿಯಲ್ಲಿ ಗುರುತಿಸಿ ಸಂಗ್ರಹಿಸಿ ಪ್ರಕಟಿಸಬೇಕಿದೆ.

೮. ಗಾದೆ-ಒಗಟುಗಳು : ಗಾದೆ ಮತ್ತು ಒಗಟು ಪ್ರಕಾರಗಳು ಎಲ್ಲಾ ಪ್ರದೇಶ ಸಮುದಾಯಗಳಲ್ಲಿ ದೊರೆಯುವಂತಹ ಸಾಮಾನ್ಯ ಪ್ರಕಾರಗಳೆನಿಸಿದರೂ ಅವುಗಳಲ್ಲಿರುವ ಸಂಸ್ಕೃತಿ ಹಾಗೂ ಪ್ರದೇಶ ನಿಷ್ಠಗುಣಗಳಿಂದಾಗಿ ಅನನ್ಯವಾಗಿರುತ್ತವೆ. ಒಂದೇ ಗಾದೆ – ಒಗಟು ಬೇರೆ ಬೇರೆ ಪ್ರದೇಶ ಹಾಗೂ ಸಮುದಾಯ – ಸಂಸ್ಕೃತಿಗಳೊಳಗೆ ಭಿನ್ನವಾಗಿರಲು ಸಾಧ್ಯ. ಈ ಹಿನ್ನೆಲೆಯಲ್ಲಿ ಮ್ಯಾಸಬೇಡ ಸಂಸ್ಕೃತಿಯ ಒಡಲಲ್ಲಿ ಸಿಗುವ ಗಾದೆ-ಒಗಟುಗಳನ್ನು ಗುರುತಿಸುವುದು ಕುತೂಹಲದಾಯಕವಾದುದು. ಇದಕ್ಕೆ ಉದಾಹರಣೆಯಾಗಿ ಒಂದೆರಡು ಗಾದೆ ಮತ್ತು ಒಗಟುಗಳನ್ನು ಗಮನಿಸಬಹುದು.

ಎರಡು ಗಾದೆಗಳು

೧. ಪೀತಲಿ ತಿನ್ನನ ಎನುಮಿಕಿ ಕೊಮ್ಮು ಕೋಸ್ತೆ ಇಡುಸ್ತಾಂದೆ
(ಏಲು ತಿನ್ನುವ ಎಮ್ಮೆಗೆ ಕೋಡು ಕೊಯ್ದರೆ ಬಿಟ್ಟೀತೆ)

೨. ಮೀಸಲು ವಚ್ಚಿನಾನಿಕಿ ನ್ಯಾಲ ಕೂಮುಸಲೇದು
(ಮೀಸೆ ಬಂದವನಿಗೆ ನೆಲ ಕಾಣಿಸುವುದಿಲ್ಲ)

ಎರಡು ಒಗಟುಗಳು

೧. ಸೆಟ್ಟು ಸೆಟ್ಟುಕಿ ಜೋಗಿಲು
(ಗಿಡಗಿಡಕ್ಕೂ ಜೋಗಿಗಳು – ಮೇಕೆಗಳು)

೨. ಗುಡ್ಡಮು ಸುತ್ತ ಗುಂಡುರಾಡ್ಲು
(ಗುಡ್ಡದ ಸುತ್ತ ಗುಂಡುಕಲ್ಲು – ಪಾತ್ರೆಯಲ್ಲಿರುವ ಮುದ್ದೆಗಳು)

ಮೇಲಿನ ಉದಾಹರಣೆಗಳಲ್ಲಿ ಸಾಮಾನ್ಯ ಅಂಶಗಳ ಜೊತೆಗೆ ಆ ಸಮುದಾಯದ ಅನನ್ಯ ಅನುಭವವೂ ದಾಖಲೆಗೊಂಡಿರುವುದನ್ನು ಗುರುತಿಸಬೇಕಾಗಿದೆ.

ಒಟ್ಟಾರೆ, ಮ್ಯಾಸಬೇಡರ ಸಮುದಾಯದಲ್ಲಿರುವ ಜನಪದ ಸಾಹಿತ್ಯ ಸಂಪತ್ತು ಅಧ್ಯಯನಕಾರರ ಅವಶ್ಯಕತೆಗೆ ಅನುಗುಣವಾಗಿ ಬಳಕೆಗೊಂಡಿದ್ದು ಸಮಗ್ರವಾದ ಸಂಗ್ರಹ ಮತ್ತು ಅಧ್ಯಯನ ವ್ಯಾಪಕವಾದ ನೆಲೆಯಲ್ಲಿ ನಡೆಯಬೇಕಿದೆ. ಈ ಪ್ರಯತ್ನ ಗಂಭೀರವಾಗಿ ನಡೆದಿದ್ದೇ ಆದರೆ ಇಲ್ಲಿಯವರೆಗೆ ಮ್ಯಾಸಬೇಡರಲ್ಲಿ ಸಿಗುವ ಸಾಹಿತ್ಯ ಪ್ರಮಾಣ ಕಡಿಮೆ ಎನ್ನುವ ಮಾತು ಸುಳ್ಳಾಗಲಿದೆ. ಅದಕ್ಕಿಂತ ಮುಖ್ಯವಾಗಿ ಈ ಸಮುದಾಯದ ಸಂಸ್ಕೃತಿಯ ಸಮಗ್ರ ದರ್ಶನ ಸಾಧ್ಯವಾಗುತ್ತದೆ. ಮ್ಯಾಸಬೇಡರ ಜನಪದ ಸಾಹಿತ್ಯದ ಮೂಲಕ ಅವರ ಚರಿತ್ರೆ ಮತ್ತು ಸಂಸ್ಕೃತಿ ಬಗ್ಗೆ ಅಧ್ಯಯನ ಮಾಡುವುದು ಸುಲಭವಾಗುತ್ತದೆ. ಮರೆಯಾದ ವಿವರಗಳು, ಘಟನೆಗಳು, ವ್ಯಕ್ತಿಗಳ ಸಾಹಸಗಳನ್ನು ಇವುಗಳ ಮೂಲಕ ತಿಳಿಯಬಹುದಾಗಿದೆ. ಈಗಾಗಲೇ ಮ್ಯಾಸಬೇಡರ ಮೌಖಿಕ ಚರಿತ್ರೆ ಮೂಲಕ ಗಾದರಿಪಾಲನಾಯಕ, ಜಗಳೂರು ಪಾಪನಾಯಕ, ಯರಮಂಚಿನಾಯಕ, ಯರಗಾಟನಾಯಕ, ಕೊಡಗು ಬೊಮ್ಮಯ್ಯ, ದಡ್ಡಿಸೂರನಾಯಕ, ದೇವಮ್ಮ, ನಾಯಕನಹಟ್ಟಿ ಸಿಪ್ಪೇಸ್ವಾಮಿ ಮೊದಲಾದ ಚಾರಿತ್ರಿಕ ವ್ಯಕ್ತಿಗಳ ಬಗ್ಗೆ ಅಧ್ಯಯನಗಳಾಗಿವೆ. ಈ ಬಗೆಯ ಅಧ್ಯಯನಗಳಿಗೆ ಮತ್ತಷ್ಟು ಆಕರವನ್ನು ತುಂಬುವಲ್ಲಿ ಜನಪದ ಸಾಹಿತ್ಯ ನೆರವಾಗುವುದರಲ್ಲಿ ಎರಡು ಮಾತಿಲ್ಲ.

ಪರಾಮರ್ಶನ ಗ್ರಂಥಗಳು


೧. ಕೃಷ್ಣಮೂರ್ತಿ ಹನೂರು, ೧೯೯೨, ಮ್ಯಾಸಬೇಡರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.
೨. ಕರಿಶೆಟ್ಟಿರುದ್ರಪ್ಪ, ೧೯೯೬, ಮ್ಯಾಸನಾಯಕ ಜನಾಂಗಿಕ ಅಧ್ಯಯನ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.
೩. ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೨, ಚಿತ್ರದುರ್ಗ ಜಿಲ್ಲೆಯ ಬುಡಕಟ್ಟು ವೀರರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
೪. ವಿರೂಪಾಕ್ಷಿ ಪೂಜಾರಹಳ್ಳಿ, ೧೯೯೯, ಗಾದ್ರಿಪಾಲನಾಯಕ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
೫. ಎಸ್.ಎಂ. ಮುತ್ತಯ್ಯ, ೨೦೧೦, ಜಾನಪದ ಸಂಕಥನ, ಅಕ್ಷಯ ಪ್ರಕಾಶನ, ಚಿತ್ರದುರ್ಗ.
೬. ಎಸ್.ಎಂ. ಮುತ್ತಯ್ಯ (ಸಂ), ೨೦೧೧, ಬಡಗಿಕಟ್ಟಿದ ಬೆಡಗಿನ ಮಾಳಿಗೆ, ದೇಸಿ ಪ್ರಕಾಶನ, ಬೆಂಗಳೂರು.
೭. ಎ.ಎಸ್. ಪ್ರಭಾಕರ, ೧೯೯೯, ಮ್ಯಾಸಬೇಡರ ಕಥನಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
೮. ಹೆಚ್.ಆರ್. ತಿಪ್ಪೇಸ್ವಾಮಿ, ೨೦೧೦, ಕಟ್ಟೆಮನೆಗಳು ಸಾಂಸ್ಕೃತಿಕ ಅಧ್ಯಯನ(ಪಿಎಚ್.ಡಿ. ಅಪ್ರಕಟಿತ) ಕುವೆಂಪು ವಿಶ್ವವಿದ್ಯಾನಿಲಯ, ಕುಪ್ಪಳ್ಳಿ.
೯. ಬಿ. ಪಾಪಣ್ಣ, ೨೦೧೧, ನನ್ನಿವಾಳ ಸುತ್ತಲಿನ ಮ್ಯಾಸಬೇಡರ ಹಳ್ಳಿಗಳ ಸಾಂಸ್ಕೃತಿಕ ಅಧ್ಯಯನ (ಪಿಎಚ್.ಡಿ ಪ್ರಬಂಧ), ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

# ನಾಯಕ ಜನಾಂಗದ ಮೌಖಿಕ ಮಹಾಕಾವ್ಯಗಳು

ಸಾಂಸ್ಕೃತಿಕ ಶ್ರೀಮಂತಿಕೆಯ ವಿಷಯದಲ್ಲಿ ಕರ್ನಾಟಕದ ಅನೇಕ ಸಮುದಾಯಗಳು ಮುಂಚೂಣಿಯಲ್ಲಿವೆ. ಅಂಥ ಎಲ್ಲಾ ಸಮುದಾಯಗಳು ಚರಿತ್ರೆಯಲ್ಲಿ ಒಂದಲ್ಲ ಒಂದು ರೀತಿಯಲ್ಲಿ ಆಳುವ ವರ್ಗಗಳ ಹಿತಾಸಕ್ತಿಗಳಿಗೆ ತಮ್ಮನ್ನು ತಾವು ತೇದುಕೊಂಡಂಥವು ಜೊತೆಗೆ ತೇದಿಸಿಕೊಂಡಂಥವು. ಹೀಗೆ ಅಧೀನವರ್ತಿಗಳಾಗಿ ಬದುಕಿದ ಸಮುದಾಯಗಳಿಗೆ ಬಹಳಷ್ಟು ದಿನಗಳ ಕಾಲ ಅಕ್ಷರ ಜ್ಞಾನ ದಕ್ಕಿಲ್ಲದಿರುವುದು ಎಲ್ಲರಿಗೂ ತಿಳಿದ ವಿಷಯವೆ. ಇಂಥ ಅಕ್ಷರ ಜ್ಞಾನ ವಂಚಿತ ಸಮುದಾಯಗಳ ಆಶಯ-ಅಭಿವ್ಯಕ್ತಿ ಸಾಧ್ಯವಾದುದು ಮಾತಿನ ಮೂಲಕವೇ. ಅಂಥ ಮಾತು ವಿವಿಧ ಆಯಾಮಗಳಲ್ಲಿ ರೂಪುಗೊಂಡು ಇಂದು ವಿದ್ವಾಂಸರ ವಲಯದಲ್ಲಿ 'ಜನಪದ ಸಾಹಿತ್ಯ' ಮೌಖಿಕ ಸಾಹಿತ್ಯ' ಎಂಬ ಹೆಸರಲ್ಲಿ ಗುರುತಿಸಲ್ಪಡುತ್ತದೆ. ಆದ್ದರಿಂದ ಇಲ್ಲಿ ಮೊದಲಿಗೇ ಸ್ಪಷ್ಟಪಡಿಸಿಕೊಳ್ಳಬೇಕಾದ ಒಂದು ಮಾತೆಂದರೆ : ಮೌಖಿಕತೆಗೂ ದಮನಕ್ಕೊಳಗಾದ ಸಮುದಾಯಗಳಿಗೂ ತೀರಾ ನಿಕಟವಾದ ಸಂಬಂಧವಿರುವುದು ಸ್ಪಷ್ಟ.

ಜನಪದ ಸಾಹಿತ್ಯ ಅಥವಾ ಮೌಖಿಕ ಸಾಹಿತ್ಯ ಎಂದಾಗ ಕಥೆ, ಗಾದೆ, ಒಗಟು, ಕಥನಗೀತೆ ಮಹಾಕಾವ್ಯ ಇವೇ ಮೊದಲಾದ ಪ್ರಕಾರಗಳು ಕಂಡು ಬರುತ್ತವೆ. ಈ ಎಲ್ಲಾ ಪ್ರಕಾರಗಳು ಬಹುತೇಕ ಎಲ್ಲಾ ಜನಾಂಗಗಳಲ್ಲಿಯೂ ಕಂಡು ಬರುತ್ತವೆ. ಹಾಗೂ ಅವುಗಳ ಸ್ವರೂಪವು ಕೂಡ ಬಹುತೇಕ ಒಂದೇ ಮಾದರಿಯಲ್ಲಿರುತ್ತದೆ. ಈ ಮಾತು 'ಮಹಾಕಾವ್ಯ' ಎನ್ನುವ ಪ್ರಕಾರಕ್ಕೆ ಮಾತ್ರ ಅನ್ವಯವಾಗದು. ಏಕೆಂದರೆ ಸಾಂಸ್ಕೃತಿಕ ಬಂಧ ಉಳಿದೆಲ್ಲ ಪ್ರಕಾರಗಳಿಗಿಂತ ಮಹಾಕಾವ್ಯ ಪ್ರಕಾರದಲ್ಲಿ ಹೆಚ್ಚು. ಈ ದೃಷ್ಟಿಯಿಂದ ಜನಪದ ಮಹಾಕಾವ್ಯವು ತಾನು ನೆಲೆನಿಂತಿರುವ ಜನಾಂಗದ ಸಾಂಸ್ಕೃತಿಕ ಚರಿತ್ರೆಯಾಗಿ, ಕುಲಚರಿತ್ರೆಯಾಗಿ, ಸಾಂಸ್ಕೃತಿಕ ವೀರರ ಸಾಹಸಗಾಥೆಯಾಗಿ, ಜನಾಂಗದ ಧರ್ಮ ಗ್ರಂಥವಾಗಿ ಕಂಡು ಬರುತ್ತದೆ. ಒಂದು ಸಮುದಾಯದ ಬದುಕಿಗೆ ಅತ್ಯಂತ ಅಗತ್ಯವೂ ಅನಿವಾರ್ಯವೂ ಆಗಿರುವ ಅಂಶಗಳು ಅಂಥ ಪುರಾಣಗಳ ಆಂತರಂಗದಲ್ಲಿ ಇರುವುದರಿಂದ, ಪ್ರತಿಯೊಂದು ಸಮುದಾಯವು ಮಹಾಕಾವ್ಯ ಮಾದರಿಯ ಪುರಾಣವೊಂದನ್ನು ತನ್ನ ಮಡಿಲಲ್ಲಿರಿಸಿಕೊಂಡಿರುತ್ತದೆ. ಈ ದೃಷ್ಟಿಯಿಂದ ನಾಯಕ ಜನಾಂಗದ ಒಡಲಲ್ಲಿರಿಸಿಕೊಂಡಿರುವ ಮಹಾಕಾವ್ಯಗಳೆಷ್ಟು ಎಂದು ಹುಡುಕ ಹೊರಟರೆ ದೊರೆಯುವ ಫಲಿತ ಆಶ್ಚರ್ಯಕರವಾಗಿರುತ್ತದೆ. ಏಕೆಂದರೆ ಇಂದು ಅನೇಕ ಜನ ವಿದ್ವಾಂಸರು ಗುರುತಿಸಿರುವ ಹಾಗೆ ಸುಮಾರು ಹತ್ತಕ್ಕೂ ಹೆಚ್ಚು ಜನಪದ ಮಹಾಕಾವ್ಯಗಳು ನಾಯಕ ಸಮಾಜದಲ್ಲಿ ಜೀವಂತವಾಗಿವೆ. ಅಂಥ ಮಹಾಕಾವ್ಯಗಳ ಪರಿಚಯಾತ್ಮಕ ಸಮೀಕ್ಷೆ ನಡೆಸುವುದು ಪ್ರಸ್ತುತ ಪ್ರಬಂಧದ ಆಶಯ.

ಮಹಾಕಾವ್ಯ ಪ್ರಕಾರಕ್ಕೂ, ನಾಯಕ ಜನಾಂಗಕ್ಕೂ ತಲೆ-ತಲಾಂತರಗಳ ಸಂಬಂಧವಿದೆ. ವಾಲ್ಮೀಕಿ, ಭಾರತೀಯ ಮಹಾಕಾವ್ಯ ಪರಂಪರೆಗೆ ನಾಂದಿ ಹಾಡಿದವನು ಎಂಬ ಸಂಗತಿ ಅಂಥ ಸಂಬಂಧವನ್ನು ಸರಿಯಾಗಿಯೇ ಸ್ಪಷ್ಟಪಡಿಸುತ್ತದೆ. ವಾಲ್ಮೀಕಿ ಬರೆದ ರಾಮಾಯಣ ಇಂದು

ರಾಮಾಯಣಗಳ ಒಂದು ದೊಡ್ಡ ಪರಂಪರೆಯನ್ನೇ ಹುಟ್ಟು ಹಾಕಿದೆ. ಹೀಗೆ ವಾಲ್ಮೀಕಿ ಎಂಬ ಕವಿ ಅಕ್ಷರ ಮಾಧ್ಯಮದ ಮೂಲಕ ಮಹಾಕಾವ್ಯ ರಚನೆ ಮಾಡಿ ಲೋಕಕ್ಕೆ ತೆರೆದುಕೊಳ್ಳುತ್ತಿರುವಾಗಲೇ ಮತ್ತೊಂದು ಕಡೆ ಅಕ್ಷರ ಲೋಕದಿಮದ ದೂರವಿದ್ದ ಜನ ಕೂಡ ತಮ್ಮ ಶಕ್ತಿಯನ್ನು, ಅಭಿವ್ಯಕ್ತಿಯ ಸಾಮರ್ಥ್ಯವನ್ನು ಮೌಖಿಕ ರಚನೆಗಳ ಮೂಲಕ ತೋರಿಸಿದರು. ಹಾಗಾಗಿ ಮುಖ್ಯವಾಹಿನಿಯ ಮಹಾಕಾವ್ಯ ಪರಂಪರೆಯಲ್ಲೂ, ಜಾನಪದ ಮಹಾಕಾವ್ಯ ಪರಂಪರೆಯಲ್ಲೂ ನಾಯಕ ಸಮುದಾಯಕ್ಕೆ ಪ್ರಧಾನ ಸ್ಥಾನವಿದೆ ಎಂಬುದನ್ನು ಯಾರಾದರೂ ಒಪ್ಪಬಹುದು.

ಇಂದಿನ ಜಾನಪದ ಅಧ್ಯಯನದ ಹೆಚ್ಚಿನ ಗಮನ ಸಮುದಾಯಗಳ ಸಾಂಸ್ಕೃತಿಕ ಅನನ್ಯತೆ, ಪ್ರತಿರೋಧ, ದೇಶಿ ಶಕ್ತಿಗಳ ಕಡೆಗಿದೆ. ಪರಿಣಾಮವಾಗಿ ಮೇಲಿನ ಎಲ್ಲಾ ಸಂಗತಿಗಳನ್ನು ಮೈಗೂಡಿಸಿಕೊಂಡಿರುವ ಜನಪದ ಮಹಾಕಾವ್ಯಗಳು ಅತ್ಯಂತ ಪ್ರಮುಖ ಅಧ್ಯಯನದ ಸಾಮಗ್ರಿಗಳೆನಿಸಿವೆ. ಇಂಥ ತಾತ್ವಿಕ ಭಿತ್ತಿಯೊಳಗೆ ನಾಯಕ ಜನಾಂಗವನ್ನು ಅಧ್ಯಯನ ಮಾಡಿರುವ ಯಾವ ವಿದ್ವಾಂಸರಿಬ್ಬರ ಹೆಸರುಗಳು ಹಾಗೂ ಅವರ ಸಾಧನೆಗಳನ್ನು ಸ್ಮರಿಸುವುದು ಅರ್ಥಪೂರ್ಣ. ಅವರೆಂದರೆ ಎ.ಎಸ್. ಪ್ರಭಾಕರ, ವೀರೂಪಾಕ್ಷಿ ಪೂಜಾರಹಳ್ಳಿ, ಇವರಿಬ್ಬರು ನಾಯಕ ಜನಾಂಗದಲ್ಲಿ ಚಾಲ್ತಿಯಿರುವ ಜನಪದ ಮಹಾಕಾವ್ಯಗಳ ಕುರಿತು ಗಂಭೀರ ಅಧ್ಯಯನ ನಡೆಸಿದ್ದಾರೆ. ವೀರೂಪಾಕ್ಷಿ ಪೂಜಾರಹಳ್ಳಿ ಅವರು ಗಾದ್ರಿ ಪಾಲನಾಯಕ ಮಹಾಕಾವ್ಯವನ್ನು ಸಂಗ್ರಹಿಸಿದ್ದಾರೆ. ಎ.ಎಸ್.ಪ್ರಭಾಕರ ಅವರು ಕಂಪಳದೇವರು, ಜಗಲೂರು ಪಾಪನಾಯಕ, ಮಾರಮ್ಮ, 'ಬೋರೇದೇವರು' ಗಾದ್ರಿಪಾಲನಾಯಕ ಎಂಬ ಐದು ಕಾವ್ಯಗಳನ್ನು ಸಂಗ್ರಹಿಸಿದ್ದಾರೆ.

ಇಲ್ಲಿ ವಿಶೇಷವಾಗಿ ಪ್ರಸ್ತಾಪಿಸಬೇಕಾದ ಸಂಗತಿ ಎಂದರೆ ವೀರೂಪಾಕ್ಷಿ ಪೂಜಾರಹಳ್ಳಿ, ಎ.ಎಸ್. ಪ್ರಭಾಕರ ಅವರ ಪ್ರಯತ್ನಗಳಿಗೆ ತುಂಬಾ ವರ್ಷಗಳಿಂದ ನಾಯಕ ಜನಾಂಗವನ್ನು ಕುರಿತು ಅಧ್ಯಯನಗಳು ಪೂರಕ ಸಾಮಗ್ರಿಯನ್ನು ಒದಗಿಸಿವೆ. ವಿಶೇಷವಾಗಿ ಗಮನಿಸಬೇಕಾದುದು ಏನೆಂದರೆ ಹಿಂದಿನ ಅಧ್ಯಯನಕಾರರು ನಾಯಕರ ಮೌಖಿಕ ಸಾಹಿತ್ಯವನ್ನು ಸಮೀಕ್ಷೆ ಮಾಡುವಾಗ – ಕಾಡುಗೊಲ್ಲರಿಗೆ ಹೋಲಿಸಿದರೆ ನಾಯಕರಲ್ಲಿ ಮೌಖಿಕ ಸಾಹಿತ್ಯ ಅತೀ ಕಡಿಮೆ ಎಂಬ ಹೇಳಿಕೆಯನ್ನು ಜನಪ್ರಿಯಗೊಳಸಿದ್ದಾರೆ. ವಿದ್ವಾಂಸರ ಈ ಮಾತನ್ನು ಯಾವುದೋ ಸಂದರ್ಭದಲ್ಲಿ ಒಪ್ಪಬಹುದಾದರೂ ಜನಪದ ಮಹಾಕಾವ್ಯ ವಿಷಯದಲ್ಲಿ ಒಪ್ಪಲಾಗುವುದಿಲ್ಲ. ಕಾರಣ ಸದ್ಯದಲ್ಲಿ ದೊರೆತಿರುವ ಮಾಹಿತಿಯಂತೆ ಬೇರೆ ಯಾವುದೇ ಜನಾಂಗದಲ್ಲಿಯೂ ದೊರೆಯುವಷ್ಟು ಮಹಾಕಾವ್ಯಗಳು ನಾಯಕ ಜನಾಂಗದಲ್ಲಿ ದೊರೆತಿವೆ. ಇನ್ನೂ ದೊರೆಯುವುದರಲ್ಲಿವೆ ಈಗಾಗಲೇ ಊಹಿಸಿರುವ ಹಾಗೆ ಮೂಗನಾಯಕ, ದಾನಸಾಲಮ್ಮ, ಶುಕ್ಲಮಲ್ಲಿನಾಯಕ, ಕಾಟಮಲ್ಲನಾಯ, ಸೂರ್ಯಯರಗಟ್ಟನಾಯಕ, ಯರಮಂಚನಾಯಕ, ಕೆಂಚವ್ವ, ಕಾಮವ್ವ, ಗಾದ್ರಿಪಾಲನಾಯಕ, ಜಗಳೂರು ಪಾಪನಾಯಕ, ಬೋರಯ್ಯ, ರಪ್ಪಲಸೂರಿ, ಚಿನ್ನಪಾಲನಾಯಕ, ಪಚ್ಚಪದಿ ಪಾಲಮ್ಮ ಇಂಥ ಹತ್ತಾರು ಸಾಂಸ್ಕೃತಿಕ ನಾಯಕ–ನಾಯಕಿಯರ ಕುರಿತಂತೆ ಹತ್ತಕ್ಕೂ ಹೆಚ್ಚಿನ ಮಹಾಕಾವ್ಯಗಳು ದೊರೆಯುತ್ತವೆ.. ಇವುಗಳಲ್ಲಿ

ಈಗಾಗಲೇ ಗಾದ್ರಿಪಾಲನಾಯಕ, ಜಗಲೂರು ಪಾಪನಾಯಕ, ಬೋರಯ್ಯ, ಮಾರಮ್ಮ, ಕಂಪಳದೇವರು ಎಂಬ ಐದು ಜನಪದ ಮಹಾಕಾವ್ಯಗಳು ಸಂಗ್ರಹವಾಗಿದ್ದು, ಅವುಗಳನ್ನು ಈ ಮುಂದಿನಂತೆ ಸ್ಥೂಲವಾಗಿ ಸಮೀಕ್ಷಿಸಬಹುದು.

೧. ಮಾರಮ್ಮನ ಕಾವ್ಯ : ಶಕ್ತಿ ಭಕ್ತಿಗಳ ಸಮ್ಮಿಲನ :

ಮಾರಮ್ಮ ದಲಿತಲೋಕದೊಳಗೆ ಪ್ರಚಲಿತವಿರುವ ಒಂದು ಜೀವಂತ ಪುರಾಣ, ವಿಶೇಷವಾಗಿ ಮಾಂಸಾಹಾರವೇ ಪ್ರಧಾನವಾಗಿರುವ ಸಮುದಾಯಗಳಲ್ಲಿ ಮಾರಮ್ಮನಿಗೆ ಮಹತ್ವದ ಸ್ಥಾನ. ಮಾರಮ್ಮನ ಹೆಸರಿನಲ್ಲಿ ಕುರಿ–ಕೋಣ–ಕೋಳಿಗಳ ಬಲಿ ಮಾಡಿ ತಿಂದು ಖುಷಿಪಡುವ ಸಂಪ್ರದಾಯ ಇವತ್ತಿಗೂ ಗಟ್ಟಿಯಾದ ಸಂಪ್ರದಾಯವಾಗಿದೆ. ಮಾರಮ್ಮನನ್ನು ಗೊಲ್ಲರು,ನಾಯಕರು, ಮಾದಿಗರು ಅತೀ ಭಕ್ತಿಯಿಂದ ಪೂಜಿಸುತ್ತಾರೆ. ಹಾಗೂ ಹಾಡಿ ಹೊಗಳುತ್ತಾರೆ. ಪ್ರಸ್ತುತ ಮಾರಮ್ಮನ ಕಾವ್ಯದಲ್ಲಿ ನಾಯಕರು ಕಂಡ ಮಾರಮ್ಮನ ಚಿತ್ರಣವಿದೆ.

ಕಾವ್ಯದಲ್ಲಿ ಮಾರಮ್ಮನ ಕುರಿತಂತೆ ಎರಡು ಪ್ರಮುಖ ಸಂಗತಿಗಳು ಕಾಣುತ್ತವೆ. ಒಂದು ಮಾರಮ್ಮನ ಶಕ್ತಿ ಸಾಧನೆ. ಮತ್ತೊಂದು ಭಕ್ತರ ಆಚರಣೆಗಳು, ಇವೆರಡೂ ಒಂದರೊಡನೊಂದು ಬೆರತು ಮೇಳೈಸಿವೆ. ಮಾರಿಯ ಶಕ್ತಿಯ ಸ್ವರೂಪ ಎಂಥದ್ದು ಎಂದು ಹೇಳುತ್ತಲೆ ಆ ಶಕ್ತಿ ಅಪಾಯಕಾರಿಯಾಗದಂತೆ ಮಾಡಬಹುದಾದ ಸಾಧ್ಯತೆಗಳನ್ನು ಕುರಿತು ಹೇಳುವುದು ಅತ್ಯಂತ ವಿಶಿಷ್ಟವಾದುದು. ಮಾರಮ್ಮ ಎಂಥವಳು ಎಂಬುದನ್ನು ಕಾವ್ಯ ಆರಂಭಕ್ಕೆ ಹೀಗೆ ಹೇಳುತ್ತದೆ.

"ಗಂಡ ಇಲ್ಲ ದೋಳ ಗಂಭೀರ ನೋಡಿರಿ
ಗಂಧಾದ ರಾಶಿ ಗಡಿ ಮುಂದೆ ಗೌರಸಂದ್ರ
ಗಂಡಿಲ್ಲದ ಪರಿಸಿ ನ್ಯರಿಸ್ಯಾಳೆ"

ಅಂದರೆ ಪುರಷ ಇಲ್ಲದೆಯೂ ತನ್ನ ಜೀವನ ಸಾಗಿಸುವ ಮಹಿಳೆಯೊಬ್ಬಳ ಸಾಹಸ ಇಲ್ಲಿ ಕಂಡು ಬರುತ್ತದೆ. ಕಾವ್ಯದಲ್ಲಿ ಕಂಡು ಬರುವ ಮಾರಿಯ ಚಿತ್ರಣ ಅತ್ಯಂತ ಶ್ರೀಮಂತವಾಗಿದೆ. ಪುರುಷ ಪೂಜಾರಿ ಮಾರಕ್ಕನನ್ನು ಕಂಚಿನ ಬಟ್ಟಲ್ಲಲ್ಲಿ ಮಿಂಚೆಣ್ಣೆ ಒಯ್ಕಂಡು ತಲೆಬಾಚುವ ಚಿತ್ರಣ ವಿಶಿಷ್ಟ ಅರ್ಥಗಳನ್ನು ಬಿಂಬಿಸುತ್ತದೆ.

ಬಹುತೇಕ ಜನಪದ ಮಹಾಕಾವ್ಯಗಳು ಪ್ರಚಲಿತವಿರುವ ಸಂಪ್ರದಾಯ ಆಚರಣೆಗಳ ಸಮರ್ಥನೆ ಮಾಡುವ ಪ್ರಧಾನ ಉದ್ದೇಶವಿರಿಸಿಕೊಂಡಿರುತ್ತದೆ. ಈ ದೃಷ್ಟಿಯಿಂದ 'ಮಾರಿ ಮುನಿಸಿಕೊಂಡರೆ ಮನುಷ್ಯರಿಗೆ ಅಪಾಯ.ಮಾರಿಯ ಮುಂದೆ ಯಾವುದೇ ತರಹದ ಜಂಭದ ತರಹದ ನಡಾವಳಿ ತೋರಿಸುವಂತಿಲ್ಲ. ತೋರಿದರೆ ಕಷ್ಟಗಳು ಆರಂಭ. ಆ ಕಷ್ಟಗಳನ್ನು ತಪ್ಪಿಸಲು ಅಮ್ಮನನ್ನು ಶಾಂತಿಪಡಿಸಬೇಕು. ಶಾಂತಿಪಡಿಸುವ ಮಾರ್ಗಗಳನ್ನು ಕಾವ್ಯ ಹೀಗೆ ಸೂಚಿಸುತ್ತದೆ. ಬೇವಿನಸೀರೆ ಉಡುವುದು, ಬಾಯಿಬೀಗ ಹಾಕುವುದು, ಕೋಣ ಬಲಿ ಕೊಡುವುದು. ಇನ್ನು ಮುಂತಾದ ಅಮ್ಮನನ್ನು

ಶಾಂತಿಪಡಿಸುವ ಮಾರ್ಗಗಳು. ಈಗಲೂ ಗೌರಸಂದ್ರದ ಮಾರಿಯ ಜಾತ್ರೆಯಲ್ಲಿ ಮೇಲೆ ತಿಳಿಸಿದ ಎಲ್ಲಾ ಆಚರಣೆಗಳು ಗಟ್ಟಿಯಾಗಿ ಆಚರಣೆಗೊಳ್ಳುವುದನ್ನು ಕಾಣಬಹುದಾಗಿದೆ.

ಇಷ್ಟಾದ ಮೇಲೆ ಕಾವ್ಯದ ಕೊನೆಯಲ್ಲಿ ಬರುವ ಕಥನದ ನಿರೂಪಣೆಯ ವಿಶಿಷ್ಟಾಂಶವನ್ನು ಗಮನಿಸಬೇಕು. ಮಾರಿಯನ್ನು ಹಾಡಿಹೊಗಳಿದ ನಾಯಕಿ ಕೊನೆಗೆ ಹೀಗೆ ಹೇಳುತ್ತಾಳೆ.

"ಅಕ್ಕಾ ನಿಮ್ಮ ಆಡೇವಿ ಅಕ್ಕಾ ನಿಮ್ಮ ಪಾಡೇವಿ
ಅಕ್ಕ ನಿಮ್ಮ ನಿದ್ರಿ ಕಳದೇವಿ !ಮಾರಕ್ಕ
ಪಟ್ಟೆ ಮಂಚದಲಿ ಪವಡೀಸೆ!"

ಮೇಲಿನ ಮಾತುಗಳು ಕಥನಗಾರ್ತಿಯ ಸಮುದಾಯದ ಲೋಕದೃಷ್ಟಿಯನ್ನು ಬಿಂಬಿಸುತ್ತದೆ. ಅಮ್ಮನನ್ನು ಹಾಡಿ ಹೊಗಳುವುದರ ಮೂಲಕ ತಮ್ಮ ಸಮಸ್ಯೆಗಳಿಗೆ ಪರಿಹಾರ ಬೇಡುವ ಗಾಯಕಿ ಕೊನೆಗೆ ನಮಗಾಗಿ 'ಅಮ್ಮ' ನ ನಿದ್ರೆ ಹಾಳಾಯಿತೆಂದು ಪರಿತಪಿಸುವದು ಅತ್ಯಂತ ವಿಶಿಷ್ಟವಾದುದು.

೨. ಕಂಪಳರಂಗನ ಕಾವ್ಯ : ವೈಷ್ಣವ ಸಂಪ್ರದಾಯದ ಛಾಯೆ

ಮ್ಯಾಸಬೇಡರು ಆರಾಧಿಸುವ ದೈವಗಳಲ್ಲಿ ಕಂಪಳರಂಗ ಪ್ರಮುಖ. ವಿಷ್ಣುವಿನ ಪ್ರತಿರೂಪವಾಗಿ ಕಂಪಳರಂಗ ಕಂಡುಬರುತ್ತಾನೆ. ರಂಗ ಎಂಬುದೇ ಆತನ ನಿಜನಾಮ. ಈ ನಿಜನಾಮಕ್ಕೆ ಕಂಪಳ ಸೇರಿ ಕಂಪಳರಂಗ ಎಂದಾಗಿದೆ. 'ಕಂಪಳ' ಎಂದರೆ 'ಗುಂಪು' ಎಂಬರ್ಥ ಹೊರಡುತ್ತದೆ. ಬೇಡರು ಮೂಲತಃ ವಲಸೆಗಾರರಾಗಿದ್ದು, ಗುಂಪು ಗುಂಪಾಗಿ ಅಲೆಮಾರಿ ಜೀವನ ನಡೆಸುತ್ತಿದ್ದರು. ಅಂಥ ಗುಂಪುಗಳನ್ನು ಬೇಡಗಂಪಳ ಎಂಬುದಾಗಿಯೂ ಕರೆಯಲಾಗುತ್ತಿತ್ತು. ಈಗಲೂ ಬೇಡಗಂಪಳ ಎಂಬ ಹೆಸರು ಪ್ರಚಲಿತದಲ್ಲಿದೆ. ಹೀಗೆ ಕಂಪಳದವರು ರಂಗನನ್ನು ಅಂದರೆ ವಿಷ್ಣುವನ್ನು 'ತಮ್ಮ'ವನನ್ನಾಗಿ ಮಾಡಿಕೊಂಡಿರುವುದು ಸ್ಪಷ್ಟ. ಮಧ್ಯಕಾಲಿನ ಬೇಡರ ಬದುಕಿನಲ್ಲಿ ಶ್ರೀವೈಷ್ಣವ ಧರ್ಮ ಪ್ರವೇಶ ಪಡೆದ ಸಂಗತಿ ವಿದ್ವಾಂಸರ ಅಧ್ಯಯನಗಳಿಂದ ಸ್ಪಷ್ಟವಾಗಿದೆ. ಈ ಸಂದರ್ಭಕ್ಕೆ ರಂಗ ಬೇಡಗಂಪಳದ ಜೊತೆಗೆ ಸಮೀಕರಣಗೊಂಡು ಕಂಪಳರಂಗನಾಗಿರುವುದು ಸ್ಪಷ್ಟ.

ಹೀಗೆ ವೈಷ್ಣವ ಧರ್ಮದ ಪ್ರಭಾವದಿಂದ ಪ್ರವೇಶ ಪಡೆದ ರಂಗ ಮುಖ್ಯವಾಹಿನಿಯ ವಿಷ್ಣುವಿನಂತಲ್ಲದೆ ಸಂಪೂರ್ಣ ಭಿನ್ನ. ಇಲ್ಲಿ ರಂಗನಿಗೆ ಮೂಲದ ಯಾವ ಅನನ್ಯತೆಗಳು ಉಳಿದಿಲ್ಲ. ಬದಲಿಗೆ ಪರಿವರ್ತನೆ ಕಂಡಿವೆ. ಬೇಡರ ಕಂಪಳರಂಗ ಸಂಪೂರ್ಣ ಬುಡಕಟ್ಟು ವೀರನಾಗಿ ಪರಿವರ್ತನೆ ಹೊಂದಿದ್ದಾನೆ. ಪ್ರಸ್ತುತ ಕಾವ್ಯ ಅಂತ ಕಂಪಳರಂಗ ಲಕ್ಷ್ಮಿಯನ್ನು (ಲಸುಮವ್ವ) ವರಿಸುವ ಸಂದರ್ಭವನ್ನು ವರ್ಣಿಸುತ್ತದೆ. ಜೊತೆಗೆ ಕಂಪಳ ರಂಗನ ವಿವಿಧ ಸಾಧನೆಗಳನ್ನು ಶ್ಲಾಘಿಸುತ್ತದೆ.

೩. ಬೋರದೇವರ ಕಾವ್ಯ : ಸಿದ್ದರ ಮಿಂಡ ಬೋರಯ್ಯ

ಬೋರದೇವರು ನಾಯ್ಕನಹಟ್ಟಿಯ ಸಮೀಪದ ಕಂದಾಪುರದಲ್ಲಿ ನೆಲೆ ನಿಂತಿರುವ ಬೇಡರ ಅತೀ ಮುಖ್ಯ ದೈವ. ಮುಖ್ಯ ದೇವರ ಗುಡಿ ಕುದಾಪುರದಲ್ಲಿ ಇದ್ದರೂ, ಉಳಿದಂತೆ ಬೇಡರ ಪ್ರತಿಯೊಂದು ಹಟ್ಟಿಯಲ್ಲಿ ಕಿರುಗುಡಿಗಳಿಗೆ ಭಕ್ತರ ಸಮೂಹಕ್ಕೆ ಕೊರತೆಯಿಲ್ಲವೆಂದೇ ಹೇಳಬೇಕಾಗುತ್ತದೆ. ಭಾನುವಾರ ಪೂಜೆಗೊಳ್ಳುವ ಈ ದೈವಕ್ಕೆ ಮಾಂಸಾಹಾರವೇ ಶ್ರೇಷ್ಠ. ಈ ಬೋರಯ್ಯನ ಸಿದ್ದಿ ಸಾಧನೆ ಎಂಥದ್ದು, ಮೂಲತಃ ಬೋರಯ್ಯ ಯಾರು ಎಂಬುದರ ಬಗ್ಗೆ ಕಾವ್ಯ ಗಮನಹರಿಸುತ್ತದೆ.

ಇಡೀ ಕಾವ್ಯವನ್ನು ಅವಲೋಕಿಸಿದರೆ ಮೂರು ಮುಖ್ಯ ಅಂಶಗಳು ಸಿಗುತ್ತವೆ. ಒಂದು ಜೋಗಿಗಳು ಹಾಗೂ ಸಿದ್ದರಿಗೆ ಬುದ್ಧಿ ಕಲಿಸುವವ ಈ ಬೋರಯ್ಯ, ಅದನ್ನು ಕಾವ್ಯ ಜೋಗೇರ, ಸಿದ್ದರ ಮಿಂಡ ಎಂಬುದಾಗಿ ತಿಳಿಸುತ್ತದೆ. ಈ ಅಂಶ ಅನೇಕ ದೃಷ್ಟಿಗಳಿಂದ ಅತ್ಯಂತ ಮಹತ್ವವೆನಿಸುತ್ತದೆ. ಯಾಕಾಗಿ ಸಿದ್ಧರು, ಜೋಗಿಗಳು ಬೋರಯ್ಯನಿಗೆ ಆ ಮೂಲಕ ಬೇಡ ಕಂಪಳಕ್ಕೆ ಶತ್ರುಗಳಾಗಿದ್ದರು ಎಂಬ ಸಹಜ ಪ್ರಶ್ನೆ ಏಳುತ್ತದೆ. ಅದನ್ನು ಕುರಿತು ಇನ್ನಷ್ಟು ಗಂಭೀರವಾಗಿ ಅಲೋಚಿಸುವ ತುರ್ತು ಇದೆ. ಮತ್ತೊಂದು ಬೋರಯ್ಯನ ವಿಚಿತ್ರ ಮನಸ್ಸಿನ ಕುರಿತಂತೆಯೂ ಕಾವ್ಯ ಮಾತನಾಡುತ್ತದೆ. ಆ ಭಾಗದ ಒಂದು ಪದ್ಯ ಹೀಗಿದೆ.

"ಹಳ್ಳಾದಾಗೆ ಒಬ್ಬ ಕಳ್ಳ ಕುಂತ್ಕೈದಾನೇ
ವಳ್ಳೊಳ್ಳೇ ಹೆಣ್ಣೇ ಬರಾದೋರೆ! ಬೋರಾವಯ್ಯ
ಕಳ್ಳಾ ಕಂಡಾರೆ ಬಿಡಾ ನಿಮ್ಮ"

ಇಲ್ಲಿಯ ಧ್ವನಿ ಶ್ಲೇಷಾರ್ಥವನ್ನು ಕೊಡುತ್ತದೆ. ಹೆಣ್ಣುಗಳಿಗೆ ಬೆನ್ನುಬಿದ್ದ ಕಳ್ಳರನ್ನು ಸಂಹರಿಸುವ ಕ್ರಮ ಒಂದಾದರೆ, ತಾನೇ ಕಳ್ಳನಾಗುವ ಪರಿ ಮತ್ತೊಂದು. ಇವೆರಡು ಸಂಗತಿಗಳ ನಂತರ ಮುಖ್ಯವಾಗುವ ಸಂಗತಿ ಎಂದರೆ ಬೋರಯ್ಯನನ್ನು ಕುರಿತು ನಮಗೆ ಯಾವುದೇ ಕಷ್ಟ ಕೋಟಲೆ ಬರದಂತೆ ನೋಡಿಕೋ ಎನ್ನುವ ಭಕ್ತರ ಹಂಬಲ ದೊಡ್ಡ ದನಿಯಲ್ಲಿ ಕಾಣಿಸುತ್ತದೆ.

೪. ಜಗಲೂರು ಪಾಪಯ್ಯ : ಸಾಂಸ್ಕೃತಿಕ ಮನಿಗಾರನ ಕಥನ

ಜಗಳೂರು ಪಾಪನಾಯಕ ಮ್ಯಾಸಬೇಡರ ಒಬ್ಬ ಸಾಂಸ್ಕೃತಿಕ ವೀರ. ತನ್ನ ಸಮುದಾಯದ ಏಳಿಗೆಗೆ ಶ್ರಮಿಸಿ ಕಾಲವಾಗಿ, ಸಮುದಾಯಕ್ಕೆ ದೈವನಾದವನು. ಈತನನ್ನು ಸಮುದಾಯ ಸಾಂಸ್ಕೃತಿಕ ಚೈತನ್ಯವನ್ನಾಗಿಸಿಕೊಂಡಿರುವುದನ್ನು ಕಾಣಬಹುದು.

ಕಾವ್ಯದ ನಿರೂಪಕಿ ಜಗಳೂರು ಪಾಪನಾಯಕನ ವ್ಯಕ್ತಿ ಚಿತ್ರಣವನ್ನು ನೀಡಿದ್ದು, ಅದು ಹೀಗಿದೆ. ಜಗಲೂರು ಎಂಬ ಮುಗಿಲ ಮುತ್ತಿನ ಕೋಟೆಯಲ್ಲಿ ಇರುವ ಮನಿಗಾರ. ನೆಲಮಾಳಿಗೆಯಲ್ಲಿ ವಾಸಿಸುವ ಈತ ಒಡದು ಮೂಡಿದವರು (ಒಡಮೂಡುವುದು ಎಂದರೆ ಮನುಷ್ಯ ಸ್ಪರ್ಶವಿಲ್ಲದೆ ಭೂಮಿಯಿಂದ

ಸ್ವಯಂಭುವಾಗಿ ಜನಿಸುವುದು. ಈ ಕಲ್ಪನೆ ಶೈವ ಪಂಥಗಳಲ್ಲಿ ಹೆಚ್ಚು ಚಾಲ್ತಿಯಲ್ಲಿದ್ದು ಅಲ್ಲಿ ಲಿಂಗಗಳು ಒಡಮೂಡಿರುವ ವಿವರಗಳಿವೆ. ಇದೇ ತತ್ವನ್ನು ತಮ್ಮ ಸಾಂಸ್ಕೃತಿಕ ನಾಯಕನಿಗೆ ಅನ್ವಯಿಸಿರುವುದನ್ನು ಕಾಣಬಹುದು). ಬಿಲ್ಲಿಡಿದು ಬ್ಯಾಟೆ ಆಡುವವನು. ಈ ಬಿಲ್ಲು ವಿದ್ಯೆಯಲ್ಲಿ ಈತನೆಷ್ಟು ಸಮರ್ಥನೆಂದರೆ, ಮತ್ತೆ ನಿರೂಪಕಿಯೇ ಹೇಳುವ ಹಾಗೆ ಗುಲಗಂಜಿಗೆ ಗುರಿ ಹಿಡಿಯಬಲ್ಲವನು. ಇಷ್ಟೆಲ್ಲದರ ಜೊತೆಗೆ ಈಗ ದೈವವಾಗಿ ತನ್ನ ಭಕ್ತರಿಗೆ ಬೇಡಿದ ವರವನ್ನು ಕೊಡುವವನು. ಇಂಥ ಅಚಲ ನಂಬಿಕೆಯಿರುವ ನಿರೂಪಕಿ ತನ್ನ ಮಗನನ್ನು ಕುರಿತಂತೆ ಬಹುದೊಡ್ಡ ಬೇಡಿಕೆಯೊಂದನ್ನು ಬೇಡಿದ್ದಾಳೆ. ಆ ಬೇಡಿಕೆ ಯಾವುದೆಂದರೆ: ಆಕೆಯ ಮಗ ದೊರೆಯಾಗಬೇಕು. ಈ ಬೇಡಿಕೆ ಅತ್ಯಂತ ಮಾರ್ಮಿಕ ಹಾಗೂ ವಾಸ್ತವವಾಗಿದೆ. ದೊರೆತನ ಎಂಬುದು ಮ್ಯಾಸಬೇಡರ ಸಮುದಾಯದಲ್ಲಿ ದೇಶವಾಳುವ ರಾಜನಲ್ಲ. ಅಧಿಕಾರವಲ್ಲ, ಬದಲಿಗೆ ಸಮುದಾಯವನ್ನು ನೈತಿಕ ಪ್ರಜ್ಞೆಯೊಂದಿಗೆ ಮುನ್ನಡೆಸುವ ಜವಾಬ್ದಾರಿ. ಈ ಸಮುದಾಯದಲ್ಲಿ ಈಗಲೂ 'ದೊರೆ' ವ್ಯವಸ್ಥೆಯಿದೆ. ಈ ದೊರೆಗೆ ಈಗಿನ ಪ್ರಜಾತಾಂತ್ರಿಕ ವ್ಯವಸ್ಥೆಯ ರಾಜನಂತೆ ಆಡಳಿತದ ಅಧಿಕಾರವಷ್ಟೇ ಅಲ್ಲ. ಕಾನೂನು, ಆಡಳಿತ, ಧರ್ಮ ಈ ಎಲ್ಲಾ ಅಂಶಗಳಲ್ಲೂ ತುತ್ತತುದಿಯ ಸ್ಥಾನ. ಇಂಥ ದೊರೆಯನ್ನು ಕುಲಸಾವಿರದವರು ಆಯ್ಕೆ ಮಾಡುವ ಸಂಪ್ರದಾಯವಿದೆ. ಇಲ್ಲಿಯ ನಿರೂಪಕಿ ಇಂಥ ಮಹತ್ವದ ಪಟ್ಟ ನನ್ನ ಮಗನಿಗೆ ದೊರೆತರೆ ಬೆಳ್ಳಿಯ ಹೊಂಬಾಳೆ ಮಾಡಿಸಿಕೊಡುವುದಾಗಿ ಹರಕೆ ಹೊತ್ತಿದ್ದಾಳೆ.

೫. ಗಾದ್ರಿಪಾಲನಾಯಕ : ಬುಡಕಟ್ಟೊಂದರ ಸಾಂಸ್ಕೃತಿಕ ಕನಸು.

ಕರ್ನಾಟಕ ಜನಪದ ಮಹಾಕಾವ್ಯಗಳಲ್ಲಿ ಈಗಾಗಲೇ ತನ್ನ ಸ್ಥಾನವನ್ನು ಗುರುತಿಸಿಕೊಂಡಿರುವ ಮಹಾಕಾವ್ಯ ಗಾದ್ರಿಪಾಲನಾಯಕ. ಗಂಜಿಗಟ್ಟಿಯಲ್ಲಿ ಈಗಲೂ ಗಾದ್ರಿಪಾಲನಾಯಕನ ಸಮಾಧಿ ಇದ್ದು, ಅಲ್ಲಿ ಹತ್ತು ಹಲವು ಆಚರಣೆಗಳು ಜೀವಂತವಾಗಿವೆ. ಅಷ್ಟೇ ಅಲ್ಲ ಚಿತ್ರದುರ್ಗ ಜಿಲ್ಲೆಯ ಹಲವಾರು ಹಟ್ಟಿಗಳಲ್ಲಿ ಗಾದ್ರಿಪಾಲನಾಯಕ ಪೂಜಾಸ್ಥಳಗಳು, ಆಚರಣಾ ಸಂಪ್ರದಾಯಗಳು ಕಂಡುಬರುತ್ತವೆ.

ಬೇಡರು ಪಶುಪಾಲನೆಯ ವೃತ್ತಿಯಲ್ಲಿರುವಾಗ ಅನುಭವಿಸಿದ ಕಾಡಿನ ಕಷ್ಟಗಳಿಗೆ ಕನಸಿನ ರೂಪದ ಪರಿಹಾರಗಳನ್ನು ಕಂಡುಕೊಳ್ಳುವ ಪ್ರಯತ್ನವಾಗಿ ಪ್ರಸ್ತುತ ಮಹಾಕಾವ್ಯ ಕಂಡುಬರುತ್ತದೆ.

ಮುಖ್ಯವಾಗಿ ಪ್ರಸ್ತುತ ಮಹಾಕಾವ್ಯವು ಚಿತ್ರಿಸುವ ಹಾಗೆ ಗಾದ್ರಿಪಾಲನಾಯಕ ಪಶುಪಾಲನೆ ಮಾಡುವಾಗ ತನ್ನ ಪಶುಗಳನ್ನು ರಕ್ಷಿಸುವ ಸಲುವಾಗಿ ಕಾಡಿನ ಹುಲಿಯೊಡನೆ ಒಪ್ಪಂದ ಮಾಡಿಕೊಳ್ಳುತ್ತಾನೆ. ತಮ್ಮ ಸಹಜ ಭಾವನೆಗಳನ್ನು ಮೀರಿ ಒಬ್ಬರನ್ನು ಒಬ್ಬರು ಸಹಕರಿಸಿ ಬಾಳುವುದೇ ಒಪ್ಪಂದದ ಆಶಯ. ಆದರೆ ಕೊನೆಗೆ ಹುಲಿಯ ಮರಿಗಳನ್ನು ಗಾದ್ರಿಪಾಲನಾಯಕ ಅವರ ತಮ್ಮ

ಚಿನ್ನಪಾಲನಾಯಕ ಮೊದಲಾದವರು ಕೊಲ್ಲುತ್ತಾರೆ. ಇದರಿಂದ ಹುಲಿ ಕುಪಿತಗೊಂಡು ಗಾದ್ರಿಪಾಲನಾಯಕನನ್ನು ಕೊಲ್ಲಲು ಹೊರಡುತ್ತದೆ. ಗಾದ್ರಿಪಾಲನಾಯಕ ಗಂಜಿಗಟ್ಟಿ ಮಾರ್ಗವಾಗಿ ತಪ್ಪಿಸಿಕೊಂಡು ಹೋಗುತ್ತಾನೆ. ಎಲ್ಲೆಗೆ ಹೋದರೂ ಹುಲಿ ಬಿಡುವುದಿಲ್ಲ. ಆಗ ಗಾದ್ರಿಪಾಲನಾಯಕ ತನ್ನ ಜನ್ನಿಗೆ ಆಕಳಿಂದ ಹಾಲು ಕರಿದು ಹೊಳೆಹರಿಸಿ ತನ್ನನ್ನು ರಕ್ಷಿಸಿಕೊಳ್ಳುತ್ತಾನೆ. ಆದರೂ ಕೊನೆಗೆ ಹುಲಿ ಗಾದ್ರಿಪಾಲನಾಯಕರ ಮಧ್ಯೆ ಹೋರಾಟ ನಡೆದು ಹುಲಿ ಹಾಗೂ ಗಾದ್ರಿಪಾಲನಾಯಕರಿಬ್ಬರೂ ಸಾಯುತ್ತಾರೆ. ಇದಿಷ್ಟೂ ಕಥೆಯನ್ನು ಮಹಾಕಾವ್ಯ ಅತ್ಯಂತ ಸ್ವಾರಸ್ಯಕರವಾಗಿ ಚಿತ್ರಿಸುತ್ತದೆ.

ಒಟ್ಟಾರೆ ನಾಯಕರ / ಬೇಡರ ಜನಪದ ಮಹಾಕಾವ್ಯಗಳ ಪರಿಚಯವಿಷ್ಟು. ಮೇಲಿನ ಸಮೀಕ್ಷೆ ಅತ್ಯಂತ ಮೇಲು ನೋಟದ್ದು ಮಾತ್ರ. ಆಳವಾದ ಒಳನೋಟಗಳ ಹಿನ್ನೆಲೆಯಲ್ಲಿ ವಿಶ್ಲೇಷಣೆ ಇನ್ನೂ ಆಗಬೇಕಿದೆ. ಅದನ್ನು ವಿದ್ವಾಂಸರು ಸಮುದಾಯದ ಸಾಂಸ್ಕೃತಿಕ ತಿಳುವಳಿಕೆಯ ಹಿನ್ನೆಲೆಯಲ್ಲಿ ವಿಶ್ಲೇಷಿಸಬೇಕಿದೆ. ಮಹಾಕಾವ್ಯ ಹೇಳುವ ಸಂಗತಿಗಳು ಅಪೂರ್ಣವಾಗಿರುವುದು ಸ್ಪಷ್ಟವಾಗಿ ಕಂಡು ಬರುತ್ತದೆ. ಹಾಗಾಗಿ ಅಂಥ ಅಪೂರ್ಣವಾಗಿರುವ ಕಾವ್ಯಗಳಿಗೆ ಪೂರ್ಣತೆಯನ್ನು ಒದಗಿಸಿಕೊಡುವ ಕೆಲಸವೂ ವಿಶ್ಲೇಷಣೆಯ ಜೊತೆ ಜೊತೆಗೆ ನಡೆಯಬೇಕಿದೆ.

# ಮ್ಯಾಸನಾಯಕರ ದೇವರ ಪದಗಳು

ಕೋಲಾಟದ ಕಲೆ ಭಾರತದಾದ್ಯಂತ ಪ್ರಚಲಿತವಿರುವ ಕಲೆಯಾಗಿದೆ. ಇದು ಪ್ರದೇಶ ಜನಾಂಗ, ಜಾತಿ, ಲಿಂಗ ಇಂತಹ ಯಾವುದೇ ಒಂದು ವಲಯಕ್ಕೆ ಸೀಮಿತವಾಗದೇ ಸರ್ವವ್ಯಾಪಿ ಕಲೆಯೆನಿಸಿದೆ. ಹೀಗೆ ವ್ಯಾಪಕವಾದ ಭೂಪ್ರದೇಶದಲ್ಲಿ ವಿವಿಧ ಜನಸಮುದಾಯಗಳ ನಡುವೆ ಪ್ರಚಲಿತವಿರುವ ಈ ಕಲೆಗೆ ಅಷ್ಟೇ ವೈವಿಧ್ಯಮಯತೆ ಹಾಗೂ ವೈಶಿಷ್ಟ್ಯತೆಗಳು ಇರುವುದು ಕಂಡುಬರುತ್ತದೆ. ಕೋಲಾಟ ಆಟವೂ ಹೌದು ನೃತ್ಯವೂ ಹೌದು ಎಂಬುದು ಅತ್ಯಂತ ಕುತೂಹಲಕಾರಿಯಾದುದು. ಈ ಕಲೆಯಲ್ಲಿ ಸಾಹಿತ್ಯ ಮತ್ತು ನೃತ್ಯಗಳ ಸಾಮರಸ್ಯವನ್ನು ಕಾಣುತ್ತೇವೆ. ಕೋಲಾಟ ಕಲೆಯ ಬೆಳವಣಿಗೆಯ ಚರಿತ್ರೆಯಲ್ಲಿ ಕಂಡುಬರುವ ಸ್ವಾರಸ್ಯದ ಸಂಗತಿಗಳೆಂದರೆ ಪ್ರಾಚೀನ ಕಲೆಯಾದ ಕೋಲಾಟವು ಮೊದಲು ರಾಜಾಸ್ಥಾನಗಳಿಗೆ ಮಾತ್ರ ಸೀಮಿತವಾಗಿದ್ದು ನಂತರ ಜನಸಾಮಾನ್ಯರ ಕಲೆಯಾಗಿ ಎಲ್ಲರನ್ನೂ ರಂಜಿಸುವ, ಅವರ ಬುದ್ಧಿವಂತಿಕೆಯನ್ನು ಪ್ರದರ್ಶಿಸುವ ಅವಕಾಶವಾಗಿಯೂ ಬೆಳೆಯಿತು. ಹಾಗೆಯೇ ಆರಂಭಕ್ಕೆ ಪುರುಷರು ಮಾತ್ರ ಭಾಗವಹಿಸುತ್ತಿದ್ದ ಈ ಕಲೆ ಕಾಲ ಬದಲಾದಂತೆ ಸ್ತ್ರೀಯರಿಗೂ ಪ್ರವೇಶಾವಕಾಶ ಕಲ್ಪಿಸಿದೆ. ಅಷ್ಟೇ ಅಲ್ಲ ಮೊದಲು ಕೇವಲ ಮನೋರಂಜನೆಯ ಪ್ರಧಾನ ಉದ್ದೇಶ ಹೊಂದಿ ಲೌಕಿಕ ಕಲೆ ಎನಿಸಿದ್ದು ಮುಂದುವರಿದಂತೆ ಧಾರ್ಮಿಕ ಆಯಾಮವನ್ನು ಪಡೆದುಕೊಂಡಿದೆ. ವಿಶೇಷವಾಗಿ ವೈಷ್ಣವ ಧರ್ಮಕ್ಕೂ ಕೋಲಾಟಕ್ಕೂ ನಿಕಟ ಸಂಬಂಧವಿರುವುದನ್ನು

ಗುರುತಿಸಬಹುದು. ಗೋಪಿಕಾ ಸ್ತ್ರೀಯರು ಮತ್ತು ಶ್ರೀಕೃಷ್ಣನ ಮಧ್ಯೆದ ಕೋಲಾಟ ಧರ್ಮ ಪ್ರಚಾರದ ಉದ್ದೇಶಕ್ಕೆ ತಿರುಗಿರುವುದನ್ನು ಇಂದು ಕಾಣುತ್ತೇವೆ. ಮುಖ್ಯವಾಗಿ ಕೋಲಾಟದ ಪದ್ಯ ಸಾಹಿತ್ಯ ವೈಷ್ಣವ ಧರ್ಮ ಪ್ರಚಾರದ ಮಾಧ್ಯಮವಾಗಿರುವುದು ಸ್ಪಷ್ಟವಾಗಿ ಕಂಡು ಬರುತ್ತದೆ. ಇಂತಹ ಹಲವು ವೈಶಿಷ್ಟ್ಯತೆಗಳನ್ನೊಳಗೊಂಡ ಈ ಕಲೆ ಭಾರತದಾದ್ಯಂತ ನೂರಾರು ಬಗೆಗಳಲ್ಲಿ ಪ್ರಚಲಿತವಿರುವುದನ್ನು ಗುರುತಿಸಲಾಗಿದೆ. ಕರ್ನಾಟಕದಲ್ಲಿಯೂ ದೇಶದ ಯಾವುದೇ ರಾಜ್ಯದಲ್ಲಿ ಇಲ್ಲದಿರುವಷ್ಟು ಕೋಲಾಟಗಳ ಸಂಖ್ಯೆ ಮತ್ತು ವೈವಿಧ್ಯತೆಯನ್ನು ಕಾಣಬಹುದು. ಸದ್ಯಕ್ಕೆ ಕರ್ನಾಟಕದ ಬಹುತೇಕ ಜಿಲ್ಲೆಗಳಲ್ಲಿ ಕೋಲಾಟ ಪ್ರಚಲಿತವಿದ್ದು ಇಲ್ಲಿ ಬಳಕೆಗೊಳ್ಳುತ್ತಿರುವ ಸುಮಾರು ೧೪೦ ಕ್ಕೂ ಹೆಚ್ಚಿನ ಕೋಲಾಟದ ವಿಧ"ಗಳನ್ನು ಗುರುತಿಸಲಾಗಿದೆ.

ಚಿತ್ರದುರ್ಗ ಜಿಲ್ಲೆ, ಚಳ್ಳಕೆರೆ ತಾಲ್ಲೂಕು ನಲಗೇತನಹಟ್ಟಿ ಎಂಬ ಮ್ಯಾಸ ಬೇಡ ಬುಡಕಟ್ಟಿನ ಒಂದು ಹಟ್ಟಿ. ಇಲ್ಲಿಯ ಜನ ತೆಲಗು ಮತ್ತು ಕನ್ನಡ ಭಾಷೆಯಲ್ಲಿ ಮಾತನಾಡುತ್ತಾರೆ. ಇವರು ಚನ್ನಕೇಶವ ಮತ್ತು ತಿಮ್ಮಪ್ಪನ ದೈವದ ಒಕ್ಕಲು. ಈ ಹಟ್ಟಿಯೊಳಗೆ ಮಕ್ಕಳು, ವಯಸ್ಕರು, ಗಂಡಸರು, ಹೆಂಗಸರು ಇಂಥ ಯಾವುದೇ ಬೇಧವಿಲ್ಲದೆ ಕೋಲಾಟವಾಡುತ್ತಾರೆ. ಇಲ್ಲಿ ಕೋಲಾಟ ಬರೀ ಮನೋರಂಜನೆಯಾಗಿರ"ದೇ ಧಾರ್ಮಿಕ ಆಯಾಮದೊಳಗೂ ಬಳಕೆಯಾಗುತ್ತಿರುವುದು ಗಮನಾರ್ಹ. ಹಬ್ಬದ ದಿನಗಳಲ್ಲಿ ವಿಶೇಷ ಸಮವಸ್ತ್ರಗ"ಳನ್ನು ಧರಸಿ ದೇವರಗುಡಿಯ ಮುಂದೆ ಆಡುವ ಕೋಲಾಟ ಮನೋರಂಜನೆಯಾದರೆ, ಅದೇ ದೇವರ ಗುಡಿಯ ಮುಂದೆ ಮಳೆ ಬರಲೆಂದು ದೇವರನ್ನು ಭಕ್ತಿಯಿಂದ ಧ್ಯಾನಿಸಿ ಆಡುವ ಕೋಲಾಟವು ಧಾರ್ಮಿಕವೆನಿಸುತ್ತದೆ. ಇಂಥ ವಿವಿಧ ರೀತಿಯ ಕಾರ್ಯಾಕಾರಣಗಳೊಂದಿಗೆ ಪ್ರಚಲಿತ ವಿರುವ ಇಲ್ಲಿನ ಕೋಲಾಟ ಒಂದು ಊರಿನಲ್ಲಿ ಬಳಕೆಗೊಳ್ಳುತ್ತದೆ ಆದರೂ ಈ ಊರಿಗೆ ಮಾತ್ರವೇ ಸೀಮಿತವಲ್ಲ. ಮಧ್ಯ ಕರ್ನಾಟಕದ ಅನೇಕ ಊರುಗಳಲ್ಲಿ ಬಳಕೆಯಲ್ಲಿವೆ. ಆದರೆ ಇಲ್ಲಿಯ ಸ್ವರೂಪ ಮಾತ್ರ ವಿಶಿಷ್ಟ. ಸ್ತುತಿ ಪದಗಳು, ತಾಳುಪುಕಡ್ಡಿ ಪದಗಳು, ಹೆಜ್ಜೆಕೋಲು ಪದಗಳು, ವಿಶಿಷ್ಟ ಕೋಲಾಟದ ಪದಗಳು, ಮುತ್ತಯ್ಯಗಳ ಕೋಲಾಟದ ಪದಗಳು, ಕೊಂಡಾಡುವ ಪದಗಳು-ಭಾಗ-೧,ಭಾಗ-೨, ಮಂಗಳಾರತಿ ಪದಗಳು ಇವೇ ಆ ಎಂಟು ವಿಭಾಗಗಳು. ಈ ಭೂ ಪ್ರದೇಶದ ಕೋಲಾಟದ ಸಾಮಾನ್ಯ ಸ್ವರೂಪವೆಂದರೆ ಪ್ರತೀ ಕೋಲಾಟದ ತಂಡದಲ್ಲಿ ಹೊರಗಿನ ಗುಂಪು ಒಳಗಿನ ಗುಂಪು ಎಂಬ ಎರಡು ಗುಂಪುಗಳು ಇರುತ್ತವೆ. ಇವರಡು ಗುಂಪುಗಳು ಕೋಲುಗಳನ್ನು ಬಡಿಯುತ್ತಾ ಮಂಡಲಾಕಾರದಲ್ಲಿ ನೃತ್ಯಮಾಡುತ್ತಾರೆ. ನೃತ್ಯದ ಜೊತೆಗೆ ಸಾಹಿತ್ಯವನ್ನು ಹಾಡುತ್ತಾರೆ. ಕೋಲುಗಳನ್ನು ಪಡೆಯುವ ಕ್ರಮದಲ್ಲಿ ತಾಳುಪುಕಡ್ಡಿ, ಎತ್ತು ಕಡ್ಡಿ, ಗೀರ್ ಕಡ್ಡಿ, ಹೆಜ್ಜೆಕೋಲು ಕಡ್ಡಿ, ಮುತ್ತಯ್ಯಗಳ ಕೋಲು ಕಡ್ಡಿ ಎನ್ನುವ ಕ್ರಮಗಳಿವೆ. ಪ್ರತೀ ಕೋಲಾಟದ ನೃತ್ಯವು ತಾಳಪುಕಡ್ಡಿ ಹಾಡುಗಳಿಂದ ಆರಂಭಗೊಳ್ಳುತ್ತದೆ. ತಾಳುಪುಕಡ್ಡಿ ಕೋಲಾಟದಲ್ಲಿ ನಿಧಾನ ಗತಿಯ ನೃತ್ಯ ಹಾಗೂ ಹಾಡು ಪ್ರಧಾನವಾಗಿರುತ್ತದೆ. ಇದರ ನಂತರ ನೃತ್ಯ ಹಾಗೂ ಹಾಡುಗಳು ವೇಗ ಪಡೆದು ತೀವ್ರಗತಿಯ ಸ್ಥಿತಿಯನ್ನು ತಲುಪುತ್ತವೆ. ಹಾಗೆಯೇ ವಿವಿಧ ರೀತಿಯ ಕೋಲು ಕ್ರಮಗಳು ಬಳಕೆಗೊಳ್ಳುತ್ತವೆ. ಇಲ್ಲಿ ಕೋಲಾಟದಲ್ಲಿ ೨೯ ಬಗೆಯ ವಿವಿಧ ನೃತ್ಯಗಳು ಮತ್ತು ಐದು ರೀತಿಯ ಕಡ್ಡಿ

ಬಡಿಯುವ ಕ್ರಮಗಳು ಇವೆ. ಕೊಂಡಾಡುವ ಪದಗಳಲ್ಲಿ ಮಾತ್ರ ನೃತ್ಯ ಹಾಗೂ ಕಡ್ಡಿ ಬಡಿತಗಳಿರದೆ ಒಳ ಹೊರ ಗುಂಪುಗಳು ಎದುರು ಬದುರಾಗಿ ನಿಂತು ಪರಸ್ಪರ ಪ್ರಶ್ನೋತ್ತರ ರೂಪದಲ್ಲಿ ಕೇವಲ ಹಾಡುಗಳನ್ನು ಮಾತ್ರ ಹಾಡುವುದುಂಟು.

ಕೋಲಾಟದ ಕೊನೆಗೆ ಒಳಗಿನಗುಂಪು ಮತ್ತು ಹೊರಗಿನ ಗುಂಪು ಎದುರು ಬದರಾಗಿ ನಿಂತು ಒಂದು ಗುಂಪು ಒಗಟಿನ ರೂಪದಲ್ಲಿ ಮ್ಯಾಸ ನಾಯಕರ ದೈವವೊಂದರ ವರ್ಣನೆಯಿರುವ ಪದವನ್ನು ಹಾಡಿದರೆ ಮತ್ತೊಂದು ಗುಂಪು ಆ ಹಾಡು ವರ್ಣಿಸುತ್ತಿರುವ ದೇವರ ಹೆಸರನ್ನು ಹೇಳಬೇಕು. ಹಾಗೇಯೇ ಹೆಸರು ಹೇಳಿದ ಗುಂಪು ಮತ್ತೊಂದು ಒಗಟು ರೂಪದ ಪದವನ್ನು ಹೇಳುತ್ತದೆ ಅದಕ್ಕೆ ಎದುರಿಗಿರುವ ಗುಂಪು ಉತ್ತರ ರೂಪದಲ್ಲಿ ದೇವರ ಹೆಸರು ಹೇಳಬೇಕು. ಇದು ಒಂದು ರೀತಿಯಲ್ಲಿ ಸವಾಲ್ ಜವಾಬ್ ರೀತಿಯ ಸ್ಪರ್ಧೆಯ ರೂಪದಲ್ಲಿ ಹಾಡುಗಾರಿಕೆ ನಡೆಯುತ್ತದೆ. ಇದನ್ನು ಎಲ್ಲಾ ಸಂದರ್ಭದ ಕೋಲಾಟಗಳಲ್ಲಿ ಹೇಳುವುದಿಲ್ಲ. ಹಿರಿಯರು ಸೇರಿ ದೇವರ ಮನೆಯ ಮುಂದೆ ಕೋಲಾಟ ಮಾಡಿದ ಸಂದರ್ಭದಲ್ಲಿ ಮಾತ್ರ ಹಾಡಲಾಗುತ್ತದೆ.

ಈ ಸಂದರ್ಭದಲ್ಲಿ ಹಾಡುವ  ಒಗಟಿನ ರೂಪದ ದೇವರ ಪದಗಳು ಸಂಬಂಧಿಸಿದ ದೇವರ ಚರಿತ್ರೆಯ ಯಾವುದೋ ಒಂದು ಘಟನೆಯನ್ನು ಮಾತ್ರ ವಿವರಿಸುತ್ತವೆ. ಉಳಿದಂತೆ ದೀರ್ಘ ವಿವರಗಳು ಸಮುದಾಯದ ಒಡಲಲ್ಲಿರಬಹುದು. ಆದರೆ ಅವುಗಳ ಬಳಕೆ ಬಹಿರಂಗವಾಗಿ ಎಲ್ಲಿಯೂ ವ್ಯಕ್ತವಾಗಿಲ್ಲ ಎಂಬುದು ಕುತೂಹಲದ ಸಂಗತಿ. ಇದೇನೆ ಇದ್ದರೂ ಈ ಪದಗಳು ಮ್ಯಾಸನ್ಯಾಯಕರ ೩೨ ದೈವಗಳ ಚರಿತ್ರೆಯ ತುಣುಕುಗಳನ್ನು ಪರಿಚಯಿಸುತ್ತವೆ ಎಂಬುದು ಅತೀ ಮಹತ್ವದ ಸಂಗತಿಯಾಗಿದೆ. ಅಂಥ ೩೨ ಪದಗಳನ್ನು ಸಂಗ್ರಹಿಸಿದ್ದು ಅವುಗಳನ್ನು ಇಲ್ಲಿ ನೀಡಲಾಗಿದೆ. ಇಲ್ಲಿನ ಪದಗಳು ತೆಲಗಿನಲ್ಲಿದ್ದು ಅರ್ಥಮಾಡಿಕೊಳ್ಳಲು ಅಷ್ಟೇನು ಕಷ್ಟವಾಗಲಾರದು. ಈ ಸಮುದಾಯದ ಭಾಷೆ ಕನ್ನಡ ಮತ್ತು ತೆಲಗು ಮಿಶ್ರಿತವಾದುದು ಆದರೆ ಇಲ್ಲಿ ಯಾವುದೇ ಕನ್ನಡ ಮಿಶ್ರವಾಗಿರದೆ ಶುದ್ಧ ತೆಲಗಿನಲ್ಲಿವೆ. ಇವುಗಳನ್ನು ಹಾಡುವ ರಾಗ ಬಹಳ ವಿಶಿಷ್ಟವಾಗಿದ್ದು ಅದನ್ನು ಹಾಡಿಸಿ ಕೇಳಿಯೇ ಸವಿಯಬೇಕು.

ವಡೆಲು
ಮಿಕಿ ದಂಡು ಪೈಣಾಲಾನಾ ತೂರುಪುಂಡೆ ತುಮ್ಮೆತಾಲಾ,
ಸ್ವಾಗಲೇಟೇ ನೌಲೇ ತಲ್ಲಿರಾ
ಮೇಲೌರಾ ಜಾಣ, ಸಾಗಿದಾರಾ ಸುಗುಣಲೆತ್ತುರಾ
ಮುಕ್ಕ ಸುಕ್ಕ ಬಲ್ಲರಾವೇ ಮುನ್ನೂರ್ವೇಯ್ಲು ಪಕ್ಕಲಾನಾ,
ತೊಡಸಾರ ಬಲ್ಲನಾವೇರಾ
ಮೇಲೌರ ಜಾಣ, ತೊಂಬಯ್ವೇಲು ಪಕ್ಕಲಾನಾರಾ

ಕಂಪಳ ದ್ಯಾವರಿ
ಅದಿ ಮಲಾ ಈದೀ ಮಲಾ ನೊಡಿಮಿದಯ್ಯ ಸ್ವಾಮೀಮಲಾ,
ಸ್ವಾಮಿ ಮಲಾ ಕಿಂದಿವಾಡುರಾ
ಮೇಲೌರಾ ಜಾಣ, ಸನ್ನ ನಾಮಲು ಚಿನ್ನವಾಡುರಾ
ಅಡ್ಡಕೊಟ್ಟು ವಡ್ರಿಸಿಂಬ ನೆತ್ತಿಮೀದ ಪೆಟ್ಟಿಕೋನಿ,

ದಂಡುಲಾಕಿ ತಾನೇ ವಚ್ಚೇರಾ
ಮೇಲೌರಾ ಜಾಣ, ಬುದ್ಧಿವಂತಡು ಭೂಮಿರಾಜುರಾ

ಸಿಂತಗುಟ್ಲ ಬೋರುವ
ಬೋರು ಬೋರು ಕಿನ್ನೀರಾಲು ಮಾಯಾಮಯ್ಯ ಮಾಯಗುರು,
ವಾರಪಾರಪು ಜೆನ್ನೆ ಪಾಲುರಾ
ಮೇಲೌರಾ ಜಾಣಾ, ನ್ಯಾಲಪಾಲು ಸೇಸಿಕೊಂಟೀರಾ
ಕೀಲು ಕಟ್ಲ ತೇರೂಮಿಂದ ಕಿನ್ನರಾಲೇ ಮೀಕಿ ಜಾಣಾ, ಕಿನ್ನರಾಲೇಕಾಯಲೊಂಪುರಾ
ಮೇಲೌರಾ ಜಾಣ, ಕನ್ನಲೆತ್ತಿ ಮಮ್ಮ ಚೂಡುರಾ

ನಲಗೇತಲು ಮುತ್ತೆಗಾರು
ಗುಂಡುದಿರುಗ ಬಾರಾನಾವೆ ಗುಮ್ಮಡೇಲು ಸ್ವಾಗೆಲಾನ,
ದಿಮ್ಮ ತಿರುಗಾ ಬಾರಾನಾವೇರಾ
ಮೇಲೌರಾ ಜಾಣಾ, ಸೂರೆಗೊಮ್ಮುಲನ್ನಗಾರೂರಾ
ಆಕಿಲ ಮಾಕಿಲ ಗಂಟೆ ರ್ವಾಕಾಲೆತ್ತಿ ದೊಂಚುಲೇದು
ನೂಕ ಸೇಸಿನಿ ಗುಮ್ಮಲೊಚ್ಚೇರಾ
ಮೇಲೌರಾ ಜಾಣಾ, ರೊಂಡು ಸೇತುಲೆತ್ತ ಮುಕ್ಕುರಾ

ಚನ್ನಯ್ಯ ಕ್ಯಾಸಯ್ಯ
ಕೂಡುನೌಡು ಕೂಡಿತಿಮ್ಮಯ್ಯ ಕುಂಡಾಲಾನಾ ವಂಡಿತಿಮಯ್ಯ,
ಚನುಗನಪಲ್ಲಿ ಸೆರುವುಯನಕಾರಾ
ಮೇಲೌರಾ ಜಾಣ  ಪಾಲಕಾಯಿಲು ಇಸುಮುಲಾಯಾರಾ
ಯಂಡಿ ಕಟ್ಲ ತೇರುಮಿಂದ ಯಾಡಾತಿರಿಗಿತಿಮೇಮಿ
ಸೇತು ಪಾಲ ಮಕ್ಕುಲು ಕೂಡಾನವ್ವುರಾ
ಮೇಲೌರಾ ಜಾಣಾ, ಪಾಲಪೋಗುಲು ಪೈನಾ ಪಾರೇರಾ

ಕಾಟಪ್ಪಡು
ಕೋಟಿಲಿಂಗಾಲೊಡಿಕಟ್ಟೀಕೋನಿ ಕಲ್ಕಧರ್ಮರಾಜು ಯಡ್ಲೆ,
ಜಂಬು ದೀಪಾಲು ಗಡ್ಡಮಿಂದಾರಾ
ಮೇಲೌರಾ ಜಾಣಾ, ಕೋಟಿ ಮೊಕ್ಕುಲು ಕಲಗ ಮೊಕ್ಕೇರಾ
ಕುಂದಿರ್ಪ ಬಂಡಾಮಿಂದ ಏಸಿಂಡಾಡು ಶಾಸನಾಲು
ಎಂಡಿ ಪತ್ತುರ್ಲು ಯಡ್ಲ ಸದುವೇರಾ
ಮೇಲೌರ ಜಾಣ ದಾನ ಪತ್ರಲು ಸದುವೇರ

ನನ್ನಲು ಮುತ್ತೆಗಾರು
ಮಂಚಿದೀ ಮಲ್ಲೇಲು ದಂಡಾ ಮಂಚಮಾಕಿ ತಗಲಾ ಏಸಿ ಮಂಚಿ ಮಗುಡೇ ದಂಡು ಬೋಯೇರಾ
ಮೇಲೌರಾ ಜಾಣಾ ಮಂಚಮೆಕ್ಕೆ ಮನಸುರಾದೂರಾ
ಮದಿರ ರ್ಯಾಗಟಿ ಗಡ್ಡಿ ಕುಸುವು ಸ್ವಾಮಾಲು ಬಂಡಾ ಸಲಮ ನೀಳು ಬೋಡಿಗೊಟ್ಟು ಈದುಲೋನಾ
ಮೇಲೌರಾ ಜಾಣಾ ದುಂಡು ಮಲ್ಲೆಲು ದುಲ್ಲಬಾರೇರಾ

ನಲಗೇತಲ ಮುತ್ತೆಗಾರು
ಚಿನ್ನದಯ್ಯ ಕ್ವತ್ತಗುಡ್ಡಮು ಸ್ರಂಗಾರುಮೈನ ವನುಮುಲಾನಾ ತೂಗಿ ನಿಮ್ಮಲಯ್ಯಿ ತೂಗೇರಾ
ಮೇಲೌರಾ ಜಾಣಾ ಬೂದಿ ಬೆಳವಲ ಹಿಂಡೇ ಪೋಯೇರಾ
ನಲಗೇತುಲು ನೆಗುರುಮಿಂದ ದಿಮ್ಮ ದಿರಗ ಬಾರಾನಾವೆ ಮಕಮು ಪಲ್ಲಿ ಮಾರಾ ಚಲುವಾಲು

ಮೇಲೌರಾ ಜಾಣ ನಿಟಿ ಬೆಳವಲು ಹಿಂಡು ಮಡ್ಲೇರಾ

ದಡ್ಡಿಸೂರನಾಯಕ
ಯರ್ರಮಂಚೀ ರೇವೋಲಾನಾ ಎದುರು ಎಕ್ಕೆ ರಾಜು ಮೀನು
ರಾಜು ಮಾನ್ಯಲು ಕೂಡಾನೌಡೂರಾ
ಮೇಲೌರಾ ಜಾಣಾ ಮಕಿನಿ ಮಕ್ಕಲು ನಾವೇ ಅನ್ನುರಾ
ನಿಮ್ಮಪಂಡೆ ನಿರ್ವಣಾಲು ನೀಲದಟ್ಟಿ ಮಾನ್ಯಡುದಾರ
ನಿಡಗಂಟಿ ನ್ಯಾಲಾನಾನಾರಾ
ಮೇಲೌರಾ ಜಾಣ ಮಕಿನಿ ಮಕ್ಕುಕಿ ತಾನೇ ವಚ್ಚೆರಾ

ನರಸಿಂಹ ಓಬಿಳಿ ದ್ಯಾವರಿ
ಅಡ್ಡ ಕಟ್ಟು ವಡ್ರಿಸಿಂಬ ದಡ್ಡಿಲಾಕಿ ವಚ್ಚೆನಾವೇರಾ ಗುಬ್ಬಗುಡುಸುನಾನವಾಡೂರಾ
ಮೇಲೌರಾ ಜಾಣಾ ಭೂಮಿರಾಜೂರಾ
ಮುರ್ರಮಲಾ ವನುಮುಲಾನಾ ಯನುಗವೃಕ್ಷಲಾಯಿ ಪುಟ್ಟೇರಾ
ಆಕ ಚೇಳಲಯ್ಯಿ ಪುಟ್ಟೇರಾ
ಮೇಲೌರಾ ಜಾಣಾ ಅಡವಿ ಸಂಚಲು ಬತುಮು ಸೆಡಿಪೇರಾ

ದೊಡ್ಡೋಬಳಿ ದ್ಯಾವರಿ
ಉಟ್ಟು ಉಟ್ಟೂ ವಾನಾಲಾನ ವುಂಟೀರಾ ದಾನಿಂಟಿ ಯನಕ ಮುಂಡಸಾಕಿನಿ ಮುಚ್ಚು ಕುಕ್ಕರಾ
ಮೇಲೌರಾ ಜಾಣ ಪೊಂಡ ಪೋತೆ ಪಕ್ಕಾಗರಿಸೇರಾ
ಉಂಡಿ ಉಂಡಿ ಊಂಡ್ಯಾಲಾಕ ಪ್ಂಡ್ಲು ದಾನ್ನಿ ಸೇಸುಕೊಂಟಿ ಜಲ್ಲು ತುರುಬೇ ಜಲ್ಲು ಗರಿಸೇರಾ
ಮೇಲೌರಾ ಜಾಣಾ ನ್ಯೆಯ್ಯಬೋತೇ ನೆತ್ತಿ ಕುಕ್ಕೆರಾ

ಯರಗಟ್ಟ ನಾಯಕ
ಏಸಿಂಡೆದಿ ವನುಮಲ್ಲೆಲು ದಂಡ ಪುಟ್ಟಿಂಡೇದಿ ಜಗು ಜಂಪುಲು
ಗೊಡಗು ವಜ್ಜರಾಲೇ ವಾಕೇದುರು ಬೂರಾ
ಮೇಲೌರ ಜಾಣಾ ತೆಲುವ ಚಪ್ಪಾನ ಜಾನಾಡ್ಯೆತೀರಾ
ಗೋಲು ಗರೀ ಕಟ್ಟಿನೊಮ್ಮು ಗುಂಡೆಲಾಕೆ ವಾಲೇನಾರಾ
ಪಂತಗರೀ ಕಟ್ಟೀನಮ್ಮಾರ
ಮೇಲೌರಾ ಜಾಣ ಹೃದಯಮಾಕೆ ಬ್ರತಮೇ ಸೆಡಿಪೇರ

ಪದಿ ಮುತ್ತೆಗಾರು
ನಿಂತಮಾನೂ ನಿಲುಕಾಲಾರಾ ಚಿನ್ನವಾನ್ನಿ ಕಾನೇರೇಮಿ
ಮುರ್ರ ಮಲಾ ವನುಮುಲಾನಾರಾ
ಮೇಲೌರ ಜಾಣ ಸನ್ನ ಮಲ್ಲೆಲು ದುಲ್ಲ ಬಾರೆರಾ
ಪಾರಿ ಪಾರಿ ವಚ್ಚೀನಾವೇ ಪಾಲಪೋಗುಲ
ಗವ್ವಾಲಾಲಾ ಮುರ್ರಮಾನು ವನುಮುಲಾನಾರ
ಮೇಲೌರಾ ಜಾಣಾ ವಕ್ಕಮಾನೀಕಿ ನಿಲುಕಲು ವಾಲೇರ

ಗಾದರಿ ದ್ಯಾವರಿ
ಉರುವಕೊಂಡ ಉರ್ತಪಿಲ್ಲಾ ಉಗ್ಗಿಪೋಸಿ ಸಾಕೂದಾಮು
ಪೆನಗೊಂಡ ಲಗುಡ ವಚ್ಚೆರಾ
ಮೇಲೌರಾ ಜಾಣಾ ಪಂತಲಾಡಿ ಕೊಂಡಪೋಯೇರಾ
ಉತ್ತರಾಲೆ ಉರುಮಾಲುರುಮೆ ನಾದರಾಲೆ
ಮೆರಗ ನೆರಸೆ ಗಾದ್ರಯ್ಯ ಕನುವಲಾನಾರ

ಮೇಲೌರ ಜಾಣ ಸನ್ನ ಮುತ್ತುಲೆ ವಾನಗುರೇಸರಾ

ಬೋಸೇದೇವರು

ಎದ್ದುಮೆಟ್ಟೂ ಮೂಲಾನಾ ಉಬ್ಬನಾರಾ ಗುಬ್ಬಾಗೊಡುಗು ಕಿಂದಿವಾಡೂರಾ
ಮೇಲೌರ ಜಾಣ ಗೆಜ್ಜೆಲೆ ಬ್ರಹ್ಮದಂಡವಾಡೂರ ಭೂಮಿರಾಜರಾ
ನಲ್ಲಟಿ ನಲ್ಲಟೀವಾಡೂ ನಾಮಾಲೇ ಸಕ್ಕಾಳಿವಾಡು ಬ್ರಹ್ಮದಂಡವಾಡೂರ
ಮೇಲೌರ ಜಾಣಾ ಗಂಡಿ ಕ್ವಾಟ ತಾಳೆಗಾಡೂರಾ

ದಡ್ಡಿ ಕಾಮನಾಯಕ

ಮುನ್ನೂರುಟ್ಲ ಮುದ್ದಾಬೋನಾ ಜಾರಾಮಡಿಸೆ ರಾಜೂಕಾಮು ಸಾಲಾ ಸಿಂತಾಲು ವನುಮುಲಾನಾರಾ
ಮೇಲೌರಾ ಜಾಣ ಸುತ್ತುಮಲ್ಲೆಲು ಸೆಡಮೊಕ್ಕೆರಾ
ಪುಲಿ ಉಗುರೆ ಪಚ್ಚಡುಮುಗೊಪ್ಪಿ ಪಂಜರು
ಬಾಕೇ ಸೇತುಲ ಪೆಟ್ಟಿ ಸಿಂತಗುಟ್ಲ ನೋಮೂಲಾನಾರಾ
ಮೇಲೌರಾ ಜಾಣಾ ಮುತ್ತುಲೇ ಬಸುವಂತಲಾಡೇರಾ

ಚಿತ್ತರು ದ್ಯಾವರಿ

ಎದ್ದು ದೊಕ್ಕಿನಿ ಎಜ್ಜೆನಾನಾ ಉಬ್ಬೆನಾರಾ ಗುಬ್ಬಾಗೊಡುಗುಲು ಕಿಂದಿ ವಾಡೂರಾ
ಮೇಲೌರಾ ಜಾಣಾ ಅಡ್ಡ ಬೊಟ್ಟುಲು ದೊಡ್ಡವಾಡುರ
ಊಟಕುಂಟಾ ವನುಮುಲಾನಾ ಯಾಡತಿರಿಗಿ ಮೇಮುಚೇತು ಮಿಕುಮಲೇನ ದೊಡ್ಡವನ್ನೇ ದಂಡೂನೆಸೇರಾ
ಮೇಲೌರಾ ಜಾಣಾ ಆನೆಗಲ್ಲುಕಿ ಏಗಾಬೋಯೇರಾ

ಮಲ್ಲಿನಾಯಕನ ಬೊಮ್ಮದೇವರು

ಸನ್ನ ಪಂಗು ಪಟ್ಟಿಕೋನಿ ಸಂದಮಾಮ ರಂಗ ಸಂದಮಾಮ
ಜೆನ್ನಿವಾರಮೇಸಿಕೋನಿ ಸಂದಮಾಮ
ಮುನ್ನೂರು ಗುಂಚೆಲು ಮುಜುಗುಲೋನಾ ಸಂದಮಾಮ ರಂಗಸಂದಮಾಮ
ಪಂಚಂಗಾಲೆ ಪಾರ ಸದುವೆ ಸಂದ ಮಾಮ

ಜಗಲೂರುಮುತ್ತೆ

ತೂರುಪಾಕಿಲಿ ತೋರಬಡಿಸೆ ಸಂದಮಾಮ ರಂಗ ಸಂದಮಾಮ
ಪಡುಮಟ್ವಾಕಿಲಿ ಪಾರಾಬಡಿಸೆ ಸಂದಮಾಮ
ಗಂಗಿ ವಾಕಿಲಿ ಯಡ್ಲನವುಡು ಸಂದಮಮ ರಂಗ ಸಂದಮಾಮ
ಜೋಗಿ ಚಕ್ಕುರ್ಲು ಅಡ್ಡಮಯ್ಯ ಸಂದಮಾಮ

ಮಂದ ಬೊಮ್ಮದೇವರು

ಪುಟ್ಟಮಿಂದ ಚೆಟ್ಟುಪುಟ್ಟಿ ಸಂದಮಾಮ ರಂಗ ಸಂದಮಾಮ
ಚಟ್ಟುಮಿಂದ ಚಂಡುಪುಟ್ಟಿ ಸಂದಮಾಮ
ಚಂಡುಮಿಂದ ಮುಳ್ಳುಬುಟ್ಟಿ ಸಂದಮಾಮ ರಂಗ ಸಂದಮಾಮ
ಮುಳ್ಳುಮಿಂದ ಬಳ್ಳಿಪಾರೆ ಸಂದಮಾಮ

ಸೂರಪ್ಪಡು

ಏಬೆಗಡ್ಡ ಸೇನುವಾಡು ಸಂದಮಾಮ ರಂಗಸಂದಮಾಮ
ಏಡುಮಟ್ಲು ಮೋಜುಗಾಡು ಸ'ಂದಮಾಮ
ಎನ್ನ ಮಿಂದ ಗುವಲ್ವಾಲೆ ಸಂದಮಾಮ ರಂಗ ಸಂದಮಾಮ

ಮರುಮುಮಿಂದ ನೇಯಬಾರೆ ಸಂದಮಾಮ

ಬಂಗಾರು ದೇವರು
ದಿನ್ನಮಿಂದ' ದಾನಿನೆಗರು ಸಂದಮಾಮ ರಂಗ ಸಂದಮಾಮ
ದಿಯ್ಯಗಂಬಲೆತ್ತುಲಾನ ಸಂದಮಾಮ
ಏಟುಪಡಿನ ಮಿಕುಮುತಲ್ಲೆ ಸಂದಮಾಮ ರಂಗ ಸಂದಮಾಮ
ಏಗದಂಕ ಗಂಟಬಾರೆ ಸಂದಮಾಮ???

ರಾಜಲು ದ್ಯಾವರಿ
ಸುಕ್ಕಬಟ್ಟು ಸುರೇನಾಲು ಸಂದಮಾಮ ರಂಗ ಸಂದಮಾಮ
ಎಮ್ರಪೆತ್ರಿ ಕಂದನಾಲು ಸಂದಮಾಮ
ರಾಜನಾಲು ದೊಂಚನವುಡು ಸಂದಮಾಮ ರಂಗ ಸಂದಮಾಮ
ಕಾಮರಾಜ ಕೊಡುಕು ಪುಟ್ಟೆ ಸಂದಮಾಮ

ನಲಗೇತು ಯರಗಯ್ಯ
ಸೀಗಿಮಾನು ಸಿಕಳಗಂಟಿ ಸಂದಮಾಮಾ ರಂಗ ಸಂದಮಾಮಾ
ಬಾಳಮಾನು ಟಿವ್ವಬಾಯ ಸಂದಮಾಮಾ
ಗರುಡಾಳು ಮಾನುಕಿಂದ ಸಂದಮಾಮಾ ರಂಗಮಾಮಾ
ದಕ್ಕಲೇದು ಮುಡುವಲಾಯ ಸಂದಮಾಮಾ

ಕಂಬಲಯ
ಎದ್ದುಮಿಂದ ಆಮದಾಲು ಸಂದಮಾಮಾ ರಂಗ ಸಂದಮಾಮಾ
ಎದ್ದು ಮಿಂದ ಏಸಿಕೋನಿ ಸಂದಮಾಮಾ
ತಾನೆ ವಚ್ಚೆ ಕ್ವಂಡಲಾಕಿ ಸಂದಮಾಮಾ ರಂಗ ಸಂದಮಾಮಾ
ಸನ್ನ ಕಂಬಲೆತ್ತುಲಾಕಿ ಸಂದಮಾಮಾ

ದಡ್ಲು ಮಾರವ
ಚಂದ್ರಗಾವಿ ಸನ್ನಜೀರ ಸಂದಮಾಮಾ ರಂಗ ಸಂದಮಾಮಾ
ಸೊನ್ನು ಪೆಟ್ಟಿದಕ್ಕನಿಯ್ಯ ಸಂದಮಾಮಾ
ಸಂದಮಾಮಲಂತ ಗುಬ್ಬ ಸಂದಮಾಮಾ ರಂಗ ಸಂದಮಾಮಾ
ಗೋರಿ ಪೆಟ್ಟಿ ಸದುವಲೇದು ಸಂದಮಾಮಾ

ರಾಗಿಮಾನು ಸೌಡವ
ರಾಗಿಮಾನು ಪುಟ್ಟನವುಡು ಸಂದಮಾಮಾ ರಂಗ ಸಂದಮಾಮಾ
ನಾನು ಬಟ್ಟ ಕಟ್ಟನೆರಗು ಸಂದಮಾಮಾ
ರಾಗಿಮಾನು ರಚ್ಚ ಕೊಚ್ಚೆ ಸಂದಮಾಮಾ ರಂಗ ಸಂದಮಾಮಾ
ರಾಯ್ಲು ಮೆಚ್ಚಿನಾಟದ್ಯೆತಿ ಸಂದಮಾಮಾ ಗಾಆಮಾರವ

ಗಾಳಿ ಮಾರವ
ಯರ್ರಗಟ್ಟು ಏಗುತಾದೆ ಸಂದಮಾಮಾ ರಂಗ ಸಂದಮಾಮಾ
ಏಪಕ್ವಮ್ಮ ತೂಗುತಾದೆ ಸಂದಮಾಮಾ
ಯನಕ ವಚ್ಚುನು ಯರ್ರ ಬುಡುಸು ಸಂದಮಾಮಾ ರಂಗ ಸಂದಮಾಮಾ
ನಿದ್ದರೆಕ್ಕಿ ತೂಗುತಾದೆ ಸಂದಮಾಮಾ

ಗಾಳಿ ಮಾರವ

ಪುಟ್ಟಮಿಂದ ಕವಿಳಿ ಚಟ್ಟು ಸಂದಮಾಮಾ ರಂಗಸಂದಮಾಮಾ
ಕಾಯಿಗಾಸಿ ಜಗ್ಗುತಾದೆ ಸಂದಮಾಮಾ
ದೊಡ್ಡಿನಾನ ರೊಡ್ಡಿಬುಟುಸು ಸಂದಮಾಮಾ ರಂಗ ಸಮುದಮಾಮಾ
ನಿದ್ದರೆಕ್ಕಿ ತೂಗುತಾದೆ ಸಂದಮಾಮಾ

ಮುತ್ತೆಗಾರ ಮಾರವ
ಕ್ವಂಡಕಿ ಮಾಯಾವುಲರ್‍ರೆ ಸಂದಮಾಮಾ ರಂಗ ಸಂದಮಾಮಾ
ಕೋಗಿಲ್ಯಾಲ ಕುಯ್ಯಲೇದು ಸಂದಮಾಮಾ
ಕ್ವಂಟಮಿಂದ ಕ್ವಬರಿ ಬಡಸು ಸಂದಮಾಮಾ ರಂಗಸಂದಮಾಮಾ
ಕೋಗಿಲಯ್ಯಿ ತಾನುಗಿಸೆ ಸಂದಮಾಮಾ

ಕೆಂಚವ ಕಾಮವ
ಸಲ್ಲ ಕಡವ ಸಂಕದಾಡು ಸಂದಮಾಮಾ ರಂಗ ಸಂದಮಾಮಾ
ಅರವಸೀಮ ಗೊಲ್ಲದಾಸಿ ಸಂದಮಾಮಾ
ಮುದ್ರ ಮಾಲಡ ಕ್ಯಾದಿಗೆನ್ನು ಸಂದಮಾಮಾ ರಂಗ ಸಂದಮಾಮಾ
ಮುಡುವಲಕ್ಕೆ ಜಾಮುಲಯ್ಯ ಸಂದಮಾಮಾ

ದ್ಯಾವರಿ ಗುದ್ದ ಗಂಗವ
ಕಟ್ಟಮಿಂದ ಕವಿಳಿ ಚಟ್ಟು ಸಂದಮಾಮಾ ರಂಗ ಸಂದಮಾಮಾ
ಕಾಯಲೆಕ್ಕಿ ಜಗ್ಗುತಾದೆ ಸಂದಮಾಮಾ
ಎದ್ದುಮಿಂದ ರೆಟ್ಟಿಬದುಸು ಸಮದಮಾಮಾ ರಂಗ ಸಂದಮಾಮಾ
ನಿದ್ದರೊಚ್ಚಿ ತೋಗುತಾದೆ ಸಂದಮಾಮಾ

# ಮ್ಯಾಸನಾಯಕರ ಪಾರಂಪರಿಕ ಕೃಷಿ ಪದ್ಧತಿ

ಭಾರತದಲ್ಲಿ ಕಳೆದ ಹತ್ತಿಪ್ಪತ್ತು ವರ್ಷಗಳಿಂದ ಮಿತಿಮೀರಿ ಬೆಳೆಯುತ್ತಿರುವ ಜನಸಂಖ್ಯೆಯ ಕಾರಣದಿಂದಾಗಿ ದೇಶ ಹಲವಾರು ಸಮಸ್ಯೆ ಮತ್ತು ಸವಾಲುಗಳನ್ನು ಎದುರಿಸುವಂತಾಗಿದೆ. ಅವುಗಳಲ್ಲಿ ಆಹಾರದ ಸಮಸ್ಯೆಯೂ ಒಂದು. ಜನಸಂಖ್ಯೆಗೆ ಅನುಗುಣವಾಗಿ ಆಹಾರ ಒದಗಿಸುವ ಒತ್ತಡಕ್ಕೆ ಒಳಗಾದ ಪ್ರಭುತ್ವಗಳು ಇದಕ್ಕೆ ಹಸಿರುಕ್ರಾಂತಿ ಎಂಬ ಪರಿಹಾರ ಸೂತ್ರವನ್ನು ಕಂಡವು. ಈ ಹಸಿರುಕ್ರಾಂತಿ ಆಧುನಿಕ ವಿಜ್ಞಾನ ತಂತ್ರಜ್ಞಾನ ಆಧರಿತ ಕೃಷಿ ಪದ್ಧತಿಗಳನ್ನು ಅವಲಂಭಿಸಿದ್ದು ಇದರಿಂದ ಕೆಲವು ಅನುಕೂಲಗಳಾದವು, ಆದರೆ ಹೈಬ್ರಿಡ್‌ಬೀಜ, ರಸಗೊಬ್ಬರ, ಕೀಟನಾಶಕಗಳ ತಯಾರಿಕೆಗಾಗಿ ಬಹುರಾಷ್ಟ್ರೀಯ ಕಂಪನಿಗಳು ನಮ್ಮೊಳಗೆ ಪ್ರವೇಶಮಾಡಿದ್ದು ಅನೇಕ ಸಮಸ್ಯೆಗಳಿಗೆ ಕಾರಣವಾಯಿತು. ಮುಖ್ಯವಾಗಿ ಹೆಚ್ಚಿನ ಇಳುವರಿ ಎನ್ನುವ ಆಕರ್ಷಣೆಯಲ್ಲಿ ಸಾವಿರಾರು ವರ್ಷಗಳ ತನ್ನ ಪರಂಪರೆಯ ಕೃಷಿಜ್ಞಾನವನ್ನು ಕಳೆದುಕೊಂಡು, ಬಹುರಾಷ್ಟ್ರೀಯ ಕಂಪನಿಗಳ ಕಪಿಮುಷ್ಠಿಗೆ ಸಿಕ್ಕಿ ಹಾಕಿಕೊಂಡ. ಆ ಮೂಲಕ ಈ ನೆಲದ ರೈತರ'ನ್ನು ಪರಾವಲಂಭಿಗಳಾಗಿಸುವ ಸನ್ನಿವೇಷ ನಿರ್ಮಾಣವಾಗುತ್ತಾ ಬಂದದ್ದನ್ನು ಕಾಣಬಹುದು. ಆದಿಯಿಂದಲೂ ತನ್ನದೇ ಆದ ಬೀಜ–ಗೊಬ್ಬರ–ಕೀಟನಾಶಕಗಳ ಜ್ಞಾನವನ್ನು ಹೊಂದಿದ್ದ ರೈತ ಈ ಹೊಸ ಕಾಲದ ಬೆಳವಣಿಗೆಯಿಂದಾಗಿ ತನ್ನ ಜ್ಞಾನದ ಬಗ್ಗೆ ತಾನೆ ಕೀಳರಿಮೆಗೆ ಒಳಗಾಗಿ ಹೈಬ್ರಿಡ್ ಜ್ಞಾನದ ಕಡೆ ಚಲಿಸತೊಡಗಿದ್ದು ಈ ದೇಶದ ದೊಡ್ಡ ದುರಂತ. ರೈತ ಇಂದಿಗೆ ಇಂಥ ಪರಾಧೀನತೆ –ಪರಾವಲಂಭಿತನದಿಂದ ಬಿಡುಗಡೆಗೊಳ್ಳುವ ಅನಿವಾರ್ಯತೆಯಿದ್ದು ಬಿಡುಗಡೆಯ ಹಾದಿಗಳನ್ನು ಶೋಧಿಸಬೇಕಿದೆ. ಇಂಥ ಹಾದಿಗಳಲ್ಲಿ ನಮ್ಮ ಪಾರಂಪರಿಕ ಕೃಷಿ ಜ್ಞಾನಗಳನ್ನು ಪುನರುಜ್ಜೀವನಗೊಳಿಸುವ ಪ್ರಯತ್ನ ಮುಖ್ಯವಾಗಿದೆ. ಈ ಹಿನ್ನಲೆಯಲ್ಲಿ ಚಿತ್ರದುರ್ಗ ಜಿಲ್ಲೆಯಲ್ಲಿ ನೆಲೆನಿಂತಿರುವ ಮೂರು ಪ್ರಮುಖ ಬುಡಕಟ್ಟುಗಳಲ್ಲಿ ಪ್ರಚಲಿತವಿರುವ ಪ್ರಾಚೀನ ಪರಂಪರೆಯ ಕೃಷಿಪದ್ಧತಿಗಳನ್ನು ಅಧ್ಯಯನಮಾಡಿ ಅದರೊಳಗೆ ಬೀಜೋತ್ಪತ್ತಿ ಮತ್ತು ಬೀಜ ಸಂರಕ್ಷಣೆಯ ಕ್ರಮಗಳನ್ನು ಶೋಧಿಸಿ ವಿಶ್ಲೇಷಿಸುವ ಪ್ರಧಾನ ಉದ್ದೇಶ ಈ ಲೇಖನಕ್ಕಿದೆ.

ಚಿತ್ರದುರ್ಗಜಿಲ್ಲೆಯ ಭೌಗೋಳಿಕ ಹಿನ್ನೆಲೆ ಮತ್ತು ಕೃಷಿ ಪರಿಸರ

ಮಧ್ಯೆ ಕರ್ನಾಟಕದಲ್ಲಿ ಬರುವ ಜಿಲ್ಲೆಗಳಲ್ಲಿ ಚಿತ್ರದುರ್ಗವೂ ಒಂದಾಗಿದ್ದು ಹಲವಾರು ಕಾರಣಗಳಿಂದ ಗಮನಾರ್ಹವಾದ ಜಿಲ್ಲೆಯೆನಿಸಿದೆ.೧೯೯೮ ರಲ್ಲಿ ಹೊಸ ಜಿಲ್ಲೆಗಳ ಉದಯದ ನಂತರ ಹೊಸ ರೂಪ ಪಡೆದ ಚಿತ್ರದುರ್ಗ ಜಿಲ್ಲೆ; ಚಳ್ಳಕೆರೆ, ಹಿರಿಯೂರು, ಹೊಳಲ್ಕೆರೆ, ಹೊಸದುರ್ಗ ಮತ್ತು ಮೊಳಕಾಲ್ಮುರು ಎಂಬ ಆರು ತಾಲ್ಲೂಕುಗಳನ್ನು ಹೊಂದಿದೆ. ಈ ಜಿಲ್ಲೆಯ ಒಟ್ಟು ವಿಸ್ತೀರ್ಣ ೭,೭೦,೦೦೦ ಹೇಕ್ಟೇರುಗಳಿದ್ದು ಬಹುಭಾಗ ಮರುಳು ಮಿಶ್ರಿತ ಕೆಂಪು ಮಣ್ಣಿನಿಂದ ಮತ್ತು ಕಪ್ಪುಮಣ್ಣಿನಿಂದ ಕೂಡಿದೆ. ೪,೦೮,೧೬೮ ಹೇಕ್ಟೇರುಗಳ ಸಾಗುವಳಿ ೭೭,೨೫೫ ಹೇಕ್ಟೇರುಗಳ

ನೀರಾವರಿ ಕ್ಷೇತ್ರ ಹಾಗೂ ೭೩,೭೧೯ ಹೇಕ್ಟೇರುಗಳಲ್ಲಿ ಅರಣ್ಯಭೂಮಿಯಿದೆ. ಜಿಲ್ಲೆಯ ಬಹುಭಾಗ ಬರುಡಾಗಿದ್ದು ಹವಾಮಾನವು ೩೫ ಡಿ.ಸೆ.ನಿಂದ  ೪೨ ಡಿ.ಸೆನವರೆಗೆ ಉಷ್ಣಾಂಶ ಹೊಂದಿರುತ್ತದೆ. ಜಿಲ್ಲೆಯಲ್ಲಿ ಸರ್ವಋತುಮಾನದ ಏಕೈಕ ನದಿ ವೇದಾವತಿ ಹರಿಯುತ್ತಿದ್ದು, ನೀರಾವರಿಯಿಂದ ವಂಚಿತರಾಗಿ ರೈತರು ಕೇವಲ ಮಳೆ ನೀರನ್ನು ಆಶ್ರಯಿಸಿದ್ದಾರೆ.(ತಿತಿತಿ.ಛ್ಣಾಣಚಿಡಿಡಿಚಿಜಣಔರಾಚಿ.ಛಿಡು).

ಜಿಲ್ಲೆಯಲ್ಲಿ ಬಹಳ ಕಾಲದಿಂದಲೂ ಕೃಷಿ ಚಟುವಟಿಕೆಗಳು ನಡೆಯುತ್ತಿರುವ ಬಗ್ಗೆ ಮೌಖಿಕ ಕಥನಗಳಲ್ಲಿ ವಿವರಗಳು ದೊರೆಯುತ್ತವೆ. ೧೮೦೧ರಲ್ಲಿ ಬುಕನನ್ ಈ ಪ್ರದೇಶಗಳಲ್ಲಿ ತಿರುಗಾಡಿದ ಪ್ರವಾಸದ ವಿವರಗಳನ್ನು ಗಮನಿಸಿದರೆ ಅಷ್ಟೊತ್ತಿಗಾಗಲೇ ಇಲ್ಲಿ ಕೃಷಿ ಚಟುವಟಿಕೆಗಳು ಅತ್ಯುನ್ನತ ಸ್ಥಿತಿ ತಲುಪಿದ್ದರ ಕುರುಹುಗಳು ಸಿಗುತ್ತವೆ. ಜಿಲ್ಲೆಯು ಅನೇಕ ವೈವಿದ್ಯತೆಗಳಿಂದ ಕೂಡಿದ್ದು, ಹಿರಿಯೂರು ತಾಲ್ಲೂಕಿನ ವಾಣಿವಿಲಾಸಸಾಗರದ ಅಚ್ಚುಕಟ್ಟು ಭಾಗಗಳಲ್ಲಿರುವ ತೋಟಗಳನ್ನು ಬಿಟ್ಟರೆ ಹಿರಿಯೂರು, ಚಳ್ಳಕೆರೆ, ಮೊಳಕಾಲ್ಮುರು ತಾಲ್ಲೂಕುಗಳು ವಿರಳ ಬೆಟ್ಟಗಳ ವಿಶಾಲ ಸಮತಲ ಭೂಪ್ರದೇಶಗಳು. ಇಲ್ಲಿನ ತಾಪಮಾನ ಹೆಚ್ಚಿದ್ದು ಸಹಿಸಲು ಅಸದಳವಾಗುತ್ತದೆ. ಇದಕ್ಕೆ ವಿರುದ್ಧವಾಗಿ ಚಿತ್ರದುರ್ಗ, ಹೊಳಲ್ಕೆರೆ, ಹೊಸದುರ್ಗ ತಾಲ್ಲೂಕುಗಳು ಎತ್ತರಾದ ಬೆಟ್ಟ ಪ್ರದೇಶಗಳಿಂದಾಗಿ ಕಡಿಮೆ ಉಷ್ಣಾಂಶದ ಭೂಪ್ರದೇಶಗಳಾಗಿವೆ.  ಪೂರ್ವದ ವಿಶಾಲ ಸಮತಲ ಭೂಪ್ರದೇಶದಲ್ಲಿ ಮಳೆಯ ಪ್ರಮಾಣವು ಕಡಿಮೆ ಇರುವುದರಿಂದ, ವರ್ಷಕ್ಕೆ ಒಂದೇ ಬೆಳೆಯಾಗಿರುವ ಇಲ್ಲಿನ ವ್ಯವಸಾಯ ತೀರಾ ಬರಡು ರೀತಿಯಲ್ಲಿದೆ. ಆದರೆ ಜಿಲ್ಲೆಯ ಪಶ್ಚಿಮದ ತಾಲ್ಲೂಕುಗಳಲ್ಲಿ ಮಳೆಯ ಪ್ರಮಾಣ ಪೂರ್ವಕ್ಕಿಂತ ಹೆಚ್ಚಾಗಿದ್ದಾರಿಂದ ಮತ್ತು ಭೂಮಿಯ ಫಲವತ್ತತೆ, ಹವಾಮಾನ ವೈವಿಧ್ಯಗಳಿಂದ ಎಲ್ಲಾ ವಿಧದ ಬೆಳೆಗಳನ್ನು ಸಹ ಬೆಳೆಯಬಹುದಾಗಿದೆ, ಅವಿಭಜಿತ ಚಿತ್ರದುರ್ಗ ಜಿಲ್ಲೆಯಲ್ಲಿ ಹರಿಯುತ್ತಿದ್ದ ಏಕಮಾತ್ರ ದೊಡ್ಡನದಿ ತುಂಗಭದ್ರೆ, ವಿಭಜನೆಯ ನಂತರ ಚಿತ್ರದುರ್ಗ ಜಿಲ್ಲೆಯಿಂದ ದೂರ ಸರಿದಿದ್ದು, ಈಗ ವೇದಾವತಿ, ಸುವರ್ಣಮುಖಿಯಂತಹ ಚಿಕ್ಕನದಿಗಳೇ ಜಿಲ್ಲೆಗೆ ಆಧಾರ. ಇವುಗಳ ಜೊತೆಗೆ ಹಲವಾರು ಕೆರೆ–ಹಳ್ಳಗಳ ಆಶ್ರಯವೂ ಪ್ರಮುಖವಾಗಿದೆ. (ಸಿ.ಸೋಮಶೇಖರ್, ಚಿತ್ರದುರ್ಗಜಿಲ್ಲೆಯ ಜನಜೀವನ ಸಂಸ್ಕೃತಿ–೩, ತಿತಿತಿ,ಚಿಟಔಚಿಜಚಿ.ಚಿಜೂ) ಜಿಲ್ಲೆಯಲ್ಲಿ ಪ್ರಮುಖವಾಗಿ ಎರೆನೆಲ, ಕೆಂಪುನೆಲ, ಮರಳುನೆಲ, ಕೆಂಬಗಡೆನೆಲ, ಮರಳು ಮಿಶ್ರಿತ ಬೂದಿ ಮಣ್ಣಿನ ನೆಲ ಇದ್ದು. ಇದರಲ್ಲಿ ವ್ಯವಸಾಯ ಮಾಡುವುದಕ್ಕೆ ಅನೇಕ ಅನುಕೂಲಗಳಿದ್ದು ಕಡಿಮೆ ಮಳೆಯಾದರೂ ಮಣ್ಣಿನ ಹವಾಗುಣದಿಂದಾಗಿ ಬೆಳೆ ಬೆಳೆಯಬಹುದಾಗಿದೆ. ಈ ಭಾಗದಲ್ಲಿ ಪ್ರಾರಂಭದ ಬೆಳೆಗಳಾಗಿ ಸಜ್ಜೆ, ನವಣೆ, ರಾಗಿ, ಸಾವೆ, ಮುಂಗಾರಿ ಜೋಳ, ಬಳ್ಳಿಶೇಂಗಾ, ಕುಸುಬೆ, ಗುರೆಳ್ಳು, ಜಿಣಬಿ, ಪುಂಡಿ ಮೊದಲಾದ ಬೆಳೆಗಳನ್ನು ಬೆಳೆಯುತ್ತಿದ್ದರು. ನಂತರದಲ್ಲಾದ ಭಾರೀ ಬದಲಾವಣೆಗಳಿಂದಾಗಿ ಈ ಬೆಳೆಗಳು ಕ್ರಮೇಣ ಕಡಿಮೆಯಾಗಿ ವಾಣಿಜ್ಯ ಕೇಂದ್ರಿತವಾದ ನೆಟೆಶೇಂಗಾ  ಪೈಜೋಳ, ಈರುಳ್ಳಿ, ಹತ್ತಿ, ಬತ್ತ, ಅಡಿಕೆ, ಹೂವು ಮೊದಲಾದ ಬೆಳೆಗಳು ವಿಜೃಂಭಿಸಿದವು. ಇದರಿಂದಾಗಿ ಹೈಬ್ರಿಡ್ ಆಹಾರದಿಂದ ಆರೋಗ್ಯದ ತೊಂದರೆಗಳು ಒಂದು ಕಡೆಯಾದರೆ ತಮ್ಮ ಪರಂಪರೆಯ ಜ್ಞಾನವನ್ನು ಕಳೆದುಕೊಂಡು ಪರಾಧೀನತೆ ಕಾಡಿದ್ದು ಮತ್ತೊಂದು ಕಡೆ, ಈ ನಡುವೆ ಹೈಬ್ರಿಡ್ ತಳಿಗಳ ಆಭ್ರಟದ ನಡುವೆಯೂ ದೇಶೀ ಬೆಳೆಗಳ ತಳಿಗಳು ಮತ್ತು

ಅವುಗಳ ಬೀಜಗಳು ಅವುಗಳನ್ನು ಉತ್ಪಾದನೆ ಮತ್ತು ಸಂರಣೆಯ ಕ್ರಮಗಳು ಅಲ್ಲಲ್ಲಿ ಚಾಲ್ತಿಯಲ್ಲಿರುವುದು ಇಲ್ಲಿ ಸಮಧಾನಕರ ಸಂಗತಿಯಾಗಿದೆ. ಈ ಕಾರಣದಿಂದಾಗಿ ಅಂಥ ಪಾರಂಪರಿಕ ಜ್ಞಾನಗಳನ್ನು ಗಮನಿಸಿ ಅವುಗಳನ್ನು ವ್ಯವಸ್ಥಿತ ರೀತಿಯಲ್ಲಿ ಸಂಗ್ರಹಿಸಿ, ವಿಶ್ಲೇಷಿಸಿ ಪುನರ್ ಅಳವಡಿಸಿಕೊಳ್ಳುವ ಬಗ್ಗೆ ಚಿಂತಿಸಬೇಕಿದೆ. ಈ ಹಿನ್ನೆಲೆಯಲ್ಲಿ ಚಿತ್ರದುರ್ಗ ಜಿಲ್ಲೆಯಲ್ಲಿರುವ ಮ್ಯಾಸನಾಯಕ ಬುಡಕಟ್ಟಿನಲ್ಲಿ ಪ್ರಚಲಿತವಿರುವ ಪಾರಂಪರಿಕ ಕೃಷಿ ವಿಧಾನಗಳನ್ನು ಪರಿಚಯಿಸುವುದು ಇಲ್ಲಿನ ಪ್ರಧಾನ ಉದ್ದೇಶವಾಗಿದೆ.

ಚಿತ್ರದುರ್ಗ ಜಿಲ್ಲೆ ಭೌಗೋಳಿಕ ವೈಶಿಷ್ಟ್ಯಗಳನ್ನು ಹೊಂದಿರುವಂತೆ ಐತಿಹಾಸಿಕ ಹಾಗೂ ಜನಾಂಗಿಕವಾದ ವೈಲಕ್ಷಣಗಳನ್ನು ಹೊಂದಿದೆ. ವಿಭಿನ್ನ ಸಂಸ್ಕೃತಿಯ ಸಮುದಾಯಗಳು ನೆಲೆನಿಂತಿದ್ದು ಮ್ಯಾಸಬೇಡ ಬುಡಕಟ್ಟು ಸಮುದಾಯ ಹಲವಾರು ಕಾರಣಗಳಿಂದ ಗಮನಾರ್ಹವಾದವುಗಳಾಗಿವೆ. ಈ ಸಮುದಾಯಗಳ ಮೂಲ,ವೃತ್ತಿ ಮತ್ತು ಚರಿತ್ರೆಗಳನ್ನು ಈ ಮುಂದಿನಂತೆ ತಿಳಿಯಬಹುದು.

ಮ್ಯಾಸಬೇಡರು : ಚಿತ್ರದುರ್ಗ ಜಿಲ್ಲೆಯಲ್ಲಿ ಅತೀ ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬರುವ ಒಂದು ಬುಡಕಟ್ಟು ಸಮುದಾಯ ಇದಾಗಿದೆ. ತೆಲುಗು ಭಾಷಿಕರಾದ ಇವರು ಆಂದ್ರದ ಶ್ರೀಶೈಲದ ಕಡೆಯಿಂದ ವಲಸೆ ಬಂದು ಚಳ್ಳಕೆರೆ, ಜಗಳೂರು, ಭೂಭಾಗಗಳಲ್ಲಿ ನೆಲೆನಿಂತು, ನಂತರ ಜಿಲ್ಲೆಯ ವಿವಿದೆಡೆಗೆ ವಿಸ್ತರಿಸಿಕೊಂಡಿದ್ದಾರೆ. ಮೂಲತಃ ಬೇಟೆ ವೃತ್ತಿಯಲ್ಲಿದ್ದು ನಂತರ ಪಶುಪಾಲಕರಾಗಿ ಜೀವನ ನಿರ್ವಹಿಸಿದ ಇವರು ಚಿತ್ರದುರ್ಗ ಭೂಭಾಗಕ್ಕೆ ಬಂದ ನಂತರ ಕೃಷಿಕರಾಗಿ ಬದಲಾಗಿದ್ದಾರೆ. ಅಂದಿನಿಂದ ಇಂದಿನವರೆಗೂ ಕೃಷಿಯಲ್ಲಿ ತಮ್ಮದೇ ಆದ ಕೃಷಿ ಪದ್ದತಿಗಳು ಮತ್ತು ನಾಟಿ ತಳಿಗಳನ್ನು ಉಳಿಸಿಕೊಂಡು ಬಂದಿರುವುದು ವಿಶೇಷವಾಗಿದೆ. ಬುಡಕಟ್ಟುಗಳ ಎಲ್ಲಾ ಲಕ್ಷಣಗಳೊಂದಿಗೆ ಬದುಕುತ್ತಿರುವ ಈ ಸಮುದಾಯ ತನ್ನ ಸಂಸ್ಕೃತಿಯ ಪಾವಿತ್ರ್ಯತೆಯನ್ನು ಕಾಪಾಡಿಕೊಳ್ಳುವ ಪ್ರಯತ್ನದ ಭಾಗವಾಗಿಯೇ ಕೃಷಿಜ್ಞಾನವು ಉಳಿದಿದೆ.

ಕೃಷಿ ಬೀಜಗಳ ಉತ್ಪತ್ತಿ ಮತ್ತು ಸಂರಕ್ಷಣಾ ವಿಧಾನಗಳು

ಇಂದು ಮ್ಯಾಸನಾಯಕರು ಇಂದು ಕೃಷಿಯನ್ನೇ ಪ್ರಧಾನ ವೃತ್ತಿಯನ್ನಾಗಿಸಿಕೊಂಡಿದ್ದು ವೈವಿಧ್ಯಮಯವಾದ ಕೃಷಿ ಪದ್ಧತಿಗಳನ್ನು ಅನುಸರಿಸುತ್ತಿರುವುದನ್ನು ಕಾಣಬಹುದಾಗಿದೆ. ಅದರಲ್ಲಿ ಮುಖ್ಯವಾಗಿ ಬುಡಕಟ್ಟುಗಳಿಗಿರುವ' ಪ್ರಧಾನ ಲಕ್ಷಣವಾದ ಮಡಿವಂತಿಕೆಯನ್ನು ಅನುಸರಿಸುತ್ತಿದ್ದು ಬದುಕಿನ ಎಲ್ಲಾ ಕ್ಷೇತ್ರಗಳಲ್ಲೂ ತಮ್ಮ ತನವನ್ನು ಉಳಿಸಿಕೊಂಡು ಬರುತ್ತಿರುವುದನ್ನು ಕಾಣಬಹುದು. ಇಂಥ ಬದುಕಿನ ಭಾಗವಾಗಿ ಆಧುನಿಕ ಪ್ರಹಾರಗಳ ನಡುವೆಯೂ ನಾಟಿ ತಳಿಗಳನ್ನು ಹಾಗೂ ಪ್ರಾಚೀನ ಹಾಗೂ ಸರಳ ಕೃಷಿ ಪದ್ದತಿಗಳನ್ನು ಅನುಸರಿಸುತ್ತಿದ್ದಾರೆ. ಉದಾ: ಈರುಳ್ಳಿ, ಹೂವು, ಶೇಂಗಾ, ಅಡಿಕೆ ಬೆಳೆಗಳ ಜೊತೆಗೆ ಪಾರಂಪರಿಕ ಬೆಳೆಗಳಾದ ರಾಗಿ, ನವಣೆ, ಸಾವೆ, ಸಜ್ಜೆ, ಮುಂಗಾರಿ ಜೋಳ, ಹೆಸರು, ಅವರೆ, ತೊಗರಿ, ಜಣಬಿ, ಪುಂಡಿ, ಕುಸುಬೆ, ಗುರೆಳ್ಳು, ಮೊದಲಾದ ನಾಟಿತಳಿಗಳ ಬೆಳೆಗಳನ್ನು ಬೆಳೆಯುತ್ತಿದ್ದಾರೆ. ಆ ಬೆಳೆಗಳ ಬೀಜಗಳ ಉತ್ಪಾದನೆ ಮತ್ತು ಸಂರಕ್ಷಣೆಯ ಕ್ರಮಗಳು ತುಂಬಾ

ವಿಶಿಷ್ಟವಾಗಿದ್ದು ಅವುಗಳನ್ನು ಪ್ರತ್ಯೇಕವಾಗಿ ಹಾಗೂ ಸಂಕ್ಷಿಪ್ತವಾಗಿ ಈ ಮುಂದಿನಂತೆ ಗಮನಿಸಬಹುದಾಗಿದೆ.

ಸಜ್ಜೆ : ಮ್ಯಾಸ ನಾಯಕರಲ್ಲಿ ಪ್ರಧಾನವಾದ ಹಾಗೂ ಪವಿತ್ರವಾದ ಆಹಾರ ಧಾನ್ಯಗಳಲ್ಲಿ ಸಜ್ಜೆಯೂ ಕೂಡ ಒಂದು. ಈ ಸಮುದಾಯಗಳ ದೇವರಿಗೆ ನೈವೇದ್ಯ ಮಾಡಲು ಸಜ್ಜೆ ಅನ್ನಕ್ಕೆ ಅತೀ ಮಹತ್ವದ ಸ್ಥಾನವಿದೆ. ಈ ಕಾರಣದಿಂದಾಗಿಯೇ ಹೈಬ್ರಿಡ್ ಕಾಲದಲ್ಲಿಯೂ ಈ ಧಾನ್ಯ ಉಳಿದು ಬರಲು ಸಾಧ್ಯವಾಗಿದೆ. ಅನ್ನ, ರೊಟ್ಟಿ, ಕಡಬು, ಇತ್ಯಾದಿ ಆಹಾರ ಪದಾರ್ಥಗಳ ತಯಾರಿಕೆಗೆ ಬರುವ ಸಜ್ಜೆಕಾಳುಗಳಲ್ಲಿ, ಬೀಜಗಳನ್ನು ಆರಿಸುವ ಕ್ರಮ ಅತ್ಯಂತ ಸುಲಭವಾಗಿದ್ದು ಬೆಳೆದು ತೆನೆಬಿಟ್ಟ ಸಜ್ಜೆ ಬೆಳೆಯಲ್ಲಿ ದೃಢವಾದ ತೆನೆಗಳನ್ನು ಆಯ್ದು ಮುರಿದು ಅವುಗಳನ್ನು ಒಂದು ಚೀಲದಲ್ಲಿ ಕಟ್ಟಿಡುತ್ತಾರೆ. ಸಜ್ಜೆ ಬೀಜಗಳಿಗೆ ಬಹು ಬೇಗ ಹುಳ ಬೀಳುವ ಸಾಧ್ಯತೆಗಳಿದ್ದು ತೆನೆ ಸಮೇತ ಇಡುವುದರಿಂದ ಹುಳಗಳನ್ನು ತಪ್ಪಿಸಬಹುದು. ಬಿತ್ತುವ ದಿನಗಳಲ್ಲಿ ತೆನೆಯಿಂದ ಕಾಳನ್ನು ಬೇರ್ಪಡಿಸಿ ಬೀಜದ ಮುಖತೊಳೆದು (ಬೀಜವನ್ನು ನೀರಲ್ಲಿ ತೊಳೆದು) ಬಿತ್ತುತ್ತಾರೆ. ಈ ಬೀಜಗಳ ಸಂರಕ್ಷಣೆಗೆ ಯಾವುದೇ ವಿಶೇಷವಾದ ಕೀಟನಾಶಕಗಳನ್ನು ಬಳಸುವುದಿಲ್ಲ.

ನವಣೆ: ಚಿತ್ರದುರ್ಗ ಭಾಗದಲ್ಲಿ ಮನುಷ್ಯರಿಗೆ ನವಣೆ ಅನ್ನ, ದನಗಳಿಗೆ ನವಣೆ ಹುಲ್ಲು ಬಹು ಜನಪ್ರಿಯ. ಪ್ರಾಚೀನ ಕಾಲದಿಂದಲೂ ಈ ನವಣೆಯನ್ನು ಹೆಚಿನ ಪ್ರಮಾಣದಲ್ಲಿ ರೈತರು ಬೆಳೆಯುತ್ತಿದ್ದರು. ಈ ಸಂದರ್ಭಗಳಲ್ಲಿ ಸಿಕ್ಕ ಅನುಭವದ ಪ್ರಕಾರ ಈ ಬೀಜಗಳಿಗೆ ಯಾವುದೇ ರೀತಿಯ ಕೀಟಬಾಧೆ ಇರುವುದಿಲ್ಲ, ಬೆಳೆದ ನವಣೆಯನ್ನು ಗಾಳಿಗೆ ತೂರಿ ಗಟ್ಟಿಯಾದುದನ್ನು ಆರಿಸಿ ಬೀಜವಾಗಿ ಬಳಸುವುದುಂಟು.

ರಾಗಿ : ಈ ಭಾಗದ ರಾಗಿಯ ತಳಿಗಳು ಅತ್ಯಂತ ಪ್ರಾಚೀನ ಹಾಗೂ ವೈವಿಧ್ಯಮಯವಾಗಿವೆ.. ಈ ಬೀಜಗಳಿಗೆ ಕೀಟಬಾಧೆ ಕಡಿಮೆ ಇದ್ದು ಸಾಮಾನ್ಯ ಬೆಳೆಯಲ್ಲಿ ದೃಢವಾದ ತೆನೆಗಳನ್ನು ಆಯ್ದು ಅವುಗಳಿಂದ ಕಾಳುಗಳನ್ನು ಬೇರ್ಪಡಿಸಿ ಬಿತ್ತನೆ ಬೀಜಗಳಾಗಿ ಬಳಸುವುದುಂಟು. ವಿಶೇಷವೆಂದರೆ ಬೀಜ ಬಿತ್ತುವಾಗ ಬಿತ್ತಬೇಕಾದ ಬೀಜಗಳಿಗೆ ಈಸರಬಳ್ಳಿ ಮತ್ತು ಬೆಳ್ಳುಳ್ಳಿಯನ್ನು ಹರಿದು ಹಚ್ಚಿ ಬಿತ್ತುತ್ತಾರೆ. ಇದರಿಂದ ಬೀಜಗಳು ಸರಿಯಾದ ರೀತಿಯಲ್ಲಿ ಮೊಳಕೆ ಒಡೆದು ಯಾವುದೇ ಬೇರು ರೋಗಗಳಿಲ್ಲದಂತೆ ಮಾಡಲು ಅನುಕೂಲವಾಗುತ್ತದೆ ಎಂಬ ನಂಬಿಕೆಯಿದೆ.

ಸಾವೆ : ಸಾವೆ ಅನ್ನ ಈ ಭಾಗದ ಬುಡಕಟ್ಟು ಜನರ ಜನಪ್ರಿಯ ಆಹಾರವಾಗಿತ್ತು. ಈಗಲೂ ಈ ಬೆಳೆ ಪ್ರಚಲಿತದಲ್ಲಿದ್ದು ಕೀಟಭಾದೆಗಳಿಂದ ದೂರವಿರುವಂತದ್ದಾಗಿದೆ. ಬೀಜಗಳ ಉತ್ಪಾದನೆ ಮತ್ತು ಸಂರಕ್ಷಣೆ ಬಗ್ಗೆ ವಿಶೇಷ ಕ್ರಮಗಳು ಇಲ್ಲವಾದರೂ ಈ ತಳಿಗಳೇ ಅಂಥ ಶ್ರೀಮಂತವಾದ ಫಲವಂತಿಕೆಯ ಗುಣ ಹಾಗೂ ರಕ್ಷಣಾತ್ಮಕ ಗುಣವನ್ನು ಮೈಗೂಡಿಸಿಕೊಂಡಿವೆ. ಸಾಮಾನ್ಯವಾಗಿ ಬೆಳೆದ ಸಾವೆ ಕಾಳಿನಲ್ಲಿ ಗಟ್ಟಿಯಾದುದನ್ನು ಬೀಜವಾಗಿ ಬಿತ್ತುವುದುಂಟು. ಈ ಕಾಳುಗಳ ಬೀಜಗಳನ್ನು ಬಟ್ಟೆ ಚೀಲದಲ್ಲಿ ಭದ್ರವಾಗಿ ಕಟ್ಟಿ ಬಿತ್ತನೆ ಮಾಡುವವರೆಗೂ ಇಡುತ್ತಾರೆ.

ಜೋಳ : ಇಲ್ಲಿನ ಭೂಪ್ರದೇಶದ ಬುಡಕಟ್ಟು ಸಮುದಾಯಗಳು ಪಾರಂಪರಿಕವಾಗಿ ಬಳಸುತ್ತಿದ್ದ ಜೋಳದ ತಳಿಯೆಂದರೆ ಮುಂಗಾರಿನ ಜೋಳ. ಈ ಬೆಳೆದ ದೃಢವಾದ ತೆನೆಗಳನ್ನು ತೆಗೆದು ಒಂದು ಬಟ್ಟೆ ಚೀಲದಲ್ಲಿ ಕಟ್ಟಿಡುತ್ತಾರೆ. ಇವುಗಳಿಗೆ ಹುಳುಗಳು ಹೆಚ್ಚು ಬಾಧಿಸುವುದರಿಂದ ಆಗಾಗ ಬಿಸಿಲಿನಲ್ಲಿ ಒಣಗಿಸುತ್ತಾರೆ. ಇಂಥ ಎಚ್ಚರ ಬಿತ್ತುವ ಕಾಳದವರೆಗೂ ವಹಿಸಬೇಕಾಗುತ್ತದೆ.

ಅಲಸಂದೆ ಮತ್ತು ಹೆಸರು : ಈ ಎರಡು ದ್ವಿದಳ ಧಾನ್ಯಗಳು ಸಾರಿಗೆ ಬಳಸುವಂತಹವುಗಳಾಗಿದ್ದು, ಇವುಗಳನ್ನು ಕಾಯಿ ಸಮೇತ ದೃಢವಾದ ಕಾಯಿಗಳನ್ನು ತೆಗೆದು ಬಿತ್ತುವ ಸಮಯದಲ್ಲಿ ಕಾಲನ್ನು ಬೇರ್ಪಡಿಸಿ ಬಿತ್ತುವುದುಂಟು. ಹುಳಗಳ ಬಾಧೆ ಇವುಗಳಿಗೂ ಇರುತ್ತದೆ. ಆದರೂ ಇರುವ ಕಾಳಿನಲ್ಲೇ ಗಟ್ಟಿಕಾಳುಗಳನ್ನು ಬಿತ್ತುತ್ತಾರೆ.

ತೊಗರಿ : ತೊಗರಿಯ ನಾಟಿ ತಳಿಗಳು ಈ ಭಾಗದಲ್ಲಿ ಹೆಚ್ಚು ಬಳಕೆಯಲ್ಲಿದ್ದು ತೊಗರಿ ಕಾಳುಗಳಲ್ಲಿ ಗಟ್ಟಿಯಾದುದನ್ನು ಹೊರತೆಗೆದು ಅವುಗಳಿಗೆ ಕೆಂಪು ಮಣ್ಣನ್ನು ನೀರಿನ ಜೊತೆ ಬೆರೆಸಿ ಬೀಜಗಳಿಗೆ ಹಚ್ಚಿ ಹುಳಗಳಿಂದ ಸಂರಕ್ಷಿಸುವ ಕ್ರಮವಿದ್ದು, ಇಂಥಾ ಬೀಜಗಳನ್ನು ಚೀಲದಲ್ಲಿ ಕಟ್ಟಿಟ್ಟು ಹಾಗಾಗ ಗಮನಹರಿಸುವುದರ ಮುಖಾಂತರ ಎಚ್ಚರ ವಹಿಸಬೇಕಾಗುತ್ತದೆ.

ಅವರೆ: ಅವರೆ ಕಾಳುಗಳಲ್ಲಿ ದೃಢವಾಗಿ ಬೆಳೆದ ತೂತಿಲ್ಲದ ಬೀಜಗಳನ್ನು ತೊಳೆದು ಆ ಬೀಜಗಳಿಗೆ ಆಡಿನ ಮೂತ್ರ ಮತ್ತು ಸುಣ್ಣವನ್ನು ಸವರಿ ಬಿಸಿಲಲ್ಲಿ ಒಣಗಿಸಿ ಕಟ್ಟಿಡಬೇಕು. ಬಿತ್ತುವವರೆಗೂ ಆಗಾಗ ಬಿಸಿಲಲ್ಲಿ ಒಣಗಿಸಿ ಹುಳ ಬೀಳದಂತೆ ಎಚ್ಚರವಹಿಸಬೇಕು.

ಬದನೆ: ಹಣ್ಣಾದ ಬದನೆಕಾಯಿಯಿಂದ ಬೀಜಗಳನ್ನು ತೆಗೆದು ಆ ಬೀಜಗಳನ್ನು ತೊಳೆದು ಅವುಗಳಿಗೆ ಬೂದಿಯ ಮಿಶ್ರಣವನ್ನು ಮಾಡಿ ಚನ್ನಾಗಿ ಒಣಗಿಸಿ ನಂತರ ಒಂದು ಬಟ್ಟೆಯಲ್ಲಿ ಕಟ್ಟಿಡುತ್ತಾರೆ.

ಮೆಣಸಿನ ಬೀಜ : ಮೆಣಸಿನ ಗಿಡಗಳಲ್ಲಿ ಸಮೃದ್ಧವಾಗಿ ಬಿಟ್ಟ ಮೆಣಸಿನ ಹಣ್ಣುಗಳನ್ನು ತೆಗೆದಿಟ್ಟು ಅದರಲ್ಲಿನ ಬೀಜಗಳನ್ನು ಹೊರತೆಗೆದು ಬೂದಿ ಹಚ್ಚಿ ಬಳ್ಳಿಯಲ್ಲಿ ಕಟ್ಟಿಡುವುದು.

ಬೀಜಸಂರಕ್ಷಕ ಕ್ರಮಗಳ ವೈಜ್ಞಾನಿಕ ವಿಶ್ಲೇಷಣೆ

ಮೇಲೆ ವಿವರಿಸಿದಂತೆ ಈ ಭಾಗದ ರೈತರ ಪ್ರಾಚೀನ ಕೃಷಿಪದ್ಧತಿಗಳಲ್ಲಿ ಕೃಷಿ ಬೀಜಗಳನ್ನು ಉತ್ಪಾದಿಸುವ ಕ್ರಮಗಳು ಸಾಮಾನ್ಯವಾಗಿದ್ದು, ಬೀಜಗಳನ್ನು ವಿಶೇಷವಾಗಿ ಬೆಳೆಯುವ ಪದ್ಧತಿಗಳು ಇಲ್ಲ. ಬದಲಿಗೆ ಸಹಜ ರೀತಿಯಲ್ಲಿಯೇ ಬೆಳೆದ ಕಾಳುಗಳಿಂದಲೇ ಗಟ್ಟಿಯಾದ, ಶಕ್ತಿಶಾಲಿ ಎನಿಸುವಂತಹ ಬೀಜಗಳನ್ನು ಆರಿಸಿ ಬಿತ್ತಲು ಬಳಸಲಾಗುತ್ತದೆ. ಉಳಿದಂತೆ ಬಿತ್ತನೆ ಬೀಜಗಳೆಂದು ಆರಿಸಿದ ಬೀಜಗಳನ್ನು ಹುಳುಗಳಿಂದ ಸಂರಕ್ಷಿಸಲು ಮುಖ್ಯವಾಗಿ/ ಪ್ರಧಾನವಾಗಿ ಕೆಂಪು ಮಣ್ಣು, ಬೂದಿ, ಉಪ್ಪು, ಹರಿಶಿಣ, ಸುಣ್ಣ, ಚವಳುಮಣ್ಣು, ಬೆಳ್ಳುಳ್ಳಿ ಈಸರಬಳ್ಳಿ, ಆಡಿನ ಮೂತ್ರ, ಇವೇ ಮೊದಲಾದ ವಸ್ತುಗಳನ್ನು ಬಳಸಲಾಗುತ್ತದೆ. ಇವು ರೈತರಿಗೆ ಸುಲಭವಾಗಿ ದೊರೆಯುವಂತಹವುಗಳಾಗಿದ್ದು, ಇವುಗಳನ್ನು ತಮ್ಮ ಪರಂಪರೆಯ ಕೃಷಿಚಟುವಟಿಕೆಗಳ ದೀರ್ಘ ಅನುಭವದಿಂದ ಕಂಡುಕೊಳ್ಳಲಾಗಿದೆ. ಇವರ್‍ಯಾರು ಈ ವಸ್ತುಗಳಲ್ಲಿರುವ ರೋಗನಿರೋಧಕ / ಕೀಟನಾಶಕ' ಗುಣಗಳ ಬಗ್ಗೆ ಪ್ರಯೋಗಶಾಲೆಗಳಲ್ಲಿ ತಿಳಿದಿಲ್ಲ. ಆದರೆ ಅವುಗಳನ್ನು ಈಗಿನ ವೈಜ್ಞಾನಿಕ

ಪ್ರಯೋಗಗಳಿಗೆ ಒಳಪಡಿಸಿದರೆ ಅವುಗಳ ನಿಜವಾದ ಸತ್ಯಗಳು ದೊರೆಯುತ್ತವೆ. ಇವರು ಬಳಸುವ ಈ ಪರಿಕರಗಳಲ್ಲಿ ಬೀಜಗಳನ್ನು ಹುಳುಗಳಿಂದ ಸಂರಕ್ಷಿಸುವಂತಹ ಶಕ್ತಿಗಳು ಏನಿವೆ ಎಂಬುದನ್ನು ಈಗಾಗಲೇ ಅನೇಕ ಸಸ್ಯಶಾಸ್ತ್ರಜ್ಞರು ಪತ್ತೆ ಹಚ್ಚಿದ್ದು, ಅವುಗಳಲ್ಲಿ ಕೆಲವನ್ನು ಇಲ್ಲಿ ವಿವರಿಸಬಹುದಾಗಿದೆ,

ಬೂದಿ : ಅನೇಕ ರೀತಿಯ ಬೀಜಗಳ ಸಂರಕ್ಷಣೆಗೆ ಬೂದಿಯನ್ನು ಪ್ರಧಾನವಾಗಿ ಬಳಸುತ್ತಿದ್ದು. ಇದರಲ್ಲಿ ಬೀಜಗಳ ರಕ್ಷಣೆಗೆ ಅಗತ್ಯವಾಗಿರುವ ಮೈಕ್ರೋ ಹಾಗೂ ಮೈಕ್ರೋ ನ್ಯೂಟ್ರಿಯನ್ಸ್‌ಗಳು ಇರುತ್ತವೆ. ಅಷ್ಟೇ ಅಲ್ಲದೆ ಮೈಕ್ರೋ ಆರ್ಗ್ಯಾನಿಸಂಗಳು ನೂರಕ್ಕೆ ನೂರರಷ್ಟು ಇರುವುದಿಲ್ಲ. ಇದು ಬೀಜಗಳು ಕೆಡದಂತೆ, ಹುಳುಗಳು ಮುಟ್ಟದಂತೆ ಸಹಕಾರಿಯಾಗುತ್ತದೆ.

ಸುಣ್ಣ : ಇದರಲ್ಲಿ ಕೂಲ್‌ಕಂಟೆಂಟ್ ಜಾಸ್ತಿ ಇದ್ದು, ಬೀಜಗಳು ಕೆಡದಂತೆ ನಿರ್ವಹಿಸುವ ಗುಣವಿರುತ್ತದೆ. ಸುಣ್ಣದಲ್ಲಿರುವ ಬಿಳಿಬಣ್ಣ ಬಿಸಿಲನ್ನು ಹೆಚ್ಚು ಸ್ವೀಕರಿಸದೇ ಇರುವುದರಿಂದ, ಇದನ್ನು ಬೀಜಗಳಿಗೆ ಸವರಿದರೆ ಆ ಬೀಜಗಳಿಗೆ ತಂಪು ಸ್ಥಿತಿಯನ್ನು ತಂದು ಕೊಡುತ್ತದೆ.

ಚವಳುವಣ್ಣು : ಹಳ್ಳದ ದಂಡೆಗಳಲ್ಲಿ ಸಿಗುವ ಈ ಚವಳುವಣ್ಣು ಡಿಟರ್‌ಜೆಂಟನ ಗುಣಗಳನ್ನು ಹೊಂದಿರುತ್ತದೆ. ಜನರು ಸಾಮಾನ್ಯವಾಗಿ ಬಟ್ಟೆ ಹಾಗೂ ತಲೆ ತೊಳೆಯಲು ಇದನ್ನು ಬಳಸುತ್ತಾರೆ. ಇದರಲ್ಲಿ ಮುಖ್ಯವಾಗಿ ಆಸಿಡಿಕ್ ಜಾಸ್ತಿ ಇದ್ದು, ಸೋಡಿಯಂ ಕೂಡ ಹೆಚ್ಚಿನ ಪ್ರಮಾಣದಲ್ಲಿರುತ್ತದೆ. ಈ ಸೋಡಿಯಂ ಮತ್ತು ಆಸಿಡಿಕ್ ಅಂಶಗಳು ಬೀಜಗಳಿಗೆ ಅಪಾಯ ತಂದೊಡ್ಡುವ ಮೈಕ್ರೋ ಆರ್ಗ್ಯಾನಿಸಂಗಳನ್ನು ಕೊಲ್ಲುತ್ತವೆ. ಇದರಿಂದ ಬೀಜಗಳ ರಕ್ಷಣೆ ಸಾಧ್ಯವಾಗುತ್ತದೆ..

ಕೆಮ್ಮಣ್ಣು : ಇದರಲ್ಲಿಯೂ ಕೂಡ ಮೈಕ್ರೋ ಆರ್ಗ್ಯಾನಿಸಂಗಳು ಹಾಗೂ ಪೋರೋಸ್ಯಾಟಿಕ್ ಅಂಶವೂ ಕಡಿಮೆ ಪ್ರಮಾಣದಲ್ಲಿರುತ್ತದೆ. ಹಾಗೆಯೇ ಈ ಕೆಂಪುಮಣ್ಣು ಆಸಿಡಿಕ್ ನಿಯಂತ್ರಣವನ್ನು ಹೊಂದಿರುತ್ತದೆ, ಈ ಮಣ್ಣಿನ ರಂಧ್ರಗಳು ಅತೀ ಸೂಕ್ಷ್ಮವಾಗಿರುವುದರಿಂದ ಬೀಜಗಳ ರಕ್ಷಣೆಗೆ ಸಹಕಾರಿಯಾಗಲಿದೆ.

ಹೀಗೆ ಪಾರಂಪರಿಕ ಕೃಷಿ ಪದ್ಧತಿಗಳಲ್ಲಿ ಬಳಸಲಾಗುತ್ತಿದ್ದ ಬೀಜ ಸಂರಕ್ಷಕ ವಸ್ತುಗಳಲ್ಲಿ ಬೀಜಗಳ ರಕ್ಷಣೆಗೆ ಬೇಕಾಗುವ ಜೀವರಕ್ಷಕ ಗುಣಗಳನ್ನು ಹೊಂದಿದ್ದರಿಂದಲೇ ಅಂದಿನಿಂದ ಇಂದಿನವರೆಗೂ ಅನೇಕ ಆರ್ಘಟಗಳ ನಡುವೆಯೂ ಉಳಿದು ಬಂದಿವೆ.

ಬೀಜ ಸಂರಕ್ಷಕ ಸಂಬಂಧಿ ನಂಬಿಕೆ– ಸಂಪ್ರದಾಯ ಆಚರಣೆಗಳು

ಪ್ರಾಚೀನ ಕೃಷಿಕರು ತಮ್ಮ ಪ್ರತಿ ಕೆಲಸ ಕಾರ್ಯಗಳನ್ನು ದೇವರ ನೆರಳಲ್ಲಿ ನಡೆಸುತ್ತಿದ್ದುದು ಮತ್ತು ನಂಬಿಕೆಗಳೊಂದಿಗೆ ತಮ್ಮ ಬದುಕನ್ನು ನಿರ್ವಹಿಸುತ್ತಿದ್ದುದರ ಪರಿಣಾಮ ಆ ಛಾಯೆ ಅವರ ಕೃಷಿ ಚಟುವಟಿಕೆಗಳಿಗೂ ವ್ಯಾಪಿಸಿದೆ. ಈ ಹಿನ್ನೆಲೆಯಲ್ಲಿ ಪ್ರಾಚೀನ ಕೃಷಿ ಪರಂಪರೆಯಲ್ಲಿ ಬೀಜಗಳ ಸಂರಕ್ಷಣೆಗಾಗಿ ಅವರು ನಂಬಿಕೊಂಡ ನಂಬಿಕೆ, ಸಂಪ್ರದಾಯ, ಆಚರಣೆಗಳು ಹಲವಾರು. ಅವುಗಳಲ್ಲಿ ಕೆಲವನ್ನು ಈ ಕೆಳಕಂಡಂತೆ ಪಟ್ಟಿ ಮಾಡಬಹುದು.

೧. ಅಮವಾಸೆ ದಿನದ ಬಿಸಿಲಲ್ಲಿ ಬಿತ್ತನೆ ಬೀಜಗಳನ್ನು ಒಣಗಿಸಿದರೆ ಹುಳುಗಳ ಬಾಧೆ ತಪ್ಪುತ್ತದೆ.

೨. ತಮ್ಮ ಮನೆದೇವರ ಪೂಜೆಮಾಡಿ ಅದರ ಅದರ ತೀರ್ಥವನ್ನು ಬೀಜಗಳಿಗೆ ಲೇಪಿಸುವುದರಿಂದ ಹುಳುಗಳು ಬೀಳುವುದಿಲ್ಲ.

೩. ನವಣೆ ಮತ್ತಿತರ ಕೆಲವು ಬೀಜಗಳನ್ನು ಬಿತ್ತಿದ ದಿನಗಳಲ್ಲಿ ಮನೆಯಲ್ಲಿ ಯಾರೂ ಸ್ನಾನ ಮಾಡುವಂತಿಲ್ಲ. ಹಾಗೆಯೇ ಮನೆಯಲ್ಲಿ ಎಣ್ಣೆಯಲ್ಲಿ ಉರಿಯುವಂತ ಯಾವುದೇ ಆಹಾರ ಪದಾರ್ಥಗಳನ್ನು ತಯಾರಿಸುವಂತಿಲ್ಲ. ಹಾಗೇನಾದರೂ ಮಾಡಿದ್ದಲ್ಲಿ ಬಿತ್ತಿದ ಬೀಜಗಳು ಸರಿಯಾಗಿ ಮೊಳಕೆ ಒಡೆಯುವುದಿಲ್ಲ.

೪. ಶೇಂಗಾ ಮತ್ತಿತರ ಬೀಜಗಳನ್ನು ಬಿತ್ತಿದ ದಿನ ಮನೆಯಲ್ಲಿ ಆ ಶೇಂಗಾ ಬೀಜಗಳನ್ನು ಹೆಂಚಲ್ಲಿ ಉರಿಯುವಂತಿಲ್ಲ.

ಇಂಥ ಹಲವಾರು ನಂಬಿಕೆ-ಸಂಪ್ರದಾಯ ಆಚರಣೆಗಳು ಸಮುದಾಯದಲ್ಲಿ ಚಾಲ್ತಿಯಲ್ಲಿದ್ದು ಇವುಗಳಲ್ಲಿ ಅನೇಕ ವೈಜ್ಞಾನಿಕ ಸತ್ಯಗಳು ಅಡಗಿವೆ.

ಒಟ್ಟಾರೆ ಪ್ರಾಚೀನ ಕೃಷಿ ಪರಂಪರೆಯ ರೈತರು ಈ ರೀತಿಯಾದ ತಮ್ಮದೇ ಆಗಿರುವಂತಹ ಕೃಷಿ ಪದ್ಧತಿಗಳನ್ನು ಅಳವಡಿಸಿಕೊಂಡು ನೆಮ್ಮದಿಯ ಜೀವನ ನಿರ್ವಹಿಸಿದ್ದಾರೆ. ಇವರ ಪ್ರಮುಖ ಬಂಡವಾಳ ವಿಶಿಷ್ಟವಾದ ತಳಿಗಳು. ಇವರು ಬಳಸುತ್ತಿದ್ದ ಈ ನಾಟಿ ತಳಿಗಳ ಬೀಜಗಳೇ ಒಂದು ರೀತಿಯಲ್ಲಿ ರೋಗನಿರೋಧಕ ಲಕ್ಷಣಗಳನ್ನು ಮೈಗೂಡಿಸಿಕೊಂಡಿದ್ದವು. ಜೊತೆಗೆ ಅವುಗಳ ಸಮರಕ್ಷಣೆಗೆ ಸುಲಭವಾದ ಮಾರ್ಗೋಪಾಯಗಳು ಇದ್ದವು. ಇವುಗಳ ಜೊತೆ ಬದುಕುತ್ತಿದ ರೈತ ಸ್ವತಂತ್ರ ರೈತಾಪಿಯಾಗಿದ್ದು ಆದರೆ ಬದಲಾದ ಕಾಲದಿಂದಾಗಿ ಪ್ರಾಚೀನ ನಾಟಿತಳಿಗಳನ್ನು ಹಾಗೂ ಪಾರಂಪರಿಕ ಕೃಷಿ ಪದ್ಧತಿಗಳನ್ನು ಕಳೆದುಕೊಂಡು ಬಹುರಾಷ್ಟ್ರೀಯ ಕಂಪನಿಗಳಿಗೆ ಅಧೀನವಾದ ಕಾರಣದಿಂದ ರೈತ ಪರಾತಂತ್ರ ಸ್ಥಿತಿ ತಲುಪಿ, ಆರ್ಥಿಕವಾಗಿ ದುಸ್ಥಿತಿಯನ್ನು ಕಂಡು ಆರೋಗ್ಯ ಮತ್ತು ಆಯುಷ್ಯಗಳನ್ನು ಕಳೆದು ಕಂಡು ಆ ಮೂಲಕ ಕೃಷಿಕಾರ್ಯದಿಂದಲೇ ದೂರವಾಗುವ ಮನಸ್ಥಿತಿಯಲ್ಲಿದ್ದಾನೆ. ರೈತನ ಈ ಎಲ್ಲಾ ಸಮಸ್ಯೆಗಳಿಗೆ ಪರಿಹಾರವೆಂದರೆ ಅವರ ಪಾರಂಪರಿಕ ತಲಿಗಳು ಮತ್ತು ಕೃಷಿ ಪದ್ಧತಿಗಳನ್ನು ಉಳಿಸಿಕೊಳ್ಳುವುದು, ಪುನರುಜ್ಜೀವ ಅಗತ್ಯವೆಂದು ಹೇಳಬೇಕಾಗುತ್ತದೆ.

ಪರಾಮರ್ಶನ ಸಾಹಿತ್ಯ ಮತ್ತು ಕ್ಷೇತ್ರ ಕಾರ್ಯದ ವಿವರಗಳು

೧. ವಂದನಾಶಿವ(ಮೂಲ),ಮಾದವ ಐತಾಳ(ಅನು), ಬತ್ತದ ಚಿಲುಮೆ,೨೦೦೫, ಪ್ರಸಾರಾಂಗ, ಕನ್ನಡ ವಿ.ವಿ, ಹಂಪಿ
೨. ಚಕ್ಕರೆ ಶಿವಶಂಕರ(ಸ'ಂ),ಜನಪದ ತಂತ್ರಜ್ಞಾನ,೨೦೦೩,ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು
೩. ಎಂ.ಜಿ. ಈಶ್ವರಪ್ಪ, ಚಿತ್ರದುರ್ಗ ಜಿಲ್ಲೆಯ ವ್ಯವಸಾಯ ಜಾನಪದ,೧೯೯೫,ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು
೪. ಕರ್ನಾಟಕದ ಬುಡಕಟ್ಟುಗಳು ಸಂ-೧.ಸಂ-೨, ಪ್ರ.ಸಂ: ಎಚ್.ಜೆ.ಲಕ್ಕಪ್ಪಗೌಡ,೧೯೯೮, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು
೫. ಬಸವರಾಜ ನೆಲ್ಲೀಸರ(ಸಂ),ಜಾನಪದ ಮತ್ತು ಪೂರಕ ಕ್ಷೇತ್ರಗಳು,೧೯೯೧,ಕನ್ನಡ ಅಧ್ಯಯನ ವಿಭಾಗ, ಕುವೆಂಪು ವಿಶ್ವವಿದ್ಯಾನಿಲಯ,ಶಂಕರಘಟ್ಟ.
೬. ಎಚ್.ಜೆ.ಲಕ್ಕಪ್ಪಗೌಡ(ಸಂ), ವಿಶಿಷ್ಟ ಜಾನಪದ,೧೯೯೦, ಮೈಸೂರು ವಿಶ್ವವಿದ್ಯಾಲಯ ಸ್ನಾತಕೋತ್ತರ ಕೇಂದ್ರ, ಬಿ.ಆರ್.ಪಿ
೭. ಗಂಗಾನಾಯ್ಕ್, ಲಂಬಾಣಿಗರು, ೨೦೦೮, ಕನ್ನಡಭಾರತಿ, ಕುವೆಂಪು ವಿಶ್ವವಿದ್ಯಾಲಯ,ಶಂಕರಘಟ್ಟ

೮. ಮ್ಯಾಸ ಬೇಡಸಮುದಾಯದ ಹಿರಿಯ ಮಹಿಳೆ ಶ್ರೀಮತಿ ಪಾಲಮ್ಮ, ನಲಗೇತನಹಟ್ಟಿ, ಚಳ್ಳಕೆರೆ ತಾ.,ಚಿತ್ರದುರ್ಗ ಜಿಲ್ಲೆ ಇವರ ಸಂದರ್ಶನದಿಂದ ಪಡೆದ ಮಾಹಿತಿ
೯. ಡಾ. ಬಿ.ತಿಪ್ಪೇಸ್ವಾಮಿ, ಪ್ರಾಧ್ಯಾಪಕರು, ಸೂಕ್ಷ್ಮಾಣು ಜೀವಶಾಸ್ತ್ರ ವಿಭಾಗ, ಕುವೆಂಪು ವಿಶ್ವವಿದ್ಯಾನಿಲಯ,ಶಂಕರಘಟ್ಟ ಇವರ ಸಂದರ್ಶನದಿಂದ ಪಡೆದ ಮಾಹಿತಿ
೧೦. ಡಾ. ಜಿ.ಕೆ.ಪ್ರೇಮ, ಕನ್ನಡ ಅಧ್ಯಾಪಕಿ, ಸಹ್ಯಾದ್ರಿ ಕಲಾ ಕಾಲೇಜು, ಶಿವಮೊಗ್ಗ ಇವರ ಸಂದರ್ಶನದಿಂದ ಪಡೆದ ಮಾಹಿತಿ
೧೦. ರಾಘವೇಂದ್ರ ಆರ್, ಚಿತ್ರದುರ್ಗ ಜಿಲ್ಲೆಯ ಕೈಗಾರಿಕಾ ಚಿತ್ರ(ಲೇಖನ)ಇದರಲ್ಲಿ :ತಿತಿತಿ.ಛುಙುಚಿಚಿಡಿಚಿಜಣಔರಿ.ಛಿಥು
೧೧. ಸಿ.ಸೋಮಶೇಖರ್, ಚಿತ್ರದುರ್ಗಜಿಲ್ಲೆಯ ಜನಜೀವನ-ಸಂಸ್ಕೃತಿ-೩(ಲೇಖನ)ಇದರಲ್ಲಿ:ತಿತಿತಿ,ಚಿಟಿಚಿಜಚಿ.ಟಿಜಾ
೧೨. ಜೆ.ಎಸ್. ಚನ್ನೇಶ್,ಜನಪದ ಆಚರಣೆಗಳು ಮತ್ತು ಕೃಷಿತಂತ್ರಜ್ಞಾನ(ಲೇಖನ),ಇದರಲ್ಲಿ:ಜಾನಪದ ಕರ್ನಾಟಕ-೫, ಸಂಪುಟ-೩,ಸಂಚಿಕೆ-೧,ಕನ್ನಡ ವಿಶ್ವವಿದ್ಯಾಲಯ,ಹಂಪಿ

# ಮ್ಯಾಸ ಬೇಡರ ಮಳೆ ಜ್ಞಾನ

ಮಳೆ ನೈಸರ್ಗಿಕವಾದ ಒಂದು ಪ್ರಕ್ರಿಯೆಯಾಗಿದ್ದು ಮನುಷ್ಯನ ಸಾಮಾನ್ಯ ತರ್ಕಕ್ಕೆ ದಕ್ಕದಿರುವ ಸಂಗತಿಯಾಗಿದೆ. ಪ್ರಕೃತಿಯ ಜೀವ ಸಂಕುಲದಲ್ಲಿ ಎಲ್ಲಾ ಜೀವಿಗಳಿಗೂ ಮಳೆ ಜೀವನಾಧಾರ.ಅದರಲ್ಲೂ ಮೂಲತಃ ಅಲೆಮಾರಿಯಾಗಿದ್ದ ಮನುಷ್ಯ ಭೂಮಿಯಿಂದ ತನ್ನ ಆಹಾರವನ್ನು ತಾನೆ ಸೃಷ್ಟಿಸಿಕೊಳ್ಳುವ ನೆಪದಲ್ಲಿ ಒಂದು ಕಡೆ ನೆಲೆನಿಂತ ನಂತರ ಇತರೆ ಯಾವುದೇ ಜೀವಿಗಿಂತಲೂ ಮನುಷ್ಯನಿಗೆ  ಮಳೆ ಅತೀ ಮುಖ್ಯ ಹಾಗೂ ಅನಿವಾರ್ಯವೆನಿಸಿತು. ಈ ಕಾರಣದಿಂದಲೇ ಮನುಷ್ಯ ಮಳೆಯನ್ನು ದೇವರೆಂದು ಪರಿಭಾವಿಸಿದ್ದಾನೆ.ಹೀಗೆ ಮನುಷ್ಯನಿಗೆ ಮಳೆ ಅತ್ಯಂತ ಅಗತ್ಯವೆಂದಾದ ಮೇಲೆ ಅದರ ಬಗ್ಗೆ ಸದಾ ಲಕ್ಷ್ಯ ಇಡಲಾರಂಭಿಸಿದ್ದಾನೆ. ಮಳೆ ಮತ್ತು ಮನುಷ್ಯನ ಇಂಥ ದೀರ್ಘಕಾಲದ ಸಂಬಂಧಗಳಿಂದಾಗಿ ಮನುಷ್ಯ ಮಳೆಯ ಬಗ್ಗೆ ತನ್ನದೇ ಆದ ತಿಳುವಳಿಕೆಯನ್ನು ರೂಢಿಸಿಕೊಂಡಿದ್ದಾನೆ. ಅಂದರೆ "ನೂರಾರು ವರ್ಷಗಳಿಂದ ಕಾಲಕ್ಕನುಗುಣವಾಗಿ ಮಳೆ ಬೀಳುವ ರಭಸ, ಅದರಿಂದ ಬೆಳೆಗಳಿಗೆ ಆಗುವ ಲಾಭ ಮತ್ತು ಹಾನಿ, ಕೆರೆ ಕಟ್ಟೆಗಳು ತುಂಬುತ್ತವೋ ಇಲ್ಲವೋ ಎಂಬುದನ್ನು ಸ್ವಾನುಭವದಿಂದ ಕಂಡುಕೊಂಡು, ಇಂತಿಂಥ ಮಳೆ ಹೀಗೆ ಬರುತ್ತದೆ. ಇದು ಬರದೇ ಇದ್ದರೆ ಇನ್ಯಾವುದು ಬರುತ್ತದೆ. ಇಂತಹ ಮಳೆಗೆ ಇಂತಹ ಬೆಳೆ ಹಾಕಿದ್ರೆ ಹೆಚ್ಚು ಇಳುವರಿ. ಇದು ಬೆದೆ ಮಳೆ, ಇದು ಹದ ಮಳೆ ಮುಂತಾದುದನ್ನು  ಗಾದೆಗಳು, ನುಡಿಗಟ್ಟುಗಳು, ಮಾತುಗಳ ಮೌಖಿಕ ಪರಂಪರೆಯ ಮೂಲಕ ಮುಂದಿನ ಕೃಷಿಕರಿಗೆ ವರದಾನವಾಗಿ ಮಾಡಿಹೋಗಿದ್ದಾನೆ."(ಚಿತ್ರದುರ್ಗ ಜಿಲ್ಲೆಯ ವ್ಯವಸಾಯ ಜಾನಪದ, ಎಂ.ಜಿ. ಈಶ್ವರಪ್ಪ, ಪುಟ: ೧೫೫). ಮಳೆಯನ್ನು ಕುರಿತ ಇಂತಹ ಪಾರಂಪರಿಕ ಜ್ಞಾನಗಳು ಧರೆಯ ಮೇಲಿನ ಎಲ್ಲಾ ಸಮುದಾಯಗಳಲ್ಲೂ ಪ್ರಚಲಿತವಿದ್ದು ಅವುಗಳು

ಒಂದೇ ತೆರನಾಗಿರುವುದಿಲ್ಲ. ಹವಾಮಾನ, ಮಳೆಯ ಪ್ರಮಾಣ ಮತ್ತು ಅದಕ್ಕನುಗುಣವಾಗಿ ರೂಪುಗೊಂಡ ಬೆಳೆ ಪದ್ಧತಿ, ಸಮುದಾಯಗಳ ಲೋಕದೃಷ್ಟಿ ಇದಕ್ಕೆ ಪ್ರಮುಖ ಕಾರಣವೆನಿಸುತ್ತವೆ. ಈ ಹಿನ್ನೆಲೆಯೊಳಗೆ ಕರ್ನಾಟಕದ ಜಿಲ್ಲೆಗಳಲ್ಲೇ ಸಾಂಸ್ಕೃತಿಕವಾಗಿ ಅತೀ ಶ್ರೀಮಂತವಾದ ಸಮಾಜೋ–ಆರ್ಥಿಕ–ರಾಜಕೀಯ ದೃಷ್ಟಿಯಿಂದ ಅಷ್ಟೇ ಹಿಂದಿಳಿದ ಜಿಲ್ಲೆಯೆನಿಸಿರುವ ಚಿತ್ರದುರ್ಗ ಜಿಲ್ಲೆಯಲ್ಲಿ ನೆಲೆಸಿರುವ ಬುಡಕಟ್ಟುಗಳಲ್ಲಿ ಪ್ರಮುಖವಾದ ಮ್ಯಾಸಬೇಡರ ಬುಡಕಟ್ಟಿನಲ್ಲಿ ಪ್ರಚಲಿತವಿರುವ ಮಳೆಜ್ಞಾನವನ್ನು ಪರಿಶೋಧಿಸುವ ಪ್ರಧಾನ ಉದ್ದೇಶ ಈ ಲೇಖನಕ್ಕಿದೆ.

'ಮ್ಯಾಸಬೇಡ' ಸಮುದಾಯ ಚಿತ್ರದುರ್ಗ, ದಾವಣಗೆರೆ, ಬಳ್ಳಾರಿ, ತುಮಕೂರು ಜಿಲ್ಲೆಗಳಲ್ಲಿ ನೆಲೆಂತಿರುವ ವಿಶಿಷ್ಟವಾದ ಒಂದು ಬುಡಕಟ್ಟಾಗಿದೆ. ಇದು ತನ್ನದೇ ಆದ ಸಂಸ್ಕೃತಿಯ ವೈಲಕ್ಷಣಗಳೊಂದಿಗೆ ಎಲ್ಲರ ಗಮನ ಸೆಳೆಯುವ ಮೂಲಕ ಇಂದಿಗೂ ಬುಡಕಟ್ಟಿನ ಮೂಲ ಗುಣಗಳನ್ನು ಬಿಟ್ಟುಕೊಡದೇ ಬದುಕುತ್ತಿದೆ. ಆಧುನಿಕತೆಯ ಆರ್ಭಟಗಳ ನಡುವೆಯೂ ತನ್ನ ಪರಾಂಪರಿಕ ಜ್ಞಾನಗಳನ್ನು ನಂಬಿ ನಿರ್ವಸಾಹತೀಕರಣ ಪ್ರಕ್ರಿಯೆಯಲ್ಲಿ ಮುನ್ನಡೆಯುತ್ತಿರುವುದು ಗಮನಾರ್ಹ ಸಂಗತಿಯಾಗಿದೆ. ಮ್ಯಾಸಬೇಡ ಸಮುದಾಯದ ಒಡಲಲ್ಲಿ ಉಸಿರಾಡುತ್ತಿರುವ ಇಂಥ ಪಾರಂಪರಿಕ ಜ್ಞಾನಗಳ ಬಗ್ಗೆ ಈವರೆಗೂ ಈ ಸಮುದಾಯದ ಬಗ್ಗೆ ನಡೆದಿರುವ ಅಧ್ಯಯನಗಳಲ್ಲಿ ಹೆಚ್ಚಿನ ಪ್ರಸ್ತಾಪಗಳು ಇಲ್ಲದೇ ಇರುವುದು ಕಂಡುಬರುತ್ತದೆ. ಈ ಹಿನ್ನೆಲೆಯೊಳಗೆ ಪ್ರಸ್ತುತ ಪ್ರಬಂಧದಲ್ಲಿ ಮ್ಯಾಸಬೇಡರ ಪಾರಂಪರಿಕ ಜ್ಞಾನಗಳಲ್ಲಿ ಪ್ರಮುಖ ಶಾಖೆಯಾಗಿರುವ ಮಳೆ ಬಗೆಗಿನ ಜ್ಞಾನದ ಬಗ್ಗೆ ತಿಳಿಯುವ ಪ್ರಯತ್ನಮಾಡಲಾಗಿದೆ.

ಮ್ಯಾಸಬೇಡರ ಬುಡಕಟ್ಟು ಅತೀ ಪ್ರಾಚೀನ ಪರಂಪರೆಯನ್ನು ಹೊಂದಿದ್ದು , ಅಂಥ ದೀರ್ಘಕಾಲದ ಬದುಕಿನಲ್ಲಿ ಅನೇಕ ರೀತಿಯ ಅವಸ್ಥಾಂತರಗಳನ್ನು ಕಂಡಿದೆ. ವೃತ್ತಿಯಲ್ಲಿ ಆರಂಭಕ್ಕೆ ಬೇಟೆಗಾರರಾಗಿದ್ದ ಇವರು ನಂತರ ಪಶುಪಾಲಕರಾಗಿದ್ದರೆ, ತದನಂತರ ಕೃಷಿಕರಾಗಿ ಪರಿವರ್ತನೆಗೊಂಡಿದ್ದಾರೆ. ಈ ಮೂರು ವೃತ್ತಿಗಳಿಗೂ ಮತ್ತು ಮಳೆಗೂ ನಿಕಟ ಸಂಬಂಧವಿದ್ದು ನಿರಂತರವಾಗಿ ಮಳೆಯ ಅವಶ್ಯಕತೆಯಲ್ಲಿ ಜೀವನ ಸಾಗಿಸಿರುವ ಈ ಸಮುದಾಯ, ಮಳೆಯನ್ನು ಕುರಿತಂತೆ ತನ್ನದೇ ಆದ ಜ್ಞಾನವನ್ನು ಹೊಂದಿದೆ. ಈ ಜ್ಞಾನದಲ್ಲಿ ಸ್ವಲ್ಪ ಭಾಗ ಕಾಲ್ಪನಿಕವಾಗಿದ್ದರೆ, ಹೆಚ್ಚಿನ ಭಾಗ ಅನುಭವಜನ್ಯವಾದುದಾಗಿದೆ. ಇಲ್ಲಿ ಮುಖ್ಯವಾಗಿ ಮಳೆ ಹೇಗೆ ಬರುತ್ತದೆ? ಮಳೆ ಬರುವ, ಹೋಗುವ ಸೂಚನೆಗಳೇನು? ವಿವಿಧ ಮಳೆಗಳ ಗುಣಗಳು ಮತ್ತು ಅವುಗಳು ನೀಡಿರುವ ಹಾಗೂ ನೀಡುತ್ತಿರುವ ಅನುಭವಗಳೇನು? ಮಳೆ ಬರದೇ ಹೋದಾಗ ಮಾಡುತ್ತಿರುವ ಆಚರಣೆಗಳು ಮತ್ತು ಅವುಗಳ ಹಿಂದಿರುವ ಲೋಕದೃಷ್ಟಿ ಯಾವುದು? ಮಳೆ ಬೇಡವೆಂದಾಗ ಮಾಡುತ್ತಿರುವ ಆಚರಣೆಗಳು ಮತ್ತು ಅವುಗಳ ಹಿಂದಿರುವ ಲೋಕದೃಷ್ಟಿ ಯಾವುದು? ಮಳೆ ಸಂಬಂಧೀ ಸಾಹಿತ್ಯ, ನಂಬಿಕೆ ಮತ್ತಿತರ ನಿರೂಪಣೆಗಳೇನು ಎಂಬಿತ್ಯಾದಿ ಅಂಶಗಳನ್ನು ಇಲ್ಲಿ ಮುಖ್ಯವಾಗಿ ಗಮನಿಸಬಹುದಾಗಿದೆ

ಲೋಕದೃಷ್ಟಿ

ಭೂಮಿ–ಆಕಾಶ, ಮಿಂಚು– ಮಳೆ, ಗುಡುಗು–ಸಿಡಿಲು ಇವೇ ಮೊದಲಾದ ಸಂಗತಿಗಳ ಬಗ್ಗೆ ಪ್ರತಿಯೊಂದು ಸಮುದಾಯವು ತನ್ನದೇ ಆದ ಅನುಭವಗಳನ್ನು, ಕಲ್ಪನೆಗಳನ್ನು ಹೊಂದಿರುತ್ತದೆ. ಇದನ್ನೇ ನಾವು ಲೋಕದೃಷ್ಟಿ ಎಂದು ಕರೆಯುತ್ತೇವೆ. ಈ ಸಮುದಾಯ ಜಗತ್ತಿನ ಸೃಷ್ಟಿ– ಸ್ಥಿತಿ– ಲಯಗಳಿಗೆ ದೈವೀ ಶಕ್ತಿಯೇ ಕಾರಣ ಮಳೆ ಹೇಗೆ ಬರುತ್ತದೆ ಎಂಬುದಕ್ಕೆ ಈ ಸಮುದಾಯದಲ್ಲಿ ವಿಶೇಷವಾದ ಕಲ್ಪನೆ ಇಲ್ಲದಿದ್ದರೂ ಸಹಜವಾಗಿ ದೇವರ ಕೃಫೆಯಿಂದ ಭೂಮಿಗೆ ಮಳೆ ಬರುತ್ತದೆ ಎಂಬುದು ಇಲ್ಲಿರುವ ನಂಬಿಕೆ.

ಮಳೆಗಳ ಪ್ರಾಥಮಿಕ ಜ್ಞಾನ

ಶಿಷ್ಟಧಾರೆಯ ಶಾಸ್ತ್ರಗಳು ವಿವರಿಸಿದ ೨೭ ಮಳೆ ನಕ್ಷತ್ರಗಳಲ್ಲಿ ಈ ಸಮುದಾಯ ೧೮ ಮಳೆ ನಕ್ಷತ್ರಗಳನ್ನು ಮಾತ್ರ ನಂಬುತ್ತದೆ. ಈ ೧೮ ಮಳೆಗಳನ್ನು ತಮ್ಮದೇ ಆದ ವಿಶಿಷ್ಟ ಹೆಸರಲ್ಲಿ ಕರೆಯುವುದಲ್ಲದೆ ಆ ಮಳೆಗಳನ್ನು ಕಂಡ ಅನುಭವದೊಂದಿಗೆ ತಮ್ಮ ಬದುಕನ್ನ ರೂಪಿಸಿಕೊಂಡಿದೆ. ಉಳಿದ ೯ ಮಳೆಗಳನ್ನು ಕೇಡು ಮಳೆಗಳು ಎಂದು ಕರೆದಿರುವುದನ್ನು ನೋಡಬಹುದು. ಈ ಸಮುದಾಯಕ್ಕೆ ಅನುಕೂಲಕರವಾದ ಅನುಕೂಲಕರವಾದ ಮಳೆಗಳ ಬಗ್ಗೆ  ಇರುವ ಪರಿಜ್ಞಾನವನ್ನು ಪ್ರತ್ಯೇಕವಾಗಿ ವಿವರಿಸಬಹುದು

ರೇವತಿ

ಎಲ್ಲಾ ಮಳೆಗಳಿಗೂ ತಾಯಿ ಎಂದು ರೇವತಿಯನ್ನು ಪರಿಭಾವಿಸಲಾಗಿದೆ. ಈ ಮಳೆ ಕಡ್ಡಾಯವಾಗಿ ಬರಬೇಕು. ಬಂದರೆ ಮುಂದಿನ ಮಳೆಗಳೆಲ್ಲವು ಬಂದೇ ಬರುತ್ತವೆ ಎಂಬ ನಂಬಿಕೆಯಿದೆ.

ಅಶ್ವಿನಿ

ಈ ಮಳೆ ಬರಬಾರದು ಎಂಬುದು ಮ್ಯಾಸ ಬೇಡರ ನಂಬಿಕೆ. ಆಶ್ವಿನಿ ಮಳೆ ಬಂದರೆ ಜಾನುವಾರುಗಳಿಗೆ ಹುಲ್ಲಿನ ಸಮಸ್ಯೆಯಾಗುತ್ತದೆ ಎಂಬ ಅಭಿಪ್ರಾಯವಿದೆ. ಅದಕ್ಕಾಗಿಯೇ 'ಅಶ್ವಿನಿ ಮಳೆ ಬಂದರೆ ಹಸಿವಿನ ಬಾಯಿಗೆ ಹುಲ್ಲಿಲ್ಲ' ಎಂಬ ಅನುಭವದ ಮಾತು ಪ್ರಚಲಿತವಿದೆ. ಈ ಸಮುದಾಯ ಪ್ರಧಾನವಾಗಿ ಪಶುಪಾಲನೆಯನ್ನೇ ನಂಬಿ ಬದುಕುವುದರಿಂದ ಮನುಷ್ಯರಷ್ಟೇ ಪಶುಗಳ ಯೋಗಕ್ಷೇಮವೂ ಕೂಡ ಅಗತ್ಯವಾಗಿದೆ. ಆ ಹಿನ್ನೆಲೆಯಲ್ಲಿ ಮೇಲಿನ ವಿಚಾರಗಳನ್ನು ಗ್ರಹಿಸಬೇಕಾಗುತ್ತದೆ.

ಭರಣಿ

ಭರಣಿಮಳೆ ಮುಂಗಾರಿನ ಆರಂಭಕ್ಕೆ ಬರುವ ಮಳೆಯಿದು. ಈ ಮಳೆ ಕೃಷಿ ಚಟುವಟಿಕೆಗಳಿಗೆ ಅತ್ಯಂತ ಮಹತ್ವದ್ದಾಗಿದೆ. ಜೋಳ, ಎಳ್ಳು ಬಿತ್ತನೆಗೆ ಈ ಮಳೆ ಸೂಕ್ತವಾದ ಕಾಲವಾಗಿದೆ.

ಕೃತ್ತಿಕೆ

ಕೃತಿಕಿ ಎಂಬ ವಿಶಿಷ್ಟಹೆಸರಲ್ಲಿ ಕರೆಯಲ್ಪಡುವ ಈ ಮಳೆಯೂ ಕೂಡ ಮುಂಗಾರಿನ ಪಸಲುಗಳಿಗೆ ಅಗತ್ಯವಾದ ಮಳೆಯಾಗಿದೆ.

ರೋಹಿಣಿ

ಗ್ರಾಮೀಣ ಭಾಷೆಯ ಬಳಕೆಯಲ್ಲಿ ರೋಣಿ ಎಂದೇ ಕರೆಸಿಕೊಳ್ಳುವ ಈ ಮಳೆ ಈಗಾಗಲೇ ಬಿತ್ತಿರುವ ಜೋಳದ ಬೆಳೆಗೆ ಅತ್ಯಂತ ಅನುಕೂಲಕರ. ಈ ಮಳೆ ಬಂದರೆ ಜೋಳದ ಇಳುವರಿ ಹೆಚ್ಚಾಗುತ್ತದೆ ಎಂಬುದು ಅನುಭವದ ಮಾತು. ಈ ಹಿನ್ನೆಲೆಯೊಳಗೆ 'ರೋಣಿ ಮಳೆ ಬಂದರೆ ಓಣಿಯೆಲ್ಲ ಜೋಳ' ಎಂಬ ಗಾದೆ ಮಾತು ಈ ಸಮುದಾಯದಲ್ಲಿ ಬಳಕೆಯಲ್ಲಿದೆ.

ಮೃಗಶಿರ–ಆರಿದ್ರ

ಈ ಎರಡು ಮಳೆಗಳು ಇಂಗಾರು ಬೆಳೆಗಳಿಗೆ ಭೂಮಿಯನ್ನು ಹದಮಾಡಲು ಸಹಾಕವಾಗುವ ಮಳೆಗಳಾಗಿವೆ. ಗ್ರಾಮೀಣರ ಪರಿಭಾಷೆಯಲ್ಲಿ ಮಿಸಿಗಿರಿ, ಆದ್ರೆ ಮಳೆಗಳೆಂಬ ಹೆಸರಲ್ಲಿ ಕರೆಸಿಕೊಳ್ಳುತ್ತವೆ. ಆದ್ರೆ ಮಳೆ ಯಾವುದೇ ಬೆಳೆಗಳ ಬಿತ್ತನೆಗೆ ಯೋಗ್ಯವಲ್ಲ ಎಂಬುದನ್ನು 'ಆದ್ರೆಯಲ್ಲಿ ಬಿತ್ತಿದರೆ ಆರು ಕಾಳು' ಎಂಬ ಅನುಭವ ಜನ್ಯ ಮಾತು ಪ್ರಚಲಿತದಲ್ಲಿದೆ.

ಪುನರ್ವಸು–ಪುಷ್ಯ

ಮ್ಯಾಸ ಬೇಡರು ದಟ್ಟವಾಗಿ ವಾಸಿಸುವ ಮಧ್ಯ ಕರ್ನಾಟಕ ಬಾಗದಲ್ಲಿ ಶೇಂಗಾ ಪ್ರಧಾನ ವಾಣಿಜ್ಯ ಬೆಳೆಯಾಗಿದೆ. ಶೇಂಗಾ ಬಿತ್ತನೆಗೆ ಅನುಕೂಲಕರವಾದ ಈ ಮಳೆಗಳು ಇವರಿಗೆ ಅತೀ ಮಹತ್ವವಾದವು. ಇವುಗಳನ್ನು ಪ್ರಧಾನವಾಗಿ ಪೆದ್ದಪುಷ್ಯ, ಸಿನ್ನಪುಷ್ಯ ಎಂಬ ಗ್ರಾಮ್ಯ ಭಾಷೆಯಲ್ಲಿ ಕರೆಯಲಾಗಿದೆ.

ಆಶ್ಲೇಷ–ಮಘೆ

ಅಸ್ಲೆ ಮತ್ತು ಮಘೆ ಎಂಬ ಸ್ಥಳೀಯ ಹೆಸರಲ್ಲಿ ಕರೆಸಿಕೊಳ್ಳುವ ಈ ಮಳೆಗಳು ಸಜ್ಜೆ, ನವಣೆ, ರಾಗಿ ಮೊದಲಾದ ಸಣ್ಣ ಕಾಳುಗಳ ಬಿತ್ತನೆಗೆ ಯೋಗ್ಯವಾದವುಗಳಾಗಿವೆ. ಈ ಸಂದರ್ಭದಲ್ಲಿ ಬೀಳುವ ಮಳೆಗಳ ರಬಸ ಕಡಿಮೆ. ವಿಶೇಷವಾಗಿ ಈ ಮಳೆಗಳು ಹೇಗೆ ಬಂದರೆ ಉತ್ತಮ ಎಂಬುದಕ್ಕೆ ಈ ಸಮುದಾಯದ್ದೇ ಆದ ಕೆಲವು ಅನುಭವಗಳಿವೆ. ಉದಾ : ಅಸ್ಲೆ ಮಳೆಯ ಕಾಲದಲ್ಲಿ ಬಿಸಿಲು ಬೀಳಬಾರದು. ಯಾವಾಗಲೂ ಮೋಡಕವಿದ ವಾತಾವರಣ ಇರಬೇಕು. ಈ ಅನುಭವವನ್ನು ' ಅಸ್ಲೆ

ಮಳೆ ಬಿಸಿಲಾಗೆ ಹೋಯ್ತು' ಎಂದಿದ್ದಾರೆ. ಇನ್ನೂ ಮಘೆ ಮಳೆಯಲ್ಲಿ ಬಿಸಿಲು ಬೀಳಬೇಕು. ಮೋಡ ಮುಚ್ಚಿಕೊಳ್ಳಬಾರದು. ಇದನ್ನು 'ಮಘೆ ಮಳೆ ಹೊಗೆಯಲ್ಲೇ ಹೋಯ್ತು' ಎಂಬ ಗಾದೆ ಮಾತಿನಲ್ಲಿ ವ್ಯಕ್ತಮಾಡಲಾಗಿದೆ.

ಉಬ್ಬೆ–ಉತ್ತರೆ

ಇಂಗಾರಿನಲ್ಲಿ ಬಿತ್ತನೆಯಾದ ಬೆಳೆಗಳಿಗೆ ಮೂಲಾಧಾರವಾದವುಗಳು ಉಬ್ಬೆ ಮತ್ತು ಉತ್ತರೆ ಮಳೆಗಳು. ಉಬ್ಬೆ ಮಳೆ ರಬಸವಿಲ್ಲದೆ ನಿಧಾನವಾಗಿ ಮತ್ತು ನಿರಂತರವಾಗಿ ಬರುವಂತಹದು. ಇದನ್ನು ರೈತರು 'ಉಬ್ಬೆ ಮಳೆ ಅಂದ್ರೆ ಉಬ್ಬಿ ಉಬ್ಬಿ ಬರುತ್ತದೆ' ಎಂದು ಸೂತ್ರಿಕರಿಸಿದ್ದಾರೆ. ಇನ್ನು ಉತ್ತರೆ ಮಳೆ ಎಲ್ಲಾ ಸಮುದಾಯಗಳಿಗೂ ಬೇರೆ ಬೇರೆ ಕಾರಣಗಳಿಗಾಗಿ ಗಮನಾರ್ಹವಾದ ಮಳೆಯಾಗಿದೆ. ಮ್ಯಾಸನಾಯಕರ ಪಾರಂಪರಿಕ ತಿಳುವಳಿಕೆಯಲ್ಲಿ ಉತ್ತರೆ ರೈತನಿಗೆ ಭಾಷೆ ಕೊಟ್ಟ ಮಳೆಯಾಗಿದೆ. ಈ ಮಳೆ ಬಂದರೆ ರೈತನ ಸಮಸ್ತ ಚಟುವಟಿಕೆಗಳಿಗೆ ಸಹಾಯಕವಾದುದು. ರೈತನ ಬೆಳೆ–ಜನ ಜಾನುವಾರುಗಳಿಗೆ ಉಪಯೋಗವಾಗುವ ಮಳೆ. ಅದಕ್ಕಾಗಿಯೇ ಮ್ಯಾಸ ನಾಯಕರು ತೆಲಗಿನಲ್ಲಿ ' ಉತ್ತರ ವಾನ ಸೂಸಿ ಎತ್ತರ ಗಂಪ' ಎಂಬುದಾಗಿ ಹೇಳಿದ್ದಾರೆ. ತೆಲಗು ಭಾಷೆಯ ಈ ನುಡಿಗಟ್ಟಿನ ಅರ್ಥವೆಂದರೆ ಉತ್ತರೆ ಮಳೆಯನ್ನು ನೋಡಿ ಪುಟ್ಟಿ ಎತ್ತು ಎಂದು ಅರ್ಥವಾಗುತ್ತದೆ. ಪುಟ್ಟಿ ಎತ್ತು ಎಂಬುದು ಗೂಳೇ ಹೊರಡು ಎಂದಾಗುತ್ತದೆ. ಅಂದರೆ ಉತ್ತರೆ ಮಳೆ ಬರದೇ ಹೋದರೆ ರೈತನಿಗೆ ಜಾನುವಾರುಗಳಿಗೆ ಸಂಕಷ್ಟ ಬಂದದೊಗುತ್ತದೆ. ಹಾಗಾಗಿ ಆಸ್ಥಳದಿಂದ ಬೇರೊಂದು ಕಡೆಗೆ ವಲಸೆ ಹೊರಡಬೇಕಾಗಿತ್ತದೆ.

ಹಸ್ತ–ಚಿತ್ತ

ಹಸ್ತ ಮಳೆಯೂ ಕೂಡ ಇಂಗಾರಿನ ಪೈರುಗಳ ಹಿತದೃಷ್ಟಿಯಿಂದ ಪ್ರಮುಖವಾಗಿದ್ದು, ಜಾನುವಾರುಗಳ ಮೇವಿಗೆ ಅತ್ಯಗತ್ಯವಾದ ಮಳೆ ಇದಾಗಿದೆ. ಉತ್ತರೆ ಮಳೆ ರೈತನಿಗೆ ಕೈ ಬಾಷೆ ನೀಡಿದ ಮಳೆಯಾದರೆ, ಹಸ್ತ ಮಳೆ ದನಕರುಗಳಿಗೆ ಭಾಷೆ ನೀಡಿದ ಮಳೆಯಾಗಿದೆ. ಇನ್ನೂ ಚಿತ್ತ ಮಳೆ ಬಹಳ ರಬಸವಾಗಿ ಬೀಳುವ ಮಳೆಯಾಗಿದ್ದು, ಒಂದೇ ಕಡೆ ಸುರಿದು ಬಿಡುವುದು ಇದರ ಪ್ರಧಾನ ಲಕ್ಷಣ. ಅದಕ್ಕಾಗಿಯೇ ರೈತ ಈ ಮಳೆಯನ್ನು 'ಕುರುಡು ಚಿತ್ತ' ಎಂಬುದಾಗಿ ಕರೆದಿದ್ದಾನೆ.

ಸ್ವಾತಿ–ವಿಶಾಖ–ಅನುರಾಧ

ಈ ಮೂರು ಮಳೆಗಳು ಆಡು ಮಾತಿನ ಭಾಷೆಯಲ್ಲಿ ಕ್ರಮವಾಗಿ ಸಾತಿ, ಇಸಾಕಿ, ಅನುರಾಗಿ ಎಂಬ ಹೆಸರುಗಳಿಂದ ಕರೆಸಿಕೊಂಡಿವೆ. ರೈತನ ಅಕ್ಕಡಿ (ಸಾರಿನ ಕಾಳು) ಬೆಳೆಗಳಿಗೆ ಅನುಕೂಲ. ಇದರ ಹೊರತಾಗಿಯೂ ದನಕರುಗಳಿಗೆ, ಕುರಿ ಮೇಕೆಗಳಿಗೆ ಹುಲ್ಲಿ ದೃಷ್ಟಿಯಿಂದಲೂ ಬಹಳ ಮುಖ್ಯವಾಗಿವೆ. ಇವು ಹಲವು ದಿನಗಳ ಕಾಲ ಸುರಿಯುವ ಸೈಕ್ಲೋನ್ ರೂಪದ ಮಳೆಗಳು. ಇವುಗಳಲ್ಲಿ

ಸಾತಿ ಮತ್ತು ಇಸಾಕಿ ಮಳೆಗಳ ನಿರಂತರ ಎಷ್ಟಿರುತ್ತದೆ ಎಂದರೆ ಇದನ್ನು ಸಮುದಾಯದ ಅನುಭವ 'ಸಾತಿ ಮಳೆ ಏತಿನೆಂದರೂ ಬಿಡದು', 'ಇಸಾಕಿ ಮಳೆ ಈಚಲು ಗರಿ ಉದರಿದರೂ ಬಿಡದು' ಎಂಬುದಾಗಿ ಹೇಳಿದೆ. ಹಾಗೆಯೇ ಅನುರಾಗಿ ಮಳೆಯ ಬಗ್ಗೆ ಈ ಸಮುದಾಯದಲ್ಲಿ ಪ್ರಚಲಿತವಿರುವ 'ಅನುರಾಗಿ ಮಳೆ ಬಂದರೆ ಮನೋ ರೋಗವೆಲ್ಲ ಹೋಯ್ತು' ಎಂಬ ಮಾತು ಅನುರಾಧ ಮಳೆಗೆ ಇರುವ ಶಕ್ತಿಯನ್ನು ಪ್ರಕಟಪಡಿಸುತ್ತದೆ.

ಹೀಗೆ ಪ್ರತೀ ಮಳೆಯ ಬಗೆಗೆ ಕಾಲದ ಗತಿಯೊಳಗೆ ತಮ್ಮದೇ ಆದ ಅನುಭವವನ್ನು ಸಮುದಾಗಳಿಗೆ ನೀಡಿವೆ. ಇಡೀ ಮಳೆಗಾಲದ ಅನುಭವಗಳನ್ನು 'ತಂಗಳು ಮಳೆ ಬಂದರೆ ತಿಂಗಳ ಮಳೆ ಹೋಯ್ತು', 'ಬೈಗಿನ ಮಳೆ, ಬೈಗಿನ ನೆಂಟ ಬಿಡಲ್ಲ', 'ಮುಂಗಾರು ಮಳೆಗೆ ಸಿಗಬೇಡ, ಮರೆತು ಮಾತಿಗೆ ಸಿಗಬೇಡ' ಎಂಬ ಅನುಭವ ಜನ್ಯ ಮಾತುಗಳನ್ನು ಮುಂದಿನ ಪೀಳಿಗೆಗೆ ಉಳಿಸಿವೆ ನಮ್ಮ ಆದಿವಾಸಿ ಸಮುದಾಯಗಳು.

ಮಳೆ ಬರುವ ಸೂಚನೆಗಳು

ಮಳೆ ಯಾವಾಗ ಬರುತ್ತದೆ ಎಂಬುದನ್ನು ಹವಾಮಾನದ ಮುನ್ಸೂಚನೆ ಮತ್ತು ಕಲ್ಪನೆಯ ಆಧಾರದ ಮೇಲೆ ಕಂಡುಕೊಳ್ಳುವ ಕೌಶಲ ಆದಿವಾಸಿ ಸಮುದಾಯಗಳಿಗೆ ಇದೆ. ಹವಾಮಾನದಲ್ಲಿ ದೊರೆಯುವ ಸೂಚನೆಗಳ ಆಧಾರದ ಮೇಲೆ ಮಳೆ ಬರುವುದನ್ನು ಕಂಡು ಹಿಡಿಯುವ ವಿಶಿಷ್ಟ ಜ್ಞಾನ ಮ್ಯಾಸ ನಾಯಕ ಸಮುದಾಯದಲ್ಲೂ ಪ್ರಚಲಿತವಿದೆ. ಅಂಥ ಅನುಭವದ ಜ್ಞಾನಾಧಾರಿತ ಮಾತುಗಳನ್ನು ಈ ಮುಂದಿನಂತೆ ಪಟ್ಟಿ ಮಾಡಬಹುದು

೧. ಸೂರ್ಯ ಹುಟ್ಟೋ ಜಾಗದಲ್ಲಿ ಬೆಳಗ್ಗೆ ಕೆಂಪು ನರಸು ಮೂಡಿದರೆ ಮಳೆ ಬರತ್ತದೆ
೨. ಅತಿಯಾದ ಬಿಸಿಲು ಇದ್ದರೆ ಗಮ್ಮವಾಗಿದ್ದು ಆ ದಿನ ಮಳೆ ಬರುವುದು
೩. ಗಟ್ಟಿ ಮೋಡಗಳಾದಾಗ ಮಳೆ ಬರುವುದು ನಿಶ್ಚಿತ
೪. ಕೆಲವು ನಿದಿಷ್ಟ ದಿಕ್ಕಿನ ಗಾಳಿ ಬೀಸಿದಾಗ ತಪ್ಪದೆ ಮಳೆ ಬರತ್ತದೆ.ಉದಾ: ಹನುಮನ ಮೂಲೆ ಗಾಳಿ
೫. ನಾಯಿ ಆಕಾಶಕ್ಕೆ ಮುಖ ಮಾಡಿ ಕೂಗಿದರೆ ಮಳೆಬರುತ್ತದೆ.
೬. ಚಿಕ್ಕ ಚಿಟ್ಟೆಗಳು ಎದ್ದು ಹಾರಿದರೆ ಮಳೆ ಖಾಯಂ
೭. ಮುದ್ದೆಕೋಲು ಎಂಬ ಹೆಸರಿನ ಕೀಟಗಳು ಹಾರಾಟ ನಡೆಸಿದರೆ ಮಳೆ ಬರುತ್ತದೆ
೮. ನೆಲಗುಮ್ಮ ಕೂಗಿದಾಗ ಮಳೆ ಬರುವುದು ಗ್ಯಾರಂಟಿ
೯. ಎಮ್ಮೆ ಹಸುಗಳು ಹಾಲು ಕಡಿಮೆ ನೀಡಿದರೆ ಮಳೆಬರುವ ಸೂಚನೆಯಾಗಿರುತ್ತದೆ
೧೦. ಬೆಣ್ಣೆ ತೆಗೆಯುವಾಗ ಬೆಣ್ಣೆ ಕರಗಿಹೋಗುತ್ತದ್ದರೆ ಮಳೆಬರುವ ಸಾಧ್ಯತೆ ಹೆಚ್ಚು
೧೧. ಕಪ್ಪು ಇರುವೆಗಳು ಬಿಳಿ ಮೊಟ್ಟೆ ಹೊರಹಾಕಿದರೆ ಮಳೆ ಬರುವುದು

೧೨. ಸಣ್ಣ ಪ್ರಮಾಣದಲ್ಲಿ ಮಳೆ ಬಿದ್ದು ಪೂರ್ವ ದಿಕ್ಕಿಗೆ ಕಾಮನ ಬಿಲ್ಲು ಮೂಡಿದರೆ ಮಳೆ ಬರುವ ಸೂಚನೆಯಾಗಿದೆ.

೧೩. ಈ ರೀತಿಯ ಹವಾಮಾನದ ಸೂಚನೆಗಳಲ್ಲದೆ ಕಾಲ್ಪನಿಕ ಸೂಚನೆಗಳು ಅನೇಕ. ಉದಾ : ಕನಸಿನಲ್ಲಿ ಕುರಿಗಳು, ಪೋಲೀಸರು ಹಾಗೂ ಹೇಸಿಗೆ ಕಾಣಿಸಿಕೊಂಡರೆ ಮಳೆ ಬರುವುದು ನಿಶ್ಚಿತ

ಈ ಮೇಲಿನ ಅಂಶಗಳನ್ನು ಗಮನಿಸಿದರೆ ಪ್ರಾಣಿ–ಪಕ್ಷಿ ಪರಿಸರದಿಂದಲೇ ಮಳೆ ಬರುವ ಸೂಚನೆಗಳನ್ನು ತಿಳಿಯುವ ಕ್ರಮ ಕಂಡು ಬರುತ್ತದೆ. ಮನುಷ್ಯನಿಗಿಂತ ಪ್ರಾಣಿ ಪಕ್ಷಿಗಳು ಹೆಚ್ಚು ಸಂವೇದನಾಶೀಲವಾಗಿದ್ದು ಪ್ರಕೃತಿಯ ಬದಲಾವಣೆಗಳನ್ನು ಅರಿಯಬಲ್ಲವು. ಇದನ್ನು ಮಾನವ ತನ್ನ ಅನುಭವದ ಹಿನ್ನೆಲೆಯಲ್ಲಿ ಕಂಡುಕೊಂಡಿದ್ದಾನೆ.

ಮಳೆ ಬಿಡುವ ಸೂಚನೆಗಳು

ಪ್ರಾಕೃತಿಕ ಸೂಚನೆಗಳೊಂದಿಗೆ ಮಳೆ ಬರುವ ಬಗ್ಗೆ ಮಹಿತಿ ತಿಳಿಯುವ ಮನುಷ್ಯ ಹತ್ತಿದ ಮಲೆ ಬಿಡುವ ಬಗ್ಗೆಯೂ ಪ್ರಕೃತಿಯಿಂದಲೇ ಕೆಲವು ಸಂದೇಶಗಳನ್ನು ಪಡೆಯುತ್ತಿರುವುದಕ್ಕೆ ಮ್ಯಾಸಬೇಡ ಸಮುದಾಯದೊಳಗೆ ಆಧಾರಗಳಿವೆ. ಬೆಳಗ್ಗೆ ಮಂಜು ಹೆಚ್ಚು ಬಿದ್ದರೆ ಹಿಡಿದ ಹಿಡಿದ ಮಳೆ ಬರವಾಗುತ್ತದೆ. ಮಳೆ ಬೀಳದೆ ಪೂರ್ವಕ್ಕೆ ಕಾಮನ ಬಿಲ್ಲು ಮೂಡಿದರೆ ಹಾಗೂ ಮಳೆಬಿದ್ದು ಪಶ್ಚಿಮಕ್ಕೆ ಕಾಮನಬಿಲ್ಲು ಮೂಡಿದರೆ ಮಳೆ ಬರುವುದಿಲ್ಲ ಎಂಬ ಅನುಭವದ ಮಾತುಗಳು ಬಳಕೆಯಲ್ಲಿವೆ.

ಮಳೆ ಬರಿಸುವ ಆಚರಣೆಗಳು

ಮಳೆ ಇಲ್ಲದೆ ಮನುಷ್ಯ ಬಹಳ ಕಾಲ ಬದುಕಲಾರ. ಹೊಲದಲ್ಲಿ ಪೈರು ಇಟ್ಟಾಗಲಂತೂ ಮಳೆಯ ಅಗತ್ಯ ತುಂಬಾ ಇದ್ದು, ಸ್ವಲ್ಪ ದಿನ ತಡವಾದರೂ ರೈತ ಕಂಗಾಲಾಗುತ್ತಾನೆ. ಇಂಥ ಸಂದರ್ಭಗಳಲ್ಲಿ ಹೋದ ಮಳೆಯನ್ನು ಬರಿಸುವುದಕ್ಕೆ ವಿಭಿನ್ನ ರೀತಿಯ ಪ್ರಯತ್ನಗಳನ್ನು ನಡೆಸುತ್ತಾನೆ. ಸದರಿ ಮ್ಯಾಸ ನಾಯಕ ಸಮುದಾಯ ಈ ವಿಷಯದಲ್ಲಿ ತನ್ನದೇ ಆದ ಅನುಭವಗಳನ್ನು ಹೊಂದಿದ್ದು, ಮಳೆ ಬರದೇ ಹೋದಾಗ ಮಳೆ ಬರಿಸಲು ಅನೇಕ ರೀತಿಯ ಆಚರಣೆಗಳನ್ನು ನಡೆಸುತ್ತದೆ. ಅಂಥ ಕೆಲವು ಆಚರಣಗಳನ್ನು ಈ ಮುಂದಿನಂತೆ ವಿವರಿಸಬಹುದು.

ಬಡ್ಡೆ ಕಲ್ಲಿಗೆ ನೀರು : ಪ್ರತೀ ಊರಿಗೆ ಒಂದು ಬಡ್ಡೆ ಕಲ್ಲು ಇರುತ್ತದೆ. ಹಾಗೆ ಪ್ರತೀ ಮ್ಯಾಸ ನಾಯಕರ ಹಟ್ಟಿಯಲ್ಲೂ ಒಂದು ಬಡ್ಡೆಕಲ್ಲು ಇದ್ದು, ಮಳೆ ಬರದೇ ಹೋದ ಸಂದರ್ಭಗಳಲ್ಲಿ ಹಟ್ಟಿಯ ಪ್ರತೀ ಕುಟುಂಬದಿಂದಲೂ ಒಂದೊಂದು ಕೊಡ ನೀರು ತಂದು ಆ ಬಡ್ಡೆ ಕಲ್ಲಿಗೆ ಸುರಿಯುತ್ತಾರೆ. ಇದರಲ್ಲಿ ನೂರಾ ಒಂದು ಕೊಡ ನೀರು ಹಾಕಬೇಕೆಂಬುದು ನಂಬಿಕೆ. ಹೀಗೆ ಮಾಡುವುದರಿಂದ ಮಳೆ ಬರುತ್ತೆಂದು ನಂಬಿ ಈ ಆಚರಣೆಯನ್ನು ಮಾಡುವುದುಂಟು.

ಮುಸರೆ ಚೆಲ್ಲುವುದು : ಹಟ್ಟಿಯ ಸುತ್ತಾ ಮುತ್ತಾ ಮಳೆಯಾಗಿ ಕೇವಲ ಮೋಡ ಗಾಳಿಯ ಆರ್ಭಟ ಮಾತ್ರವಿದ್ದಾಗ, ಮಳೆಯನ್ನು ಯಾವುದಾದರೂ ಕ್ಷುದ್ರ ಶಕ್ತಿಗಳು ತಡೆಯುತ್ತಿರಬಹುದು ಎಂಬ ನಂಬಿಕೆಯಿಂದ ಹಟ್ಟಿ ಹಿರಿಯರು ಸೇರಿ ಮುಸುರೆ ಚೆಲ್ಲುವ ತೀರ್ಮಾನ ಮಾಡುತ್ತಾರೆ. ದೇವರ ಗುಡಿಯ ಮುಂದೆ ಅನ್ನ, ಹಣ್ಣು ಮತ್ತು ಕಾಯಿ ಸೇರಿಸಿ ಹಟ್ಟಿ ಸುತ್ತಾ ಮುಸುರೆ ಚೆಲ್ಲುತ್ತಾರೆ. ಇದರಿಂದ ದುಷ್ಟ ಶಕ್ತಿಗಳಿಂದ ಉಂಟಾದ ಕಂಟಕ ಬಗೆಹರಿಯುತ್ತದೆ ಎಂಬುದು ನಂಬಿಕೆ

ಕೊಡ ಹಿಡಿಯುವುದು : ಮಳೆಗಾಲದ ಆರಂಭಕ್ಕೆ ಹಟ್ಟಿಯ ಯಜಮಾನರು ಸೇರಿ ಯಾವುದಾದರೂ ಒಂದು ದಿನ ಕೊಡ ಹಿಡಿಯುವುದರ ಬಗ್ಗೆ ತೀರ್ಮಾನಿಸುತ್ತಾರೆ. ಸಮಾನ್ಯವಾಗಿ ಸೋಮವಾರ ಮಾತ್ರ ಈ ಆಚರಣೆಯನ್ನು ಮಾಡುತ್ತಾರೆ. ಈ ತೀರ್ಮಾನವನ್ನು ಹಟ್ಟಿಯ ಪ್ರತೀ ಮನೆಗೂ ತಿಳಿಯುವಂತೆ ಡಂಗೂರ ಸಾರಿಸುತ್ತಾರೆ. ನಿಗದಿಯಾದ ಸೋಮುವಾರ ಬೆಳಗ್ಗೆ ಹಟ್ಟಿಯ ಎಲ್ಲ ಕುಟುಂಬಗಳಿಂದ ಜೋಳ ರಾಗಿ ಮತ್ತಿತರ ದಾನ್ಯಗಳನ್ನು ತಂದು ದೇವರ ಗುಡಿಯ ಮುಂದೆ ಇರುವ ಯಜಮಾನರ ಬಳಿ ನೀಡುತ್ತಾರೆ. ಹಾಗೆ ನೀಡಿದ ದಾನ್ಯವನ್ನು ಗುಡಿಯ ಮುಂದೆ ಒಂದು ನಿರ್ದಿಷ್ಟ ಜಾಗವನ್ನು ಸಗಣಿಯಿಂದ ಬಳಿದು ಅದರ ಮೇಲೆ ರಾಶಿಯಾಗಿ ಸುರಿಯುತ್ತಾರೆ. ಆಮೇಲೆ ಒಂದು ಹೊಸದಾದ ಮಣ್ಣಿನ ಕೊಡದಲ್ಲಿ ನೀರು ತುಂಬಿಸಿ ಆ ದಾನ್ಯದ ರಾಶಿ ಮೇಲೆ ಇಡುತ್ತಾರೆ. ಆನಂತರ ಪೂಜೆ ಮಾಡಿ ಅಲ್ಲಿನ ಹಕ್ಕುದಾರರಲ್ಲಿ ಇಬ್ಬರು ಪರಸ್ಪರ ಎದುರು ಬದುರಾಗಿ ನಿಂತು ಆ ತುಂಬಿದ ಕೊಡಕ್ಕೆ ಕೈಹಾಕಿ ಒತ್ತಿ ಹಿಡಿಯುತ್ತಾರೆ. ಆಗ ಯಜಮಾನರು  ಮಳೆ ಬರುವುದಾದರೆ ಕೊಡ ಜೋರಾಗಿ ತಿರುಗಬೇಕು ಎಂದು ಪ್ರತೀ ಮಳೆಯನ್ನು ಆಧರಿಸಿ ದೇವರನ್ನು ಕೇಳುತ್ತಾರೆ. ಯಾವ ಮಳೆಗೆ ಕೊಡ ತಿರುಗುತ್ತದೆಯೋ ಆ ಮಳೆಗಳು ಬರುತ್ತವೆ. ತಿರುಗದೇ ಇರುವ ಮಳೆಗಳು ಬರುವುದಿಲ್ಲ ಎಂಬುದು ಇವರ ನಂಬಿಕೆ. ಇದು ಮಳೆಯ ಭವಿಷ್ಯವನ್ನು ದೇವರ ಸತ್ಯದ ಮೂಲಕ ತಿಳಿಯುವ ಮಾರ್ಗವಾಗಿದೆ.

ಗಣೆ ಹಿಡಿಯುವುದು : ಮಳೆಗಾಲದಲ್ಲಿ ಮಳೆ ಬರದೇ ಬರಗಾಲದ ಛಾಯೆ ಕಂಡಾಗ ಹಟ್ಟಿಯ ಹಿರಿಯರು ದೇವರ ಗಣೆ ಹಿಡಿಯುವ ತಿರ್ಮಾನ ಮಾಡುತ್ತಾರೆ. ಈ ಆಚರಣೆಯೂ ಕೂಡ ಮಳೆಯ ಭವಿಷ್ಯವನ್ನು ತಿಳಿಯುವ ಕ್ರಮವಾಗಿದೆ. ಇದನ್ನು ಸಾಮಾನ್ಯವಾಗಿ ಮೂರು ದಿನ, ರಾತ್ರಿ ಸಮಯದಲ್ಲಿ ನಡೆಸಲಾಗುವುದು. ದೇವರ ಗುಡಿಯ ಮುಂದೆ ಯಜಮಾನರೆಲ್ಲ ಸೇರಿ ದೇವರಿಗೆ ಪೂಜೆಸಲ್ಲಿಸಿ ದೇವರ ಸನ್ನಿಧಿಯಲ್ಲಿರುವ ಗಣೆಗಳನ್ನು ಹೊರತೆಗದು ಅವುಗಳನ್ನು ನಿರ್ದಿಷ್ಟ ಹಕ್ಕುದಾರರು ನುಡಿಸುತ್ತಾರೆ. ಮುಂದೆ ಬರುವ ಪ್ರತೀ ಮಳೆಯ ಹೆಸರೇಳಿ ಆಮಳೆ ಬರುವುದಾದರೆ ಸ್ವರ ಯಾವುದೇ ಅಡೆತಡೆಯಿಲ್ಲದೆ ಸರಾಗವಾಗಿ ಹೊರಡಬೇಕು ಎಂದು ಮುಗಿಯುತ್ತಾರೆ. ನುಡಿಸುವವರು ಗಣೆಯನ್ನು ನುಡಿಸಲು ಪ್ರಾರಂಭಿಸುತ್ತಾರೆ. ಆಗ ಗಣೆ ಸರಾಗವಾಗಿ ನುಡಿದರೆ ಆ ಮಳೆ ಬರುತ್ತದೆ ಎಂದು ಇಲ್ಲವಾದರೆ ಇಲ್ಲ ಎಂದು ಅರ್ಥಮಾಡಿಕೊಳ್ಳುತ್ತಾರೆ.

ಕೋಲಾಟ ಆಡುವುದು : ಮ್ಯಾಸ ನಾಯಕರಲ್ಲಿ ಮಳೆಯ ಅಭಾವ ಕಂಡ ತಕ್ಷಣ ಅದನ್ನು ನಿವಾರಿಸಿಕೊಳ್ಳಲು ಆಚರಿಸುವ ಆಚರಣೆಗಳಲ್ಲಿ ಈ ಕೋಲಾಟವೂ ಒಂದು. ಮಳೆ ಹೋಗಿ ಬರದ

ಛಾಯೆ ಬಂದಾಗ ಹಟ್ಟಿ ಹಿರಿಯರು ಕೋಲಾಟ ನಡೆಸಲು ನಿರ್ದರಿಸುತ್ತಾರೆ. ಕೋಲಾಟದಲ್ಲಿ ಪರಿಣಿತಿಯನ್ನು ಪಡೆದಿರುವ ಕೆಲವರು ದೇವರ ಗುಡಿಯ ಮುದೆ ರಾತ್ರಿ ವೇಳೆಯಲ್ಲಿ ಈ ಕೋಲಾಟವನ್ನು ನಡೆಸಿಕೊಡುತ್ತಾರೆ. ಇದನ್ನು ಕನಿಷ್ಟ ೫ ದಿನ ೭ ದಿನ ಕೆಲವೊಮ್ಮೆ ೧೫ ದಿನದವರೆಗೂ ನಡೆಸುತ್ತಾರೆ. ಒಟ್ಟಾರೆ ಮಳೆ ಬರುವವರೆಗೂ ಕೋಲಾಟ ನಡೆಯುತ್ತದೆ. ಈ ಸಂದರ್ಭದಲ್ಲಿ ಸಮಾನ್ಯ ಸಂದರ್ಭದಲ್ಲಿ ಹಾಡುವ ಹಾಡುಗಳಿಗಿಂತ ಭಿನ್ನವಾದ ಹಾಡುಗಳನ್ನು ಹಾಡುತ್ತಾರೆ. ಅದರಲ್ಲಿ ಶೋಕ, ದೈವ ಪ್ರಾರ್ಥನೆ ಮಳೆರಾಯನ ಸ್ಥುತಿ ಇವೇ ಮೊದಲಾದ ಹಾಡುಗಳು ಪ್ರಧಾನವಾಗಿರುತ್ತವೆ. ಇದರಿಂದ ಮಳೆ ಬಂದೇ ಬರುತ್ತದೆ ಎಂಬುದು ಇವರ ದೃಢವಾದ ನಂಬಿಕೆ.

ಪುರಾಣ ಓದುವುದು : ಮಳೆಗಾಗಿ ಪುರಾಣ ಓದಿಸುವುದು ಕರ್ನಾಟಕದ ಬಹುಪಾಲು ಸಮುದಯಗಳಲ್ಲಿ ಪ್ರಚಲಿತವಿರುವ ಕ್ರಮವಾಗಿದೆ. ಈ ಪದ್ಧತಿ ಮ್ಯಾಸ ನಾಯಕರಲ್ಲೂ ಅಪರೂಪಕ್ಕೆ ಆಚರಣೆಯಲ್ಲಿದೆ. ಇವರು ಮಳೆ ಬರದೆ ಹೋದಾಗ ಅವರ ದೇವರ ಗುಡಿಯಲ್ಲಿ ಕುಮಾರವ್ಯಾಸ ಭಾರತ, ಜೈಮಿನಿ ಭಾರತದ ಕೆಲವು ಭಾಗಗಳನ್ನು ಓದುವುದು ಸಂಪ್ರದಾಯ. ಇದರಿಂದ ಒಳ್ಳೆಯದಾಗಿ ಮಳೆ ಬಂದೇ ಬರುತ್ತದೆ ಎಂಬುದು ಇಲ್ಲಿನ ನಂಬಿಕೆ.

ಬಯಲಾಟ ಪ್ರದರ್ಶನ : ಮಳೆಯ ಅಭಾವ ಉಂಟಾದಾಗ ಅದರ ನಿವಾರಣೆಗೆ ಮಾಡುವ ಆಚಣೆಗಳಲ್ಲಿ ಈ ಬಯಲಾಟ ಆಡುವುದು ಒಂದು. ಈ ಸಂದರ್ಭಕ್ಕೆ ಯಾವುದಾದರೂ ಕಥೆಯನ್ನು ಪ್ರದರ್ಶಿಸುವಂತಿಲ್ಲ. ಕೆಲವು ನಿದಿಷ್ಟಪತ್ಯಗಳನ್ನು ಮಾತ್ರ ಪ್ರದರ್ಶಿಸುತ್ತಾರೆ. ಅದರಲ್ಲಿ 'ಶಬರ ಶಂಕರ ವಿಳಾಸ' ದಂತಹ ಪತ್ಯಗಳು ಪ್ರಧಾನವಾಗಿವೆ.

ಬರಗಲ್ಲು ಹುಡುಕಿ ತೆಗೆಯುವುದು : ಮಳೆ ಬರದೇ ಇರುವುದಕ್ಕೆ ಈ ಸಮುದಾಯಗಳು ಊಹಿಸುವ ಕಾರಣಗಳಲ್ಲಿ ಈ ಬರಗಲ್ಲು ಇರುವುದು ಒಂದು. ಹಟ್ಟಿಯ ಸುತ್ತ ಮುತ್ತ ಯಾವುದೋ ಸ್ಥಳದಲ್ಲಿ ಬರಗಲ್ಲು ಇರುವುದರಿಂದಲೇ ಮಳೆ ಬಂದಿಲ್ಲ ಎಂದು ಹಟ್ಟಿಯ ಜನರೆಲ್ಲ ಬರಗಲ್ಲು ತೆಗೆಯಲು ಹೊರಡುತ್ತಾರೆ. ಆ ಕಲ್ಲನ್ನು ಹುಡುಕಿ ತೆಗದ ಮೇಲೆ ಅದನ್ನು ತಮ್ಮ ಊರಿನ ಗಡಿ ದಾಟಿಸಿ ಮುಂದಿನ ಊರಿನ ಗಡಿಗೆ ಬಿಟ್ಟು ಬರುತ್ತಾರೆ. ಇದರಿಂದ ಮಳೆ ಬರುತ್ತದೆ ಎಂಬುದು ಒಂದು ಪ್ರಾಚೀನ ನಂಬಿಕೆ.

ತೊನ್ನು ಹೆಣಗಳನ್ನು ಹುಡುಕಿ ತೆಗೆಯುವುದು : ಮೈಮೇಲೆ ತೊನ್ನು ಇರುವ ಮನುಷ್ಯರ ಮೃತ ದೇಹಗಳನ್ನು ಮಣ್ಣಲ್ಲಿ ಹೂಳಬಾರದು . ಏಕೆಂದರೆ ಆ ಶರೀರಗಳು ಮಣ್ಣಲ್ಲಿ ಕೊಳೆಯುವುದಿಲ್ಲ. ಹೀಗೆ ಮಣ್ಣಲ್ಲಿ ಕೊಳೆಯದೇ ಇರುವ ದೇಹಗಳು ಇದ್ದಲ್ಲಿ ಆ ಭಾಗಕ್ಕೆ ಮಳೆ ಬರುವುದಿಲ್ಲ ಎಂಬುದು ನಂಬಿಕೆ . ಆಗ ಹಟ್ಟಿಯ ಜನರು ಗುದ್ದಲಿ, ಹಾರೆ, ಚಲಿಕೆಗಳನ್ನು ಹೊತ್ತು ಸಶ್ಮಾನದ ಕಡೆಗೆ ಹೊರಡುತ್ತಾರೆ. ಅಲ್ಲಿ ತೊನ್ನು ದೇಹದ ಗುರುತು ಪತ್ತೆ ಮಾಡಿ ಅದನ್ನು ಹೊರತೆಗೆದು ಸುಡುತ್ತಾರೆ. ಇದರಿಂದ ಮಳೆಗೆ ಅಡ್ಡಿಯಾಗಿದ್ದ ವಿಘ್ನ ನಿವಾರಣೆಯಾಗುತ್ತದೆ ಎಂಬುದು ನಂಬಿಕೆ.

ಮಳೆ ನಿಲ್ಲಸುವ ಆಚರಣೆಗಳು

ಮಳೆ ಬರದೇ ಹೋದಾಗ ಅದನ್ನು ಬರಿಸಲು ಕೆಲವು ಆಚರಣೆಗಳಿರುವಂತೆ ಮಳೆ ಬಿಡದಂತೆ ಸುರಿಯುತ್ತಿರುವಾಗ ಅದು ಬರವಾಗುವಂತೆ ಮಾಡಲು ಈ ಸಮುದಾಯಗಳೊಳಗೆ ಕೆಲವು ಆಚರಣೆಗಳನ್ನು ಮಾಡುವುದುಂಟು. ಮಳೆಯ ಅಭಾವವಾದಾಗ ಇವರು ಅನುಭವಿಸುವ ಯಾತನೆಗಿಂತ ಮಳೆ ಬಿಡದೆ ಸುರಿದಾಗ ಇವರಿಗೆ ಮುಖ್ಯವಾಗಿ ಇವರ ದನ,ಕುರಿ,ಮೇಕೆ ಮೊದಲಾದ ಜಾನುವಾರುಗಳಿಗೆ ತುಂಬಾ ಸಂಕಷ್ಟ. ಹಾಗಾಗಿಯೇ ಇದಕ್ಕೆ ಪರಿಹಾರವಾಗಿ ಹಲವಾರು ಕ್ರಮಗಳನ್ನು ಅನುಸರಿಸುವುದುಂಟು. ಅಂಥ ಕೆಲವು ಆಚರಣೆಗಳನ್ನು ಹೆಸರಿಸುವುದಾದರೆ : ಮುಸುರೆ ಚೆಲ್ಲವುದು, ಒಲೆಯಲ್ಲಿ ಉಪ್ಪು ಸುರಿಯುವುದು ಮತ್ತು ದೇವರ ಮೊರೆ ಹೋಗುವುದು. ಈ ಆಚರಣೆಗಳಲ್ಲಿ ಸಮುದಾಯದ ನಿದಿಷ್ಟ ಲೋಕದೃಷ್ಟಿಯಿದೆ.

ಒಟ್ಟಾರೆ ಮಳೆಗೆ ಸಂಬಂಧಿಸಿದಂತೆ ಪ್ರಚಲಿತವಿರುವ ಈ ಸಮಸ್ತ ಜ್ಞಾನವು ಬರೀ ಮೌಢ್ಯಗಳಲ್ಲದೆ ಇವುಗಳಲ್ಲಿ ವೈಜ್ಞಾನಿಕ ದೃಷ್ಟಿಯೂ ಇದೆ. ಏಕೆಂದರೆ ಇವೆಲ್ಲವೂ ಕಾಲದ ಗತಿಯಲ್ಲಿ ಬದುಕಿದ ಸಮುದಾಯಗಳಿಗೆ ದಕ್ಕಿದ ಅನುಭವ ಜನ್ಯ ಜ್ಞಾನಗಳಿವು. ಹಾಗಾಗಿಯೇ ಇವುಗಳನ್ನು ಯಾವ ಉದ್ದೇಶದಿಂದ ನಡೆಸುತ್ತಾರೋ ಆ ಉದ್ದೇಶಗಳು ಸ್ವಲ್ಪ ಮಟ್ಟಿಗಾದರೂ ನೆರವೇರುತ್ತವೆ ಎಂಬುದನ್ನು ತಿಳಿದರೆ ಇವುಗಳ ಸತ್ಯಾಸತ್ಯತೆ ತಿಳಿಯುತ್ತದೆ. ಈ ಕಾರಣಕ್ಕಾಗಿಯೇ ಆಧುನಿಕತೆಯ ಉತ್ತುಂಗುದ ಕಾಲದಲ್ಲಿ ಇವು ಇನ್ನೂ ಸಮುದಾಯದೊಳಗೆ ಜೀವಂತವಾಗಿವೆ. ಈ ಆಚರಣೆಗಳ ಹಿಂದಿನ ಲೋಕ ಜ್ಞಾನವನ್ನು ಇನ್ನಷ್ಟು ಆಳವಾದ ವಿಶ್ಲೇಷಣೆಗೆ ಒಳಪಡಿಸಬೇಕಿದೆ.

## ಮ್ಯಾಸನಾಯಕ್ – ಕಾಡುಗೊಲ್ಲ ಬುಡಕಟ್ಟುಗಳ ಸಾಂಸ್ಕೃತಿಕ ಸಾಮ್ಯತೆಗಳು

ಮಧ್ಯ ಕರ್ನಾಟಕದ ಭೂ ಭಾಗಗಳಲ್ಲಿ ನೆಲೆಸಿರುವ ಪಶುಪಾಲಕ ಬುಡಕಟ್ಟುಗಳೆಂದರೆ ಮ್ಯಾಸನಾಯಕರು ಮತ್ತು ಕಾಡುಗೊಲ್ಲರು. ಈ ಎರಡೂ ಸಮುದಾಯಗಳ ಬಗ್ಗೆ ಹಲವಾರು ವರ್ಷಗಳಿಂದ ಹತ್ತಾರು ಜನ ವಿದ್ವಾಂಸರು ಸಂಶೋಧನಾತ್ಮಕ ಅಧ್ಯಯನಗಳನ್ನು ನಡೆಸಿದ್ದಾರೆ. ಇವರೆಲ್ಲರೂ ಇವೆರಡು ಸಮುದಾಯಗಳನ್ನು ಮೂಲತಃ ಒಂದೇ ಗುಂಪಾಗಿದು, ಕೆಲವು ಮಹತ್ವದ ಕಾರಣಗಳಿಂದ ಪ್ರತ್ಯೇಕ ಬುಡಕಟ್ಟುಗಳಾಗಿ ಬೆಳೆದಿವೆ ಎಂಬ ಸಂಗತಿಯನ್ನು ಹೇಳಿದ್ದಾರೆ. ಹಾಗೇನೆ ಹೀಗೆ ಪ್ರತ್ಯೇಕಗೊಳ್ಳಲು ಕಾರಣವಾದ ಸಂಗತಿಗಳನ್ನು ಶೋಧಿಸಲು ಪ್ರಯತ್ನಿಸಿದ್ದಾರೆ. ಈ ಪ್ರಯತ್ನದ ಫಲವಾಗಿ ಕಾಡುಗೊಲ್ಲರ ಸಮುದಾಯದ ಮೌಖಿಕ ಕಥನಗಳಲ್ಲಿ ಕೆಲವು ಸುಳಿವುಗಳಿವೆ. ಅದನ್ನು ಡಾ.ಮೀರಾಸಾಬಿಹಳ್ಳಿ ಶಿವಣ್ಣ ಅವರು ಅತ್ಯಂತ ಸಮರ್ಥವಾಗಿ ಗುರುತಿಸಿಕೊಂಡಿದ್ದಾರೆ. ಅವರು ಉಲ್ಲೇಖಿಸುವ ಐತಿಹ್ಯವೊಂದು ಹೀಗಿದೆ : "ಈಗ ಮ್ಯಾಸಬೇಡರು ಮತ್ತು ಕಾಡುಗೊಲ್ಲರು ಎಂದು ಕರೆಯಲ್ಪಡುವ ಇವರು ಒಂದೇ ತಾಯಿ ಮಕ್ಕಳಂತೆ. ಇಬ್ಬರೂ ಗೋಪಾಲಕರಾಗಿದ್ದರು. ಬರಬಂದಾಗ

ದನಗಳನ್ನು ಪಡುವಲ ಸೀಮೆಗೆ ತಿರುಗಿಸಿದರು. ಬಹಳಷ್ಟು ದಿನಗಳಿಂದ ಆಹಾರವಿಲ್ಲದೆ ಹಸಿವಿನಿಂದ ಕಂಗೆಟ್ಟಿದ್ದವನು ತಡೆಯಲಾರದೆ ಆಗ ತಾನೆ ಈದ ಕುಂಟು ಆಕಳು ಕರುವಿನ ತೊಡೆಯನ್ನು ಕಿತ್ತುಕೊಂಡು ತಿಂದನೆಂತೆ. ಅಂದಿನಿಂದ ಅವರು ಬೇರೆಯಾದರಂತೆ." (ಮೀರಾಸಾಬಿಹಳ್ಳಿ ಶಿವಣ್ಣ; ೧೯೯೯:೮೮) ಇಲ್ಲಿಯ ಕೇಂದ್ರ ವಸ್ತುವನ್ನೇ ಆಧರಿಸಿ ಅನೇಕ ಪಾಠಾಂತರಗಳು ದೊರೆಯುತ್ತವೆ. ವಿಶೇಷದ ಸಂಗತಿ ಎಂದರೆ ಈ ಸಂಬಂಧ ಮ್ಯಾಸಬೇಡ ನಾಯಕರ ಅಭಿವ್ಯಕ್ತಿಗಳು ಸಂಪೂರ್ಣ ಮೌನವಹಿಸಿವೆ. ಇದರ ಸಾಂಸ್ಕೃತಿಕ ಮತ್ತು ಚಾರಿತ್ರಿಕ ಒತ್ತಡಗಳನ್ನು ಹುಡುಕುವ ಅಗತ್ಯವಿದೆ. ಇದೇನೇ ಇದ್ದರೂ ಈ ಎರಡೂ ಬುಡಕಟ್ಟುಗಳು ಮೂಲದಲ್ಲಿ ಒಂದೇ ಆಗಿದ್ದು ಪಾವಿತ್ರ್ಯ ಪರಿಪಾಲನೆಯ ಸಂಬಂಧ ವಿಭಜನೆಗೊಂಡಿವೆ ಎಂಬುದನ್ನು ಯಾರಾದರೂ ಒಪ್ಪಬಹುದಾದಷ್ಟು ಮೌಖಿಕ ಹಾಗೂ ಆಚರಣಾತ್ಮಕ ಪ್ರಕಾರಗಳು ಆಧಾರಗಳಾಗಿ ಒದಗಿಬರುತ್ತವೆ. ಇವೆರಡರ ಮೂಲ ಬೇರು ಒಂದೇ ಎಂಬುದಕ್ಕೆ ಇವೆರಡೂ ಸಂಸ್ಕೃತಿಗಳಲ್ಲಿ ಕಂಡು ಬರುವ ಸಮಾನ ಅಂಶಗಳು ಪೂರಕ ಶಕ್ತಿಗಳಾಗಿವೆ. ಹಾಗಾಗಿ ಈ ಲೇಖನದಲ್ಲಿ ಮ್ಯಾಸನಾಯಕರು ಮತ್ತು ಕಾಡುಗೊಲ್ಲರ ಸಾಂಸ್ಕೃತಿಕ ಸಾಮ್ಯತೆಗಳನ್ನು ಗುರುತಿಸುವ ಪ್ರಯತ್ನವಿದೆ.

ಬೇಡರು ಮತ್ತು ಗೊಲ್ಲರಲ್ಲಿ ಅವರುಗಳು ಬದುಕುವ ಪ್ರಕೃತಿಯಿಂದ ಆರಂಭಗೊಂಡು ಹೊಂದಿರುವ ಸಂಸ್ಕೃತಿಯವರೆಗೆ ಸಾಕಷ್ಟು ಸಾಮ್ಯತೆಗಳನ್ನು ಕಾಣಬಹುದಾಗಿದ್ದು, ಅವುಗಳನ್ನು ಈ ಮುಂದಿನಂತೆ ವಿವರಿಸಬಹುದಾಗಿದೆ.

೧. ಸಮಾನ ಭೌತಿಕ ಸ್ಥಿತಿಗತಿಗಳು :

ಗೊಲ್ಲರು ಮತ್ತು ನಾಯಕರು ಮೂಲತಃ ಪಶುಪಾಲನೆ ವೃತ್ತಿಯನ್ನು ಅವಲಂಬಿಸಿದವರು. ಇಂದಿಗೂ ಕೂಡ ಪಶುಪಾಲನೆಯ ವೃತ್ತಿಯಿಂದಲೇ ಬಹುಪಾಲು ಕುಟುಂಬಗಳು ಜೀವನ ಸಾಗಿಸುತ್ತಿವೆ. ಒಂದು ಕಡೆ ನೆಲೆ ನಿಲ್ಲುವ ಸ್ಥಿತಿ ಇವರದಲ್ಲ. ಈಗೀಗ ನೆಲೆನಿಲ್ಲುವ ಸಂದರ್ಭಗಳಿವೆ ಅಷ್ಟೆ. ಮೇವು ನೀರು ಸಿಗುವೆಡೆಗೆ ಪ್ರಯಾಣ ಬೆಳೆಸಿ ಸಿಕ್ಕಲ್ಲೇ ಬಿಡಾರ ಹೂಡುವ ಸಂಸ್ಕೃತಿ ಇವರದು. ಹಾಗಾಗಿ ಇಬ್ಬರ ವಾಸ ಸ್ಥಾನಗಳಿಗೆ ಹಟ್ಟಿ ಎಂಬ ಒಂದೇ ತೆರನಾದ ಹೆಸರುಗಳಿವೆ. ಇವರ ವೃತ್ತಿ ಪಶುಪಾಲನೆ ಮತ್ತು ನೆಲೆ ಕಾಡುವಾಸಿಗಳಾದ್ದರಿಂದ ಉಡುವ ಬಟ್ಟೆ, ತೊಡುವ ಆಭರಣಗಳಲ್ಲಿ ಸಮಾನತೆ ಇದೆ. ಪುರುಷರು ಮೈಗೆ ಅಂಗಿ ಧರಿಸದೇ ತಲೆಗೆ ಪೇಟ ಸುತ್ತಿ ಬರೀ ಮೈಲಿ ಓಡಾಡುವುದು ತೀರಾ ಸಾಮಾನ್ಯ. ಎರಡೂ ಸಮುದಾಯಗಳ ವ್ಯಕ್ತಿಗಳ ಶರೀರದ ಸ್ವರೂಪ ಒಂದೇ. ಮಹಿಳೆಯರಾದರೂ ರವಿಕೆ ಧರಿಸದಿರುವುದು ಉಭಯ ಗುಂಪುಗಳಿಗೂ ಸಮಾನ. ಕೈಗಳಿಗೆ ಕಾಡುಗೊಲ್ಲರ ಹೆಂಗಸರು ಕಡಗ ಧರಿಸಿದರೆ. ಮ್ಯಾಸಬೇಡರ ಹೆಂಗಸರು ಬದ್ದು ಎಂಬ ಅದೇ ರೀತಿಯ ಆಭರಣವನ್ನು ಧರಿಸುವುದನ್ನು ಕಾಣಬಹುದು. ಇವೆರಡು ಗುಂಪಿನ ಹೆಸರುಗಳಲ್ಲಿಯೂ ಸಾಮ್ಯತೆ ಇದ್ದು ಕಾಣುತ್ತದೆ. ಉದಾಃ ಕಾಟಮುಲಿಂಗ, ಚಿತ್ರಲಿಂಗ, ಬೊಮ್ಮಲಿಂಗ ಇತ್ಯಾದಿ. ಈ ಹೆಸರುಗಳು ಪ್ರಸ್ತುತ ಸಮುದಾಯಗಳು ಪೂಜಿಸುವ ದೇವರುಗಳೂ ಹೌದು. ಆದ್ದರಿಂದ ಪೂಜಿಸುವ

ದೈವಗಳು ಕೂಡ ಎರಡೂ ಬುಡಕಟ್ಟುಗಳಿಗೂ ಒಂದೇ. ಈ ದೇವರುಗಳಿಗೆ ನಿರ್ಮಿಸುವ ಗುಡಿಗಳು ಕೂಡ ಒಂದೇ ತೆರನಾಗಿರುತ್ತವೆ ಎಂಬುದು ಕುತೂಹಲಕಾರಿಯಾದುದು. ಈ ಗುಂಪುಗಳಲ್ಲಿ ದೈವಗಳು ಸಾಮಾನ್ಯರಿಗಿಂತ ಭಿನ್ನವಲ್ಲ. ಹಾಗಾಗಿ ಮನುಷ್ಯರಂತೆ ಸಣ್ಣ ಗುಡಿಸಲುಗಳಲ್ಲೇ ದೈವಗಳ ಪ್ರತಿಷ್ಠಾಪನೆ. ಸುತ್ತು ಗುಡಿಸಲು ಎಂದು ಕರೆಯಲ್ಪಡುವ ಆ ದೇವಸ್ಥಾನಗಳು ಕಾಂಸಿ ಎಂಬ ಒಂದು ತೆರನಾದ ಹುಲ್ಲಿನಿಂದ ನಿರ್ಮಾಣಗೊಂಡಿದ್ದು. ಲಕ್ಕಲಿ ಸೊಪ್ಪು ಅಥವಾ ಕಳ್ಳೆಯಿಂದ ಗುಡಿಗೆ ಬೇಲಿ ನಿರ್ಮಿಸಲಾಗಿರುತ್ತದೆ. ಇಂಥ ಗುಡಿಸಲುಗಳಲ್ಲಿ ಕುಳಿತಿರುವ ದೇವರುಗಳ ಸ್ವರೂಪವೂ ಒಂದೆ. ಇಲ್ಲಿಯ ದೇವರು ಪೆಟ್ಟಿಗೆಯಾಕಾರದಲ್ಲಿ ಅಥವಾ ಕೋಲಿನಾಕಾರದಲ್ಲಿ ಇರುತ್ತದೆ. ಪೂಜೆಗೊಳ್ಳುವ ದೇವರು ವೃತ್ತಿಯ ಸಹಾಯಕ ಪರಿಕರಗಳಾಗಿರುತ್ತವೆ. ವೃತ್ತಿಯಲ್ಲಿ ಸಹಾಯಕವಾಗುವ ವಸ್ತುಗಳು ಪೂಜೆಗೊಳ್ಳುವುದು ಒಂದು ಕ್ರಮವಾದರೆ, ಪರಂಪರೆಯನ್ನು ಕಟ್ಟಿ ಬೆಳೆಸಿದ ಹಿರಿಯರು ಪೂಜಿಸಲ್ಪಡುವುದು ಮತ್ತೊಂದು ಕ್ರಮ. ಭೌತಿಕವಾಗಿ ಇಷ್ಟೆಲ್ಲ ಸಮಾನತೆಗಳನ್ನು ಪಡೆದಿರುವ ಪ್ರಸ್ತುತ ಬುಡಕಟ್ಟುಗಳು ಊರು ಮತ್ತು ಕಾಡು ಎಂಬ ಎರಡು ಪ್ರತ್ಯೇಕ ಗುಂಪುಗಳಾಗುವಲ್ಲಿಯೂ ಒಂದೇ ಆಗಿವೆ. ಮ್ಯಾಸಬೇಡರಲ್ಲಿ ಇರುವಂತೆ ಗೊಲ್ಲರಲ್ಲಿಯೂ ಊರುಗೊಲ್ಲ ಕಾಡುಗೊಲ್ಲ  ಎಂಬ ಗುಂಪುಗಳಿವೆ.

೨. ನಂಬಿಕೆ ಸಂಪ್ರದಾಯ ಆಚರಣೆಗಳ ಸಮಾನತೆ :

ಶರೀರ, ವೃತ್ತಿ, ವಾಸ, ಉಡುಗೆ, ತೊಡುಗೆ, ದೈವ ಇವೇ ಮೊದಲಾದ ಸಂಗತಿಗಳಲ್ಲಿ ಆಶ್ಚರ್ಯಕರ ಸಮಾನತೆಯನ್ನು ಹೊಂದಿರುವ ಈ ಎರಡು ಬುಡುಕಟ್ಟುಗಳು, ಇವುಗಳನ್ನು ಆಧರಿಸಿಯೇ ಹುಟ್ಟುವ ನಂಬಿಕೆ–ಸಂಪ್ರದಾಯ ಹಾಗೂ ಆಚರಣೆಗಳಲ್ಲಿಯೂ ಸಮಾನತೆ ಹೊಂದಿರುತ್ತವೆ ಎಂಬುದು ಯಾರಿಗಾದರೂ ಅರ್ಥವಾಗುವ ಸತ್ಯ.

ನಂಬಿಕೆಗಳಲ್ಲಿ ಜನ್ನಿಗೆ ಆಕಳು/ಕುರಿ ಕಲ್ಪನೆ ಎರಡೂ ಸಮುದಾಯಗಳಲ್ಲಿ ಇದೆ. ಜನ್ನಿಗೆ ಆಕಳು/ಕುರಿ ಪಶುಪಾಲಕರಿಗೆ ಅತ್ಯಂತ ಪವಿತ್ರವಾದುದು. ಗ್ರಾದಿಪಾಲಕನಾಯಕನನ್ನು ಹುಲಿಯಿಂದ ಪಾರು ಮಾಡಿದದು ಇಂಥ ಜನ್ನಿಗೆ ಆಕಳು. ಇದು ಸೇರಿಕೊಂಡಂತೆ ಇನ್ನು ಹಲವಾರು ಸಮಾನ ನಂಬಿಕೆಗಳು ಇರುವ ಸಾಧ್ಯತೆಗಳಿವೆ.

ಸಂಪ್ರದಾಯಗಳಲ್ಲಿ ಕಾಸು ಮೀಸಲು, ಹಬ್ಬಗಳು (ಎತ್ತಿನ ಹಬ್ಬ–ದೀವಳಿಗೆ, ಮರು ದೀವಳಿಗೆ), ಮಣೇವು, ವಾಸೆಕೊಯ್ಯುವುದು, ದೇವರಿಗೆ ಎತ್ತುಗಳನ್ನು ಬಿಡುವುದು, ಮೂರು ವರ್ಷಕ್ಕೊಮ್ಮೆ ಸಾಂಕೇತಿಕವಾಗಿ  ಊರು ಬಿಡುವುದು, ಕಟ್ಟೆಮನೆಗಳ ನ್ಯಾಯ ಪಂಚಾಯ್ತಿ, ಡಗಮು, ಉರುಮೆ ಗಣೆಯಂಥ ವಾದ್ಯಗಳ ಬಳಕೆ, ಬಾನ ಕುರಿ ಕಡೆಯುವುದು ಇವೇ ಮೊದಲಾದ ಪದ್ದತಿಗಳು ಇಲ್ಲಿ ಮುಖ್ಯವಾಗುತ್ತದೆ.

ಕಾಸು ಮೀಸಲು : ಮನೆಗಳಲ್ಲಿ ಕರೆದ ಹಾಲನ್ನು ಬಳಸದೇ ದೇವರಿಗೆ ಮೀಸಲಿಡುವುದು ಮತ್ತು ಕುಲದ ಕುಟುಂಬಗಳಿಂದ ದಕ್ಷಿಣೆ ಪಡೆಯುವುದು ಕಾಸು ಮೀಸಲು ಪದ್ಧತಿ. ಕಾಸು ಪೂಜಾರಿಗೆ ಸೇರಿದರೆ ಮೀಸಲು ರೂಪದಲ್ಲಿ ಬಂದ ಹಾಲಿನ ತುಪ್ಪ ತೆಗೆದು ದೇವರ ಮುಂದೆ ದೀಪ ಉರಿಸುವುದು. ಈ ಸಂಪ್ರದಾಯ ಇಂದಿಗೂ ಎರಡು ಗುಂಪುಗಳಲ್ಲಿ ಗಟ್ಟಿಯಾಗಿದೆ.

ಹಬ್ಬಗಳು : ಎತ್ತುಗಳನ್ನು ವಿಶೇಷವಾಗಿ ಪೂಜಿಸುವ ಎತ್ತಿನ ಹಬ್ಬ ಮತ್ತು ಬೆಳಕನ್ನು ಗೌರವಿಸುವ ದೀವಳಿಗೆ ಹಬ್ಬಗಳು ಇದೇ ಹೆಸರಲ್ಲಿ ಉಭಯ ಗುಂಪುಗಳಲ್ಲಿಯು ಸಾಮಾನ್ಯವಾಗಿ ಕಂಡು ಬರುತ್ತವೆ.

ಮಣೇವು : ಹಬ್ಬಗಳ ಸಂದರ್ಭದಲ್ಲಿ ದಾಸಯ್ಯಗಳಿಗೆ ಭಕ್ತರು ಬೆಲ್ಲ, ಬಾಳೇಹಣ್ಣು ಕಾಯಿಗಳನ್ನು ವಿಶಿಷ್ಟವಾಗಿ ಅರ್ಪಿಸುವ  ಪದ್ದತಿ ಇದು. ಬೆಲ್ಲ ಬಾಳೇಹಣ್ಣು ಕಾಯಿಗಳನ್ನು ಚಿಕ್ಕ ಚಿಕ್ಕ ಚೂರುಗಳಾಗಿ ಮಾಡಿ ದೇವಸ್ಥಾನಗಳ ಮುಂಭಾಗದ ಮಣ್ಣಿನ ನೆಲದ ಮೇಲೆ ಸಾಕಷ್ಟು ಚಿಕ್ಕ ಚಿಕ್ಕ ಗುಡ್ಡೆಗಳಿಗೆ ಹಾಕುತ್ತಾರೆ. ಸಂಪ್ರದಾಯದ ಧಾರ್ಮಿಕ ಪುರುಷರಾದ ದಾಸಯ್ಯಗಳು ಜೋರಾಗಿ ಹಾ ಹಾ ಎಂದು ಕೂಗಿ ಕುಣಿಯುತ್ತ ಬಂದು ಬೆಲ್ಲ ಹಣ್ಣು ಕಾಯಿಗಳ ಚಿಕ್ಕ ರಾಶಿಗಳಿಗೆ ಬಿದ್ದು ಬಾಯಾಕಿ ತಿನ್ನುತ್ತಾರೆ. ಇಂಥ ವಿಶಿಷ್ಟ ಸಂಪ್ರದಾಯ ಎರಡು ಗುಂಪುಗಳಲ್ಲಿ ಕಂಡು ಬರುತ್ತದೆ.

ದೇವರೆತ್ತುಗಳನ್ನು ಬಿಡುವುದು : ದೇವರ ಕಾರ್ಯಕ್ಕೆ ಇಲ್ಲಿ ಎತ್ತುಗಳು ತೀರಾ ಅನಿವಾರ್ಯ. ಯಾವುದೇ ಹಬ್ಬವಾದರೂ ಅದು ದೇವರೆತ್ತುಗಳಿಗೆ ಮುಗಿಯುವುದರಿಂದಲೇ ಆರಂಭಗೊಳ್ಳುತ್ತದೆ. ಭಕ್ತರು ದೇವರಿಗೆ ಹರಕೆ ರೂಪದಲ್ಲಿ ಎತ್ತುಗಳನ್ನು, ವಿಶೇಷವಾಗಿ ಹಸುಗಳನ್ನು ಅರ್ಪಿಸುತ್ತಾರೆ. ದೈವದವರು ಹಾಗೆ ಹರಕೆ ರೂಪದಲ್ಲಿ ಬಂದ ಹಸುಗಳಿಗೆ ದೇವರ ಮುದ್ರೆ ಹಾಕಿ ಕುಲ ಸಾವಿರದವರ ಸ್ವತ್ತಾಗಿಸುತ್ತಾರೆ. ಇಂಥ ಸಂಪ್ರದಾಯ ಗೊಲ್ಲರಲ್ಲೂ ಇದೆ. ಮ್ಯಾಸನಾಯಕರರಲ್ಲಿಯೂ ಪ್ರಧಾನವಾಗಿದೆ.

ಇಷ್ಟಲ್ಲದೆ ನ್ಯಾಯ ಪಂಚಾಯ್ತಿಗೆ ಇಬ್ಬರಲ್ಲೂ ಕಟ್ಟೆಮನೆಗಳಿವೆ. ಮ್ಯಾಸನಾಯಕರಿಗೆ ನನ್ನಿವಾಳ ನಾಯ್ಕನಹಟ್ಟಿ, ಗೋನೂರು ಇವೇ ಮೊದಲಾದ ಏಳು ಕಟ್ಟೆಮನೆಗಳಿದ್ದರೆ, ಕಾಡುಗೊಲ್ಲರಿಗೆ ಕರಿಯೊಬನ ಹಳ್ಳಿ ಹಾಗೂ ಬೇವಿನಹಳ್ಳಿ ಮೊದಲಾದವು ಕಟ್ಟೆಮನೆಗಳಾಗಿದ್ದವು.

೩. ವಿಧಿ ನಿಷೇಧಗಳೂ ಒಂದೇ :

ಸಂಸ್ಕೃತಿಯಲ್ಲಿ ನಂಬಿಕೆ ಸಂಪ್ರದಾಯ ಆಚರಣೆಗಳು ಒಂದು ಭಾಗವಾದರೆ ಮತ್ತೊಂದು ಭಾಗ ವಿಧಿ ನಿಷೇಧಗಳದು. ಏನು ಮಾಡಬೇಕು ಎಂಬುದು ಎಷ್ಟು ಮುಖ್ಯವೋ ಏನು ಮಾಡಬಾರದು ಎಂಬುದು ಕೂಡ  ಅಷ್ಟೇ ಮುಖ್ಯ. ಈ ದೃಷ್ಟಿಯಿಂದ ಮ್ಯಾಸಬೇಡರಲ್ಲಿ  ಹಾಗೂ ಕಾಡುಗೊಲ್ಲರಲ್ಲಿ ಅಸ್ತಿತ್ವ ಪಡೆದಿರುವ ಸಮಾನ ವಿಧಿ ನಿಷೇಧಗಳನ್ನು ಇಲ್ಲಿ ನೋಡಬಹುದು.

ಅತೀ ಪಾವಿತ್ರ್ಯ:  ಇಡೀ ಕುಲಗಳು ಮತ್ತೊಂದು ಕುಲದೊಡನೆ ಬದುಕುವುದು ಇರಲಿ ಬೆರೆಯಲಾರವು. ಈ ಮಡಿವಂತಿಕೆ ತಾವು ವಾಸಿಸುವ ಹಟ್ಟಿಗೆ ಬೇಲಿ ನಿರ್ಮಾಣ ಮಾಡಿಕೊಳ್ಳುವ ಹಂತಕ್ಕೆ ತಲುಪುತ್ತದೆ.

ಬೇರೆಯವರು ಇವರು ವಾಸಿಸುವ ಹಟ್ಟಿಗಳಿಗೆ ಪ್ರವೇಶ ಪಡೆಯುವುದೇ ಕಷ್ಟ. ಈ ವಿಷಯದಲ್ಲಿ ಇಂದಿಗೂ ಸ್ವಲ್ಪ ಪ್ರಮಾಣದ ಬಿಗಿ ಇದ್ದೇ ಇದೆ. ಪೂಜಾರಿಗಳಾದರಂತೂ ಈ ಮಡಿವಂತಿಕೆ ಇನ್ನುಷ್ಟು ಹೆಚ್ಚು. ಪೂಜಾರಿಗಳಾದವರು ಮೈಗೆ ಅಂಗಿ ಧರಿಸುವಂತಿಲ್ಲ. ಎಲ್ಲ ಕುಲದವರು ಪಯಣಿಸುವ ವಾಹನದಲ್ಲಿ ಸಹ ಪ್ರಯಾಣ ನಿಷೇಧ. ತಾನು ಉಣ್ಣುವ ತಟ್ಟೆ ಬಿಟ್ಟು ಬೇರೆ–ತಟ್ಟೆಯಲ್ಲಿ ಉಣ್ಣುವುದು ನಿಷಿದ್ಧ. ಇವೇ ಮೊದಲಾದ ನಿಷೇಧಗಳು ಮಡಿವಂತಿಕೆಯ ಅಥವಾ ಪಾವಿತ್ರ್ಯ ಕಲ್ಪನೆಯ ಭಾಗವಾಗಿ ಎರಡು ಸಮುದಾಯಗಳಲ್ಲಿ ಕಾಣಸಿಗುತ್ತದೆ.

ಬತ ಸಂಪ್ರದಾಯ: ಕೆಲವೊಂದು ದಾನ್ಯಗಳನ್ನು ತಿನ್ನಬಾರದೆಂಬ ನಿಷೇಧವೆ ಬತ, ಗೊಲ್ಲರಲ್ಲಿ ನವಣೆ ಬತ, ನಾಯಕರಲ್ಲಿ ಉಳ್ಳಿ ಬತ ಪ್ರಧಾನವಾಗಿವೆ. ನಾಯಕರ ಬೊಮ್ಮದೇವಡ್ಲು ಕುಲದವರು ನವಣೆ ಬತ ಅನುಸರಿಸುತ್ತಾರೆ. ಕಾಡುಗೊಲ್ಲರ ಕ್ಯಾತಪ್ಪ ದೇವರ ಒಕ್ಕಲು ನವಣೆ ಹಾಗೂ ಉಳ್ಳಿ ಬತವನ್ನು ಅನುಸರಿಸುತ್ತಾರೆ.

ಹಂದಿ–ಕೋಳಿ– ನಿಷೇಧ : ನಾಯಕರಿಗೂ ಗೊಲ್ಲರಿಗೂ ಮತ್ತು ಅವರ ದೈವಗಳಿಗೂ ಹಂದಿ, ಕೋಳಿ ನಿಷಿದ್ಧ. ಇವರ ಹಟ್ಟಿಗಳಲ್ಲಿ ಹಂದಿ, ಕೋಳಿ ಪ್ರವೇಶವೇ ಇಲ್ಲ. ಅವುಗಳ ಮಾಂಸ ಬಳಸುವದಂತೂ ದೂರದ ಮಾತು. ಈ ಪ್ರಾಣಿಗಳು ಇವರಿಗೆ ಅದೆಷ್ಟು ವಿರುದ್ಧವೆಂದರೆ ಈ ಸಮುದಾಯಗಳ ದೇವರುಗಳ ಒಡವೆಯನ್ನು ಕಳವು ಮಾಡುವವರು ಮೊದಲು ದೈವಗಳಿಗೆ ಹಂದಿ ಮತ್ತು ಕೋಳಿ ಮಾಂಸವನ್ನು ಮುಟ್ಟಿಸಿ ಅವುಗಳ ಶಕ್ತಿ ಕಳೆದು ಒಡವೆ ಕಳವು ಮಾಡುತ್ತಾರೆ ಎಂಬುದು ಇಡೀ ಸಮುದಾಯಗಳ ನಂಬಿಕೆ.

ಮಾಂಸವೇ ನಿಷೇಧ : ಪ್ರಸ್ತುತ ಎರಡು ಸಮುದಾಯಗಳಲ್ಲಿ ಮಾಂಸ ಸಂಪೂರ್ಣ ನಿಷೇಧವಲ್ಲ. ಆದರೂ ಕೆಲವೊಮ್ಮೆ ಮಾತ್ರ ಸಂಪೂರ್ಣ ನಿಷೇಧ. ಜುಂಜಪ್ಪನ ಪೂಜಾರಿಗಳು, ಬೇಡರ ಬೊಮ್ಮದೇವರ ಒಕ್ಕಲುಗಳೂ ಪೂಜೆಗೆ ಹೋಗುವಾಗ ಮಾಂಸ ನಿಷೇಧ.

ಬಸವನವಾರ: ಸೋಮವಾರ ಎರಡು ಗುಂಪುಗಳಿಗೂ ಬಸವನವಾರ. ಅಂದು ಅವರು ಎತ್ತುಗಳ ಹೆಗಲಿಗೆ ನೋಗ ಇಡುವುದಿಲ್ಲ. ಇಂಥ ಅನೇಕ ಸಂಗತಿಗಳಲ್ಲಿ ಇವೆರಡು ಬುಡಕಟ್ಟುಗಳು ಸಮಾನವಾಗಿರುವುದು ಇವರು ಒಂದೇ ಸಂಪ್ರದಾಯದ ಎರಡು ಗುಂಪುಗಳೆಂಬುದನ್ನು ಸಾಬೀತುಪಡಿಸುತ್ತವೆ.


ಪರಾಮರ್ಶನ ಗ್ರಂಥಗಳು

೧. ಕಾಡುಗೊಲ್ಲರ ನಂಬಿಕೆ ಮತ್ತು ಸಂಪ್ರದಾಯಗಳು, ತೀ.ನಂ. ಶಂಕರನಾರಾಯಣ, ೧೯೮೨, ಮೈಸೂರು ವಿ.ವಿ. ಮೈಸೂರು.
೨. ಕಾಡುಗೊಲ್ಲರ ಇಬ್ಬರು ಸಾಂಸ್ಕೃತಿಕ ವೀರರು, ಮೀರಾಸಾಬಿಹಳ್ಳಿ ಶಿವಣ್ಣ, ೧೯೯೩, ಅಪ್ರಕಟಿತ ಪಿ.ಹೆಚ್.ಡಿ. ಮಹಾಪ್ರಬಂಧ, ಮೈಸೂರು ವಿ.ವಿ.
೩. ಗೊಲ್ಲ, ಕಡಗ, ಮೀರಾಸಾಬಿಹಳ್ಳಿ ಶಿವಣ್ಣ ೧೯೯೯ ಸಿ.ವಿ.ಜಿ. ಪ್ರಕಾಶನ, ಬೆಂಗಳೂರು.
೪. ಎತ್ತಪ್ಪ, ಮೀರಾಸಾಬಿಹಳ್ಳಿ ಶಿವಣ್ಣ, ೨೦೦೨, ಸಿ.ವಿ.ಜಿ. ಪ್ರಕಾಶನ, ಬೆಂಗಳೂರು.

೫. ಮ್ಯಾಸಮಂಡಲ, ಮೀರಾಸಾಬಿಹಳ್ಳಿ ಶಿವಣ್ಣ, ೨೦೦೪, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.
೬. ಕರ್ನಾಟಕದ ಬುಡಕಟ್ಟುಗಳು ಭಾಗ ೧, (ಸಂ) ಹೆಚ್.ಜೆ. ಲಕ್ಕಪ್ಪಗೌಡ, ೧೯೯೪ ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.
೭. ಮ್ಯಾಸಬೇಡರು, ಕೃಷ್ಣಮೂರ್ತಿಹನೂರು, ೧೯೯೩, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.
೮. ನನ್ನ ಕ್ಷೇತ್ರ ಕಾರ್ಯದ ಅನುಭವಗಳು.

# ಪಶುಪಾಲಕರಿಗೆ ವಿಪ್ಪತ್ತು ತಂದ ವಿಜ್ಞಾನ ನಗರಿ

ಭಾರತದ ಪ್ರಾಚೀನ ಚರಿತ್ರೆಯಲ್ಲಿ ಆರ್ಯನ್ನರ ಆಗಮನದ ಮೂಲಕ ಆದಿವಾಸಿ ಸಮುದಾಯಗಳಿಗೆ ತೀವ್ರವಾದ ಸಂಕಷ್ಟಗಳು ಎದುರಾಗಿರುವುದು ಪ್ರಾಚೀನ ಭಾರತದ ಚರಿತ್ರೆಯ ಪುಟಗಳಿಂದ ತಿಳಿಯಬಹುದು. ಮೂಲತಃ ಪಶುಪಾಲಕ ಸಮುದಾಯಗಳಿಗಂತೂ ನಾಗರೀಕತೆಯ ವಿಸ್ತಾರ ಹೆಚ್ಚಿದಂತೆಲ್ಲ ತಮ್ಮ ಮೂಲ ವೃತ್ತಿಗಳಿಗೆ ತೀವ್ರವಾದ ಸಂಕಟಗಳು ಒದಗಿ ಬಂದಿವೆ. ಆಧುನಿಕ ಸರ್ಕಾರಗಳು ಬಂದು ಅವುಗಳ ಅಭಿವೃದ್ಧಿಯ ಯೋಜನೆಗಳು ಎಷ್ಟು ದೊಡ್ಡ ಪ್ರಮಾಣದಲ್ಲಿ ಬೆಳೆದವೋ ಅದಕ್ಕಿಂತ ಹೆಚ್ಚಿನ ಪ್ರಮಾಣದಲ್ಲಿ ಪಶುಪಾಲಕರು ತಮ್ಮಗೆ ತೀರಾ ಅಗತ್ಯವಾಗಿದ್ದ ಕೆರೆ ಕಟ್ಟೆ ಕಾವಲುಗಳನ್ನು ಕಳೆದುಕೊಂಡು ಕಂಗಾಲಾಗಿರುವುದು ಗಮನಾರ್ಹ. ಅದಕ್ಕೆ ಸಮುದಾಯಗಳಿಂದ ಅಪಸ್ವರಗಳು ಕಂಡರೂ ಅಭಿವೃದ್ಧಿಯ ಹೆಸರಿನಲ್ಲಿ ಅವೆಲ್ಲವುಗಳನ್ನು ಹತ್ತಿಕ್ಕುತ್ತಾ ಬರಲಾಗಿದೆ. ಪ್ರಭುತ್ವದ ನೀತಿಗಳಿಗೆ ಎದುರಾಗಿ ನಿಲ್ಲುವಷ್ಟು ಸಶಕ್ತವಲ್ಲದ ಈ ಪಶುಪಾಲಕ ಸಮುದಾಯಗಳು ತಮ್ಮ ವೃತ್ತಿ ಬದ್ಧತೆಯನ್ನು ಪ್ರಕಟಪಡಿಸಲು ಸಾಧ್ಯವಾಗದ ಅಸಹಾಯಕತೆಯಲ್ಲಿ ನಲುಗಿ ಹೋಗಿವೆ. ಈ ಪ್ರಕ್ರಿಯೆ ಇಂದಿಗೂ ಮುಂದುವರೆದಿರುವುದು ವಿಶೇಷವೇನಲ್ಲ. ಇತ್ತೀಚೆಗೆ ಚಿತ್ರದುರ್ಗ ಜಿಲ್ಲೆಯ ನೇರ್ಲಗುಂಟೆ ಮತ್ತು ವರವು ಕಾವುಲು ಪ್ರದೇಶದಲ್ಲಿ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಸ್ಥಾಪಿಸಲು ಉದ್ದೇಶಿಸಿರುವ ಕೆಲವು ಅಭಿವೃದ್ಧಿ ಯೋಜನೆಗಳಿಂದ ಇಲ್ಲಿನ ಪಶುಪಾಲಕ ಸಮುದಾಯಗಳು ತೀವ್ರವಾದ ಬಿಕ್ಕಟ್ಟನ್ನು ಎದುರಿಸುತ್ತಿವೆ. ಈ ಬಗ್ಗೆ ಕೆಲವು ವಿಚಾರಗಳನ್ನು ಪ್ರಸ್ತಾಪಿಸುವುದು ಈ ಲೇಖನದ ಪ್ರಮುಖ ಉದ್ದೇಶವಾಗಿದೆ.

ಚಿತ್ರದುರ್ಗ ಜಿಲ್ಲೆ ಚಳ್ಳಕೆರೆ ತಾಲ್ಲುಕಿನ ನೇರ್ಲಗುಂಟೆ ಹಾಗೂ ವರವು ಕಾವಲುಗಳಲ್ಲಿ ಅಭಿವೃದ್ಧಿಯ ಹೆಸರಿನಲ್ಲಿ ಸುಮಾರು ೯೭೨೩ ಎಕರೆ ಜಿಲ್ಲಾ ಸಂರಕ್ಷಿತ ಅರಣ್ಯವನ್ನು ವಶಪಡಿಸಿಕೊಂಡು ವಿವಿಧ

ರೀತಿಯ ಸಂಶೋಧನಾ ಹಾಗೂ ಅಧ್ಯಯನ ಕೇಂದ್ರಗಳನ್ನು ಸ್ಥಾಪಿಸುವ ಕಾರ್ಯ ಭರದಿಂದ ಸಾಗಿದೆ. ರಕ್ಷಣಾ ಸಂಶೋಧನೆ ಮತ್ತು ಅಭಿವೃದ್ಧಿ ಸಂಸ್ಥೆಗೆ ವರವು, ಕುದಾಪುರ ಬಳಿ ೪೨೯೦ ಎಕರೆ, ಭಾರತೀಯ ವಿಜ್ಞಾನ ಸಂಸ್ಥೆ ಗೆ ಕುದಾಪುರ ಬಳಿ ೧೫೦೦ ಎಕರೆ, ಇಂಡಿಯನ್ ಸ್ಪೇಟ್ ರೀಸರ್ಚ್ ಆರ್ಗನೈಸೇಷನ್ಗೆ ದೊಡ್ಡಉಳ್ಳಾರ್ತಿ, ಕುದಾಪುರ ಬಳಿ ೫೭೩ ಎಕರೆ, ಬಾಬಾ ಅಣು ಸಂಶೋಧನಾ ಕೇಂದ್ರ ದೊಡ್ಡಉಳ್ಳಾರ್ತಿ, ಕುದಾಪುರ ಬಳಿ ೧೮೧೦ ಎಕರೆ, ರಾಜ್ಯ ಕೈಗಾರಿಕಾ ಅಭಿವೃದ್ಧಿ ನಿಗಮ ದೊಡ್ಡಉಳ್ಳಾರ್ತಿ, ಕುದಾಪುರ ಬಳಿ ೩೦೦ ಎಕರೆ, ಕರ್ನಾಟಕ ಗೃಹ ಮಂಡಳಿ ಕುದಾಪುರ ಬಳಿ ೫೦ ಎಕರೆ, ಸಗಿಬೌರ್ ವೆಂಚ್ಯೂರ್ಸ್(ಸೋಲಾರ್ ಪ್ಲಾಂಟ್)ಗೆ ೧೨೫೦ ಎಕರೆ, ಹೀಗೆ ೯೮೭೦ ಎಕರೆ ಅಮೃತ ಮಹಲ್ ಕಾವಲು ಪ್ರದೇಶವನ್ನು ಹಂಚಿಕೆ ಮಾಡಲಾಗಿದೆ.

ಈ ಬಗ್ಗೆ ಕೆಲವರು 'ಕೆಲಸಕ್ಕೆ ಬಾರದ ಹಾಳು ಕೊಂಪೆಯಂತಿದ್ದ ಈ ಕಾಡು ಹಲವು ಯೋಜನೆಗಳ ಬೀಡಾಗುತ್ತಿರುವುದು ಇಡೀ ಈ ಪ್ರದೇಶದ ಜನರಿಗೆ ಸಂತೋಷವಾಗಿದೆ' ಎಂದು ಭಾವಿಸಿದ್ದಾರೆ. ಈಗಾಗಲೇ ನಿರ್ಮಾಣ ಹಂತದಲ್ಲಿರುವ ವಿವಿಧ ರೀತಿಯ ಕಾಮಗಾರಿಗಳು ಹಾಗೂ ಅದರಲ್ಲಿ ಜನರ ಪಾಲ್ಗೊಳ್ಳುವಿಕೆಯನ್ನು ಗಮನಿಸಿದರೆ ಮೇಲಿನ ಮಾತುಗಳು ಖಂಡಿತಾ ತಮಾಷೆಯಾಗಿವೆ. ಶಾಲೆಯಿಂದ ಹೋಗಿಬರುವ ಹೊರಸಂಚಾರದ ನೆಪದಲ್ಲಿ ನೋಡುವ ಖುದಾಪುರದ ಕುರಿ ಸಂವರ್ಧನಾ ಕೇಂದ್ರ ಹಾಗೂ ಅಲ್ಲಿನ ಸ್ವಲ್ಪ ಪ್ರದೇಶಕ್ಕೆ ಅವರ ಮಾತುಗಳು ಸೀಮಿತವಾಗಿವೆ. ಕುರಿ ಸಂವರ್ಧನಾ ಕೇಂದ್ರದ ನಿರ್ವಹಣೆ ಸರಿಯಾಗದೇ ಸರ್ಕಾರಕ್ಕೆ ಹೊರೆಯಾಗಿತ್ತು, ಅದರ ಬದಲಿಗೆ ಈ ಸಂಶೋಧನಾ ಕೇಂದ್ರಗಳು ಬಂದಿದ್ದು ಸೂಕ್ತವಾಗಿದೆ ಎಂಬ ಭಾವ ಇಲ್ಲಿ ಮುಖ್ಯವಾದಂತಿದೆ. ಆದರೆ ಇಲ್ಲಿ ನಿಜವಾದ ಸಮಸ್ಯೆ ಇರುವುದು ೯೭೨೩ ಎಕರೆ ಪ್ರದೇಶದ ಕಾವಲುಗಳನ್ನು ಅವಲಂಭಿಸಿ ಬದುಕುತಿದ್ದ ಹಳ್ಳಿಗಳ ಪಶುಪಾಲಕ ಹಾಗೂ ಕೂಲಿಮಾಡುವ ಜನರಲ್ಲಿ. ಹಾಗಾಗಿ ಸುತ್ತ ಮುತ್ತಲಿನ ಸುಮಾರು ನೂರಾರು ಗ್ರಾಮಗಳಲ್ಲಿ ಈ ಕಾವಲುಗಳನ್ನು ಅವಲಂಭಿಸಿ ಬದುಕುತಿದ್ದ ಜನ ಇಂದು ತಲುಪಿರುವ ಸ್ಥಿತಿಯನ್ನು ಅಗತ್ಯವಾಗಿ ಗಮನಿಸಬೇಕಾಗಿದೆ. ಆಗ ಇಲ್ಲಿಗೆ ಬರುವುದೆಲ್ಲವೂ ಬೆಲ್ಲವೇ ಆಗುವುದಿಲ್ಲ ಎಂಬುದು ಮನವರಿಕೆಯಾಗುತ್ತದೆ.

ಈ ಬಗ್ಗೆ ಕೆಲವರು 'ಕೆಲಸಕ್ಕೆ ಬಾರದ ಹಾಳು ಕೊಂಪೆಯಂತಿದ್ದ ಈ ಕಾಡು ಹಲವು ಯೋಜನೆಗಳ ಬೀಡಾಗುತ್ತಿರುವುದು ಇಡೀ ಈ ಪ್ರದೇಶದ ಜನರಿಗೆ ಸಂತೋಷವಾಗಿದೆ' ಎಂದು ಭಾವಿಸಿದ್ದಾರೆ. ಈಗಾಗಲೇ ನಿರ್ಮಾಣ ಹಂತದಲ್ಲಿರುವ ವಿವಿಧ ರೀತಿಯ ಕಾಮಗಾರಿಗಳು ಹಾಗೂ ಅದರಲ್ಲಿ ಜನರ ಪಾಲ್ಗೊಳ್ಳುವಿಕೆಯನ್ನು ಗಮನಿಸಿದರೆ ಮೇಲಿನ ಮಾತುಗಳು ಖಂಡಿತಾ ತಮಾಷೆಯಾಗಿವೆ. ಶಾಲೆಯಿಂದ ಹೋಗಿಬರುವ ಹೊರಸಂಚಾರದ ನೆಪದಲ್ಲಿ ನೋಡುವ ಖುದಾಪುರದ ಕುರಿ ಸಂವರ್ಧನಾ ಕೇಂದ್ರ ಹಾಗೂ ಅಲ್ಲಿನ ಸ್ವಲ್ಪ ಪ್ರದೇಶಕ್ಕೆ ಇಂತಹವರ ಮಾತುಗಳು ಸೀಮಿತವಾಗಿವೆ. ಕುರಿ ಸಂವರ್ಧನಾ ಕೇಂದ್ರದ ನಿರ್ವಹಣೆ ಸರಿಯಾಗದೇ ಸರ್ಕಾರಕ್ಕೆ ಹೊರೆಯಾಗಿತ್ತು, ಅದರ ಬದಲಿಗೆ ಈ ಸಂಶೋಧನಾ ಕೇಂದ್ರಗಳು ಬಂದಿದ್ದು ಸೂಕ್ತವಾಗಿದೆ ಎಂಬ ಭಾವ ಇಲ್ಲಿ ಮುಖ್ಯವಾದಂತಿದೆ. ಆದರೆ ಇಲ್ಲಿ ನಿಜವಾದ ಸಮಸ್ಯೆ ಇರುವುದು ೯೭೨೩ ಎಕರೆ ಪ್ರದೇಶದ ಕಾವಲುಗಳನ್ನು ಅವಲಂಭಿಸಿ

ಬದುಕುತಿದ್ದ ಹಳ್ಳಿಗಳ ಪಶುಪಾಲಕ ಹಾಗೂ ಕೂಲಿಮಾಡುವ ಜನರಲ್ಲಿ. ಹಾಗಾಗಿ ಸುತ್ತ ಮುತ್ತಲಿನ ಸುಮಾರು ನೂರಾರು ಗ್ರಾಮಗಳಲ್ಲಿ ಈ ಕಾವಲುಗಳನ್ನು ಅವಲಂಭಿಸಿ ಬದುಕುತಿದ್ದ ಜನ ಇಂದು ತಲುಪಿರುವ ಸ್ಥಿತಿಯನ್ನು ಅಗತ್ಯವಾಗಿ ಗಮನಿಸಬೇಕಾಗಿದೆ. ಆಗ ಇಲ್ಲಿಗೆ ಬರುವುದೆಲ್ಲವೂ ಬೆಲ್ಲವೇ ಆಗುವುದಿಲ್ಲ ಎಂಬುದು ಮನವರಿಕೆಯಾಗುತ್ತದೆ.

ಈ ಭಾಗದಲ್ಲಿ ಬದುಕುತ್ತಿರುವ ಜನರಲ್ಲಿ ಬಹುಪಾಲು ಜನ ಪಶುಪಾಲನೆಯನ್ನು ಪ್ರಧಾನ ವೃತ್ತಿಯನ್ನಾಗಿಸಿಕೊಂಡವರು. ಈ ಗುಂಪಿನಲ್ಲಿ ಕುರಿ–ಮೇಕೆ ಸಾಕುವವರ ಸಂಖ್ಯೆ ದೊಡ್ಡದು. ಕೆಲವೇ ವರ್ಷಗಳ ಹಿಂದೆ ಇಲ್ಲಿನ ಹಲವಾರು ಕುಟುಂಬಗಳಲ್ಲಿ ಸಾವಿರಾರು ಸಂಖ್ಯೆಯ ಕುರಿ ಮೇಕೆಗಳಿದ್ದು ಉತ್ತಮ ಆರ್ಥಿಕ ಸ್ಥಿತಿಯನ್ನು ಹೊಂದಿದ್ದರು. ಕಳೆದ ಕೆಲವಾರು ವರ್ಷಗಳಲ್ಲಿ ಕಾವಲುಗಳ ಒತ್ತುವರಿ ಪ್ರದೇಶದಲ್ಲಿ ಸ್ಥಿತಿವಂತರೇ ಜಮೀನಿಗಾಗಿ ಕಾಡನ್ನು ನಾಶಪಡಿಸಿದರು. ಇಷ್ಟರಿಂದಲೇ ಘಾಸಿಗೊಂಡಿದ್ದ ಈ ಜನ ವಿಜ್ಞಾನ ನಗರಿ ಮಾಡಲು ಬಂದು ಬಹುಪಾಲು ಕಾವಲನ್ನು ವಶ ಪಡಿಸಿಕೊಂಡಿರುವುದರಿಂದ ಮುಂದೇನು ಮಾಡಬೇಕೆಂದು ತೋಚದವರಾಗಿದ್ದಾರೆ. ತಮ್ಮ ಕುರಿ ಹಾಗೂ ಮೇಕೆ ಸಾಕಾಣಿಕೆಗೆ ಕಾವಲುಗಳು ಸಿಗುವುದಿಲ್ಲವೆಂದು ತಿಳಿದಾಗ ತಮ್ಮ ಕುರಿ ಮೇಕೆಗಳನ್ನು ಮಾರಿದ್ದಾರೆ. ಇದಿಷ್ಟೇ ಅಲ್ಲದೇ ಈ ಕಾವಲುಗಳಲ್ಲಿ ದೊರೆಯುತ್ತಿದ್ದ ಕಾರೆ ಹಾಗೂ ಕೌಳೆ ಹಣ್ಣುಗಳನ್ನು ಕಿತ್ತು ತಂದು ಮಾರಿ ಜೀವನ ನಡೆಸುತ್ತಿದ್ದರು. ಹಾಗೆಯೇ ಈ ಕಾವಲಿನ ಒಳಗೆ ಹುತ್ತಗಳಲ್ಲಿ ಸಿಗುತ್ತಿದ್ದ ಹುತ್ತದ ಹುಳಗಳ'ನ್ನು ಹಿಡಿದು ಪೇಟೆಯಲ್ಲಿ ಮಾರಿ ಜೀವಿಸುತ್ತಿದ್ದ ಅದೆಷ್ಟೋ ಕುಟುಂಭಗಳಿದ್ದವು. ಇಲ್ಲಿ ದೊರೆಯುತ್ತಿದ್ದ ಈಚಲು ಹಾಗೂ ಹೂಲಿ ಗಿಡಗಳ ಕಡ್ಡಿಗಳಿಂದ ಪೊರಕೆ, ಬುಟ್ಟಿ ಮಾಡಿ ಜೀವಿಸುತ್ತಿದ್ದ ನೂರಾರು ಸಂಸಾರಗಳಿದ್ದವು. ಒಟ್ಟಾರೆ ಹತ್ತಾರು ರೀತಿಯ ಬುಕಿನ ಮಾರ್ಗಗಳು ಅಲ್ಲಿದ್ದವು. ಕಾಡಿನಲ್ಲಿ ವಿಶೇಷವಾದ ಜಿಂಕೆಗಳ ದೊಡ್ಡ ಸಮೂಹವೇ ಇತ್ತು ; ಈಗ ಈ ಕಾವಲು ಪ್ರದೇಶದ ಬಹು ಭಾಗಕ್ಕೆ ಎರಡು ಆಳೆತ್ತರದ ಗೋಡೆಯನ್ನು ನಿರ್ಮಿಸಿದ್ದರ ಪರಿಣಾಮ ಜನ ಹಾಗೂ ಪ್ರಾಣಿ– ಪಕ್ಷಿಗಳು ಬೀದಿಗೆ ಬಿದ್ದಿದ್ದಾರೆ.

ಚಳ್ಳಕೆರೆ ಭಾಗದಲ್ಲಿ ಸುಮಾರು **೪.೫೬** ಲಕ್ಷ ಹಸುಗಳಿವೆ. ಆ ಪೈಕಿ ೧.೧೦ ಲಕ್ಷ ಹಸುಗಳು ಸರ್ಕಾರ ವಶಪಡಿಸಿಕೊಂಡ **೮,೯೩೨.೨೦** ಎಕರೆ ಜಮೀನನ್ನೇ ಆಶ್ರಯಿಸಿವೆ. ವಿಶೇಷವಾಗಿ ಈ ಭಾಗದಲ್ಲಿ ಬರಗಾಲದಲ್ಲೂ ಬದುಕಬಲ್ಲ ಅಮೃತ್ಮಹಲ್ ತಳಿಯ ಹಸುಗಳು ಹೆಚ್ಚಾಗಿವೆ. ಕೃಷಿಗಿಂತ ಇಲ್ಲಿನ ರೈತರು ಪಶು ಸಂಗೋಪನೆಯನ್ನೇ ಅವಲಂಬಿಸಿದ್ದಾರೆ. ೧೦೦ ಹಸುಗಳಿಗೆ ೧೨ ಎಕರೆ ಗೋಮಾಳ ಜಮೀನು ಮೀಸಲಿಡಬೇಕು ಎಂಬ ನಿಯಮವಿದೆ. ಆದರೆ, ವಶಪಡಿಸಿಕೊಳ್ಳಲಾದ ಜಮೀನಿಗೆ ಸರ್ಕಾರ ಪರ್ಯಾಯ ಜಮೀನು ನೀಡಿಲ್ಲ.

ಅಷ್ಟೇ ಅಲ್ಲ ಕಂಪನಿಗಳಿಗೆ ನೀಡಿರುವ ಪ್ರದೇಶದಲ್ಲಿ ಈ ಭಾಗದ ಮ್ಯಾಸ ನಾಯಕರ ಸಾಂಸ್ಕೃತಿಕ ಬದುಕು ಇದೆ ಎಂಬುದು ಯಾರಿಗೂ ತಿಳಿಯದ ವಿಷಯವಾಗಿದೆ. ಈ ಕಾವಲನ್ನು ಅವಲಂಭಿಸಿ ನಲಗೇತನಹಟ್ಟಿ ಗುಡಿಕಟ್ಟಿನ ನಲಗೇತಲ ಮುತ್ತಯ್ಯಗಳು (ದೇವರ ಎತ್ತುಗಳು),

ಬೋಸೇದೇವರ ಹಟ್ಟಿಯ ದೇವರ ಎತ್ತುಗಳು, ನನ್ನಿವಾಳ ಕಟ್ಟೆಮನೆಯ ಬೊಮ್ಮದೇವರ ಎತ್ತುಗಳು, ಗಾದ್ರಿಪಾಲಯ್ಯನ ಎತ್ತುಗಳು ಹಾಗೂ ಬೋಸೇ ದೇವರ ಎತ್ತಯ್ಯಗಳು ಹೀಗೆ ಹಲವು ದೇವರ ಎತ್ತುಗಳ ಗುಂಪುಗಳು ಇದೇ ಕಾಡನ್ನು ಅವಲಂಭಿಸಿವೆ. ಅವುಗಳ ಹುಲ್ಲು ನೀರು ಹಾಗೂ ಗೂಡು ನಿರ್ಮಾಣಕ್ಕೆ ಈಗ ಪರದಾಡುವ ಸ್ಥಿತಿ ನಿರ್ಮಾಣವಾಗಿದೆ. ದೇವರ ಎತ್ತುಗಳನ್ನು ಈ ಆಕ್ರಮಿತ ಕಾವಲಿಗಳಲ್ಲಿ ಮೇಯಿಸುವುದಾಗಲಿ, ಅಲ್ಲಿ ಗೂಡು ಇಡುವುದಾಗಲಿ ಅಸಾಧ್ಯದ ಮಾತೇ ಆಗಿದೆ. ಅಷ್ಟೇ ಅಲ್ಲ ಯರಗಟ್ಟನಾಯಕನ ಕಣಿವೆ, ಬಾಯಿಲ ಏಙು ಇವೇ ಮೊದಲಾದ ಸಾಂಸ್ಕೃತಿಕ ತಾಣಗಳು ಕಂಪನಿಗಳ ವಶವಾಗಿವೆ. ಮ್ಯಾಸ ನಾಯಕರು ಪ್ರತೀ ವರ್ಷ ಈ ಕೆಲವು ಜಾಗಗಳಿಗೆ ಹೋಗಿ ಪೂಜೆ ಸಲ್ಲಿಸಿ ಬರುವುದುಂಟು ಇಂಥ ಎಲ್ಲಾ ಸಾಂಸ್ಕೃತಿಕ ಕೆಲಸಗಳಿಗೆ ಇಂದು ತಡೆಯಾಗಿದೆ.

ಎಲ್ಲರು ಹೇಳುವಂತೆ  ಈ ಕೇಂದ್ರಗಳು ದೇಶದ ಅಭಿವೃದ್ದಿಯಲ್ಲಿ ಬಹಳ ಮುಖ್ಯ. ಇಂತಹ ಮಹತ್ವದ ಕೇಂದ್ರಗಳನ್ನು ಹೊಂದಿದ ಕೀರ್ತಿ ನಮ್ಮ ಭಾಗದ್ದು. ಇವುಗಳಿಗೆ ಸ್ಥಾನ ಕೊಡುವುದರ ಮೂಲಕ ನಮ್ಮ ಊರನ್ನು ಜಗತ್ತಿನ ಭೂಪಟದಲ್ಲಿ ಮೂಡಿಸುತ್ತೇವೆ ಎಂಬ ಎಂಬ ಹೆಮ್ಮೆಯನ್ನು ಇಲ್ಲಿನ ಬಹುಪಾಲು ಜನ  ಹೊಂದಿದ್ದರು.  ಇದರ ಪರಿಣಾಮ ಸ್ವಲ್ಪ ಅಸಮಾಧಾನದಿಂದಲೆ ತಮ್ಮ ಕುರಿ–ಮೇಕೆಗಳನ್ನು, ಕೇಂದ್ರಗಳು ನಿರ್ಮಾಣವಾಗಲಿರುವ ಪ್ರದೇಶಗಳ ಸುತ್ತಾ ಮುತ್ತಲಿನ ತಮ್ಮ ಖಾತೆಯಿರುವ ಜಮೀನುಗಳನ್ನು ಉಧ್ಯಮಿಗಳಿಗೆ ಮಾರಿದರು. ಆದರೆ ಈ ಭಾವನೆ ಬಹಳ ಕಾಲ ಉಳಿಯಲಿಲ್ಲ . ಚಾಲಕ ರಹಿತ ಯುದ್ಧವಿಮಾನ ಪರೀಕ್ಷಾ ಕೇಂದ್ರದ ವಿಮಾನಗಳು ಕರ್ಣಪಟಲ ಹರಿದು ಹೋಗುವಷ್ಟು ಶಬ್ಧಮಾಡುತ್ತಾ ಹಾರಾಡಿದಾಗ; ಕಾವಲಿಗೆ ರಕ್ಷಣೆಯ ನೆಪದಲ್ಲಿ ಎತ್ತರದ ಗೋಡೆ ನಿರ್ಮಿಸಿದಾಗ; ಈ ಕೇಂದ್ರಗಳಲ್ಲಿ ನಮ್ಮ  ಓದಿದ ಮಕ್ಕಳಿಗೆ ನೌಕರಿ ಸಿಗುತ್ತೆ ಎಂದು ಕೊಂಡವರಿಗೆ 'ಡಿ' ಗ್ರೂಪ್ ನೌಕರಿಗೂ ಇಂಗ್ಲೀಷ್ ಹಾಗೂ ಹಿಂದಿ ಕಡ್ಡಾಯ ಎಂಬುದಾಗಿ ಜಾಹಿರಾತು ಬಂದಾಗ; ಉನ್ನತ ಮಟ್ಟದ ಬಹಳಷ್ಟು ಜನ ಇಲ್ಲಿಗೆ ಬರುವುದರಿಂದ ಅವರಿಗೆ ಬೇಕಾದ ವಸ್ತುಗಳ ವ್ಯಾಪಾರ ಮಾಡಬಹುದು ಎಂದುಕೊಂಡವರಿಗೆ 'ಇದು ಮಿಲಿಟರಿ ನೆಲೆಯಾದ್ದರಿಂದ ಆಹಾರವೂ ಸೇರಿದಂತೆ ಎಲ್ಲವೂ ನೇರವಾಗಿ ಅಲ್ಲಿಗೆ ಪೂರೈಕೆಯಾಗುತ್ತದೆ. ಸಣ್ಣ ಬೆಂಕಿಪೊಟ್ಟಣವನ್ನು ಸಹಾ ಯಾರೂ ಕೊಳ್ಳುವುದಿಲ್ಲ.' ಎಂದು ತಿಳಿದಾಗ ಸಮಸ್ಯೆಯ ಅರಿವಾಗಿದೆ. ಆದರೆ  ಕಾಲ ಮಿಂಚಿಹೋಗಿದೆ. ಈಗ ಈ ಅಭಿವೃದ್ಧಿ ಯೋಜನೆಗಳನ್ನು ವಿರೋಧಿಸುವಂತೆಯೂ ಇಲ್ಲ. ಅವುಗಳೊಟ್ಟಿಗೆ ಬದುಕುವಂತೆಯೂ ಇಲ್ಲ. ಬಾಯಲ್ಲಿ ಬಿಸಿ ತುಪ್ಪ ಹಾಕಿಕೊಂಡ ಸ್ಥಿತಿ ಈ ಭಾಗದ ಜನರದಾಗಿದೆ.

ನಾಗೇಶ್ ಹೆಗಡೆಯವರು ತಮ್ಮ ಲೇಖನವೊಂದರಲ್ಲಿ ಯಾವುದೇ ಯೋಜನೆಯ ಜಾರಿಯಿಂದಾಗುವ ಪರಿಣಾಮಗಳ ಯೋಚಿಸಿದೇ ಇರುವ' ಆಡಳಿತದ ಅಸ್ಸೀಮ ನಿರ್ಲಕ್ಷೆಯಿಂದಲೇ ಇಂಥ ಅವಘಡಗಳು ಪದೆ ಪದೆ ಜರಗುತ್ತವೆ.  ಅಧಿಕಾರ ವ್ಯವಸ್ಥೆಗಳು ಯಾವಾಗಲೂ ಮಾಡಿರುವುದು ಇದೇ ಬಗೆಯ ತಂತ್ರಗಳನ್ನೇ. ಇಂಥ ಅಧಿಕಾರ ತಂತ್ರಗಳ ನಡುವೆ ನಾಶವಾಗುವವರು ಸಾಮಾನ್ಯ ಜನ ಮಾತ್ರ. ಭೂಮಿ ಸರ್ಕಾರದ್ದು ಎಂದಾಕ್ಷಣ ಏನನ್ನಾದರೂ ಮಾಡಬಹುದೆಂಬ ಮನೋಭಾವನೆಗಳು

ಹೆಚ್ಚಾಗಿವೆ. ಹಾಗಾಗಿಯೇ ಇಂಥ ಯೋಜನೆಗಳನ್ನು ಆರಂಭಿಸುವಾಗ ಜನರ ಅಭಿಪ್ರಾಯಗಳಿಲ್ಲದೆ ಸರ್ವಾಧಿಕಾರಿಗಳಂತೆ ವರ್ತಿಸುತ್ತಾರೆ. ಕಳೆದ ಎರಡು ದಿನಗಳ ಹಿಂದೆ ( ಏ.೧೯ ೨೦೧೪) ಅರಣ್ಯವಾಸಿಗಳ ಭೂಮಿ ಹಕ್ಕಿನ ಬಗ್ಗೆ ಸುಪ್ರಿಂ ಕೋರ್ಟ್ ನೀಡಿರುವ ಒಂದು ತೀರ್ಪು ಇಲ್ಲಿ ಗಮನಾರ್ಹ. ಆ ತೀರ್ಪಿನಲ್ಲಿ ಹೇಳಿರುವಂತೆ ' ಸ್ಥಳೀಯ ಜನರ ಸಾಮಾಜಿಕ ,ರಾಜಕೀಯ ಮತ್ತು ಸಾಂಸ್ಕೃತಿಕ ಹಕ್ಕುಗಳನ್ನು ರಕ್ಷಿಸುವುದು ಬಹಳ ಮುಖ್ಯ. ಆದ್ದರಿಂದ ಯಾವುದೇ ಕೈಗಾರಿಕೆಯನ್ನು ಸ್ಥಾಪಿಸುವ ಮೊದಲು ಆಯಾ ಸ್ಥಳಗಳ ಗ್ರಾಮ ಸಭೆಗಳ ಅನುಮತಿ ಕಡ್ಡಾಯವಾಗಬೇಕು' ಎಂದು ಅಭಿಪ್ರಾಯ ಪಟ್ಟಿದೆ. ಹಾಗೆಯೇ ಮುಂದುವರೆದು 'ಪರಿಶಿಷ್ಟ ಪಂಗಡ ಹಾಗೂ ಅರಣ್ಯ ವಾಸಿಗಳು ತಮ್ಮ ನೆಲದ ಜೊತೆ ಭಾವನಾತ್ಮಕ ಸಂಬಂಧವನ್ನು ಮುಂದುವರೆಸಿಕೊಂಡು ಹೋಗುವ ಎಲ್ಲಾ ಹಕ್ಕನ್ನು ಪಡೆದಿದ್ದಾರೆ. ಕೃಷಿಯ ಜೊತೆಗೆ ಕಿರು ಅರಣ್ಯ ಉತ್ಪನಗಳನ್ನು ಸಂಗ್ರಹಿಸಿ ಮಾರಾಟಮಾಡಿಕೊಂಡು ಜೀವನ ನಿರ್ವಹಣೆ ಮಾಡುವ ಹಕ್ಕನ್ನೂ ಹೊಂದಿದ್ದಾರೆ.' ಎಂಬುದನ್ನು ಒತ್ತಿ ಹೇಳಿದೆ.

ಈ ನಡುವೆ ಬಹಳಷ್ಟು ಮುಗ್ದ ಜನ ಈ ಬಗ್ಗೆ ಕೇಳುತ್ತಿರುವ ಪ್ರಶ್ನೆಗಳೆಂದರೆ : ಮುಖ್ಯವಾಗಿ ಈ ಕೇಂದ್ರಗಳ ಸ್ಥಾಪನೆ ಬಗ್ಗೆ ನಮಗೆ ಸ್ಪಷ್ಟ ಮಾಹಿತಿ ನೀಡಲಿಲ್ಲ ಏಕೆ? ಇವುಗಳ ನಿರ್ಮಾಣಕ್ಕೆ ನಿಜವಾಗಿಯೂ ಇಷ್ಟೊಂದು ಜಮೀನು ಬೇಕಿತ್ತಾ ? ನಾವು ದೇಶಕ್ಕೆ ವಿಶೇಷವಾದ ನೆರವು ನೀಡಿದೆವು ಎಂದ ಮೇಲೆ ದೇಶ ನಮಗೆ ಕೊಟ್ಟ ವಿಶೇಷ ಕೊಡುಗೆ ಏನು? ಬದುಕಿಗೆ ಆಧಾರವಾಗಿದ್ದ ಕಾವಲನ್ನು ಕಳೆದುಕೊಂಡ ನಮಗೆ ಮುಂದಿನ ದಾರಿಯಾವುದು? ಈ ಪ್ರಶ್ನೆಗಳಿಗೆ ಉತ್ತರ ಹೇಳುವವರು ಯಾರು ?

## ಬುಡಕಟ್ಟು ನೆಲೆಯಲ್ಲಿ ಮ್ಯಾಸನಾಯಕರು

ಕರ್ನಾಟಕದಲ್ಲಿ ನಾಯಕ, ತಳವಾರ, ವಾಲ್ಮಿಕಿ, ಬೇಡ ಇವೇ ಮೊದಲಾದ ಹೆಸರುಗಳಿಂದ ಗುರತಿಸಲ್ಪಡುವ ಸಮುದಾಯವನ್ನು ಬುಡಕಟ್ಟು ನೆಲೆಯಲ್ಲಿ ಪರಿಶೀಲಿಸುವುದು ಇಲ್ಲಿಯ ಪ್ರಧಾನ ಉದ್ದೇಶ. ಈ ಗುಂಪುಗಳು ಕಾಲಗತಿಯಲ್ಲಿ ಬುಡಕಟ್ಟಿನ ಅನನ್ಯತೆಯನ್ನು ಎಷ್ಟು ಉಳಿಸಿಕೊಂಡಿವೆ ಎಂದು ಗುರುತಿಸುವ ಕ್ರಮ ಒಂದೆರಡು ಅಪಾಯಗಳನ್ನು ಎದುರಿಸಬೇಕಾಗುತ್ತದೆ. ಅಂಥವುಗಳಲ್ಲಿ ಒಂದು ಹೊರಗಿನಿಂದ ಬರುವಂತಹದ್ದು. ಪ್ರಸ್ತುತ ಸಮುದಾಯ ಬುಡಕಟ್ಟು ಲಕ್ಷಣಗಳನ್ನು ಅಷ್ಟಾಗಿ ಉಳಿಸಿಕೊಂಡಿಲ್ಲ ಎಂದರೆ ಹೊರಗಿನವರು ಹಾಗಾದರೆ ಇವರು ಮೀಸಲಾತಿಗೆ ಅರ್ಹರಲ್ಲ ಎನ್ನಬಹುದು. (ನಾಯಕ ಅನ್ನುವ ಪದವನ್ನು ಶ್ರೇಷ್ಠವಾಗಿ ವ್ಯಾಖ್ಯಾನಿಸಿ, ಈ ನಾಯಕರಿಗೆ ಮೀಸಲಾತಿ ಪಟ್ಟಿಯಿಂದ ಹೊರಗಿಡಬೇಕೆಂದು ತಮ್ಮ ಲೇಖನವೊಂದರಲ್ಲಿ ವಾದಿಸಿದ ದಾಸನೂರು ಕೂಸಣ್ಣ ಅವರ ವಿಚಾರಗಳನ್ನು ಇಲ್ಲಿ ಸ್ಮರಿಸಬಹುದು). ಇಂತಲ್ಲಿ ಯಾವುದೇ ಒಂದು ಗುಂಪು ಮಾತ್ರ ಸ್ಪಷ್ಟ ಬುಡುಕಟ್ಟು ಲಕ್ಷಣಗಳನ್ನು ಹೊಂದಿದೆ ಎಂದು ಹೇಳಿದರೆ, ಒಳಗಿನವರು ಅಸೂಯೆ ಪರರಾಗುತ್ತಾರೆ. (ಸೋದರ ಸಮುದಾಯ  ಪರಿಶಿಷ್ಟ ಜಾತಿಯಲ್ಲಿ ನಡೆಯುವ ಒಳ ಮೀಸಲಾತಿ ಗದ್ದಲ ಇಲ್ಲಿಯೂ ಆರಂಭವಾಗುತ್ತದೆ) ಹಾಗಾಗಿ ನನ್ನ ಇಲ್ಲಿಯ ಶೋಧನೆಗೆ ಸಂವಿಧಾನಾತ್ಮಕವಾಗಿ ದತ್ತವಾಗುವ ಮತ್ತಿತರ ವಿಶೇಷ ಸೌಲಭ್ಯಗಳನ್ನು ಉಳಿಸಿಕೊಳ್ಳುವ ಅಥವಾ ಬಿಡುವ ಪ್ರಶ್ನೆಯಾಗದೆ, ಇಂಥ ಸೀಮಿತ ಪರಿಕಲ್ಪನೆಯನ್ನು ದಾಟುವ ಸಾಂಸ್ಕೃತಿಕ ಅಸ್ಮಿತೆಯ ಪ್ರಶ್ನೆ ಮುಖ್ಯವಾಗಿದೆ.

ಶೋಧನೆಗೆ ಮೊದಲು ಬುಡಕಟ್ಟು ಎಂದರೇನು? ಬುಡಕಟ್ಟಿನ ಪ್ರಧಾನ ಲಕ್ಷಣಗಳು ಯಾವುವು? ಎಂದು ಸ್ಪಷ್ಟಪಡಿಸಿಕೊಳ್ಳಬೇಕಾಗುತ್ತದೆ. ಬುಡಕಟ್ಟುಗಳ ಬಗ್ಗೆ ಅಧ್ಯಯನ ಆರಂಭಿಸಿದವರಲ್ಲಿ ಭಾರತದ ಮಟ್ಟಿಗೆ ಬ್ರಿಟೀಷರೆ ಮೊದಲೆನ್ನಬಹುದು. ಅಧಿಕಾರಿಗಳು ಕ್ರೈಸ್ತ ಪ್ರಾದಿಗಳು ಕ್ರಮವಾಗಿ ಆಡಳಿತ ಹಾಗೂ ಧರ್ಮ ಪ್ರಚಾರಗಳಿಗೆ ಅನುಕೂಲವಾಗುವಂತೆ ಬುಡಕಟ್ಟುಗಳ ಅಧ್ಯಯನ ನಡೆಸಿದ್ದಾರೆ. ಇಂಥವರ ಜೊತೆಗೆ ಕುತೂಹಲ ಹಾಗೂ ಅಪಾರ ಮಾನವೀಯ ಅಂತಃಕರಣದಿಂದ ಅಧ್ಯಯನ ನಡೆಸಿದ ವೆರಿಯರ್ ಎಲ್ವಿನ್ ಅಂಥವರು ಇದ್ದಾರೆ. ಬ್ರಿಟೀಷ್ ವಿದ್ವಾಂಸರು 'ಖಿಡಿಟಿಜ ಎನ್ನುವ ಹೆಸರಿನಿಂದ ಗುರುತಿಸಿದ ಸಮುದಾಯಗಳನ್ನು ಸ್ವಾತಂತ್ರ್ಯ ನಂತರ ಅಧ್ಯಯನ ಮಾಡಿದ ದೇಶಿ ವಿದ್ವಾಂಸರು ಗಿರಿಜನರು, ಆದಿವಾಸಿಗಳು, ಬುಡಕಟ್ಟುಗಳು ಮೊದಲಾದ ಹೆಸರುಗಳಿಂದ ಕರೆದರು. ಮೇಲಿನ ಹೆಸರುಗಳೇ ಸೂಚಿಸುವಂತೆ ಮನುಕುಲದ ಮೂಲ ಪುರುಷರು, ಗಿರಿಗಳಲ್ಲಿ ವಾಸಮಾಡುವವರು ಬುಡಕಟ್ಟು ಜನ ಎನಿಸಿಕೊಂಡರು. ಬುಡಕಟ್ಟು ಎಂಬ ಪದದ ಅರ್ಥವೂ ಕೂಡ ಅದೇ  ಆಗಿದೆ. "ಬುಡ ಅಂದರೆ ಮೂಲ; ಕಟ್ಟು ಎಂದರೆ ಸಾಂಸ್ಕೃತಿಕ ಮೌಲ್ಯಗಳ ಕಟ್ಟು ಕಟ್ಟಳೆ ಆಚರಣೆ, ಒಂದೇ ಮೂಲಕ್ಕೆ ಸೇರಿದ ಸಂಪ್ರದಾಯವನ್ನು ಪಾಲಿಸುವವರು ಬುಡಕಟ್ಟು ಜನ" (ಹೆಚ್.ಜೆ.ಲಕ್ಕಪ್ಪಗೌಡ: ೧೯೯೩:೩೭೦) ಇಂಥ ವ್ಯಾಖ್ಯಾನಗಳು ಬುಡಕಟ್ಟನ್ನು ನಿಖರವಾಗಿ ವ್ಯಾಖ್ಯಾನಿಸುವುದಕ್ಕಿಂತ ಬುಡಕಟ್ಟು ಎಂದರೆ ಯಾವುದು ಎಂದು ಹೇಳುವುದು ಸುಲಭ. ಕರ್ನಾಟಕದ ಬುಡಕಟ್ಟು ಒಂದನ್ನು ಪ್ರಥಮವಾಗಿ ದೀರ್ಘ ಅಧ್ಯಯನಕ್ಕೆ ಒಳಪಡಿಸಿದ  ತೀ.ನಂ. ಶಂಕರನಾರಾಯಣ ಅವರು ಅಂಥದೊಂದು ಪ್ರಯತ್ನ

ಮಾಡಿದ್ದಾರೆ. ಅವರು ಹೇಳುವಂತೆ "ಭಾರತದಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ನಾಲ್ಕು ಜಾತಿಗಳು ಮಾತ್ರವಲ್ಲದೆ ಹರಿಜನರಿಂದ ಕೂಡಿದ ಐದನೇ ಜಾತಿಯೂ ಇದೆ.... ಈ ಜಾತಿಗಳನ್ನು ಬಿಟ್ಟು ಉಳಿದ ಹಿಂದೂ ಸಾಮಾಜಿಕ ವರ್ಗಗಳನ್ನೆಲ್ಲ ಭಾರತದಲ್ಲಿ ಬುಡಕಟ್ಟುಗಳೆಂದು ಕರೆಯಬಹುದು"(ತೀ.ನಂ. ಶಂಕರನಾರಾಯಣ:೧೯೮೨:೦೨) ಈ ತರಹದ ವ್ಯಾಖ್ಯಾನ ಕೂಡ ಇಂದು ಅಷ್ಟೊಂದು ಸಮಂಜಸವಾಗಿ ಕಾಣುವುದಿಲ್ಲ. ಏಕೆಂದರೆ ಬುಡಕಟ್ಟು ಜಾತಿಗಳಾಗುವ, ಜಾತಿ ಬುಡಕಟ್ಟುಗಳಾಗುವ ಈಗಿನ ಸಂಕೀರ್ಣ ಸಂದರ್ಭದಲ್ಲಿ ಮೇಲೆ ಸೂಚಿಸಿದಂತೆ ಬುಡಕಟ್ಟುಗಳನ್ನು ಗುರುತಿಸುವುದು ಅಸಾಧ್ಯ.

ಬುಡಕಟ್ಟು ಎನಿಸಿಕೊಳ್ಳಬೇಕಾದರೆ ಒಂದು ಸಮುದಾಯ ಹೊಂದಿರಬೇಕಾದ ಅನೇಕ ಲಕ್ಷಣಗಳನ್ನು ವಿದ್ವಾಂಸರು ಪಟ್ಟಿಮಾಡಿದ್ದಾರೆ. ಅವು ಈ ಮುಂದಿನಂತಿವೆ.

೧. ಪ್ರತ್ಯೇಕ ಸಂಸ್ಕೃತಿ
೨. ರಕ್ತ ಸಂಬಂಧದ ಅತಿಯಾದ ಅವಲಂಬನೆ
೩. ಅನ್ಯವನ್ನು ಅನುಮಾನದಿಂದ ನೋಡುವ ದೃಷ್ಟಿ
೪. ಅತಿಯಾದ ಪಾವಿತ್ರ್ಯತೆ
೫. ದೈವದ ವಿಶಿಷ್ಟ ಕಲ್ಪನೆ ಹಾಗೂ ಅಪಾರ ಭಕ್ತಿ
೬. ಕಾಡಿಗೆ / ಪ್ರಕೃತಿಗೆ ಹತ್ತಿರವಾದ ಹಾಗೂ ಅವಲಂಬನೆಯ ಬದುಕು
೭. ಪ್ರತ್ಯೇಕ ಭಾಷೆ

ಈ ಎಲ್ಲಾ ಲಕ್ಷಣಗಳು ಒಂದೇ ಸಮುದಾಯದಲ್ಲಿ ದೊರೆಯುವುದು ವಿರಳ. ಇಂದು ಶುದ್ಧ ಬುಡಕಟ್ಟುಗಳೆಂದು ಕರೆಸಿಕೊಂಡ ಸಮುದಾಯಗಳಲ್ಲಿ ಕೂಡ ಈ ಎಲ್ಲಾ ಅಂಶಗಳು ಪೂರ್ಣ ಪ್ರಮಾಣದಲ್ಲಿ ಸಿಗಲಾರವು. ಈ ಹಿನ್ನೆಲೆಯಲ್ಲಿ ಕರ್ನಾಟಕದ ನಾಯಕ ಸಮುದಾಯದಲ್ಲಿ ದೊರೆಯುವ ಬುಡಕಟ್ಟು ಅಂಶಗಳನ್ನು ಗುರುತಿಸಬಹುದಾಗಿದೆ. ಇಲ್ಲಿಯೇ ಪ್ರಬಂಧದ ಮಿತಿಯನ್ನು ತಿಳಿಸುವುದು ಸೂಕ್ತ. ಪ್ರಸ್ತುತ ಪ್ರಯತ್ನದಲ್ಲಿ ಚಿತ್ರದುರ್ಗ, ದಾವಣಗೆರೆ, ಬಳ್ಳಾರಿ ಜಿಲ್ಲೆಗಳ ಮ್ಯಾಸನಾಯಕರ ಹಟ್ಟಿಗಳ ಸಂಪ್ರದಾಯ ಆಚರಣೆಗಳನ್ನು ವಿಶೇಷವಾಗಿ ಕ್ಷೇತ್ರಾಧ್ಯಯನದ ಹಿನ್ನೆಲೆಯಲ್ಲಿ ಗ್ರಹಿಸಲಾಗಿದೆ. ಹಾಗೆಯೇ ಆರಂಭದಿಂದ ಇಲ್ಲಿಯವರೆಗೆ ನಡೆದ ವಿದ್ವಾಂಸರ ಅಧ್ಯಯನಗಳಿಂದಲೂ ಹಲವಾರು ಮಾಹಿತಿಗಳನ್ನು ಬಳಸಿಕೊಳ್ಳಲಾಗಿದೆ.

### ೧. ಸಾಂಸ್ಕೃತಿಕ ಅನನ್ಯತೆ

ಪ್ರತ್ಯೇಕ ಸಂಸ್ಕೃತಿಯನ್ನು ಹೊಂದಿರುವುದು ಬುಡಕಟ್ಟು ಸಮುದಾಯಗಳ ಪ್ರಧಾನ ಲಕ್ಷಣ. ಸಮುದಾಯ ಒಂದರ ಉಗಮದಿಂದ ಆರಂಭಗೊಂಡ ಸಂಸ್ಕೃತಿ ನಿರಂತರವಾಗಿ ತನ್ನ ವಿಶಿಷ್ಟತೆಗಳೊಂದಿಗೆ ಮುಂದುವರೆಯುತ್ತದೆ. ಬುಡಕಟ್ಟುಗಳ ಇಂಥ ಸಂಗತಿಗಳು ಪುರಾಣ–ಆಚರಣೆ–

ನಂಬಿಕೆ–ಸಂಪ್ರದಾಯಗಳ ಮೂಲಕ ಉಳಿದು ಬೆಳೆದಿರುತ್ತವೆ. ಈ ಹಿನ್ನೆಲೆಯೊಳಗೆ ಬೇಡರ ಸಾಂಸ್ಕೃತಿಕ ವೈಶಿಷ್ಟಗಳನ್ನು ಗಮನಿಸಬಹುದಾಗಿದೆ.

ಜನನ: ಬೇಡರ ಸಮುದಾಯಗಳಲ್ಲಿ ಜನನ ಸಂಬಂಧೀ ಆಚರಣೆಗಳು ಹಲವು ಸಾಮಾನ್ಯ ಸಂಗತಿಗಳಾದರೂ ಕೆಲವು ವೈಶಿಷ್ಟ್ಯ ಪೂರ್ಣವಾಗಿವೆ. ಅಂಥವುಗಳಲ್ಲಿ ಜನನದ ಬಗ್ಗೆ ಇಟ್ಟುಕೊಂಡ ಮೈಲಿಗೆ ಭಾವ. ಇವರು ಕಾಡುಗೊಲ್ಲರಂತೆ ಬಾಣಂತಿಯನ್ನು ಪ್ರತ್ಯೇಕ ಗುಡಿಸಲಲ್ಲಿ ಇಡುವುದಿಲ್ಲ. ಆದರೂ ಹೆರಿಗೆಯಾದ ದಿನದಿಂದ ಮೂರು, ಐದು, ಏಳು, ಒಂಭತ್ತು, ಹನ್ನೊಂದು ದಿನಗಳಲ್ಲಿ 'ಮುಟ್ಟು ಹೊರಡಿಸುವ' ಆಚರಣೆ ಮಾಡುತ್ತಾರೆ. ಬೇವಿನ ಸೊಪ್ಪು ಗೋವು ಗಂಜಳದ ಮೂಲಕ ಬಾಣಂತಿಯನ್ನು ಶುದ್ಧೀಕರಿಸುತ್ತಾರೆ. ಈ ಸಮಯದಲ್ಲಿ ಮಗುವನ್ನು ಮೊರದಲ್ಲಿಟ್ಟು ಪೋಷಿಸುತ್ತಾರೆ. ಹಾಗೆಯೇ ಅನೇಕ ರೀತಿಯ ಭವಿಷ್ಯದ ಭಯಂಕರ ಕಾಯಿಲೆಗಳ ನಿಷೇಧಕ್ಕೆ ಕೆಲವೊಂದು ಪೂರ್ವಯೋಜಿತ ಮದ್ದುಗಳನ್ನು ಮಗುವಿಗೆ ಕುಡಿಸುತ್ತಾರೆ. ಇಲ್ಲಿಯೇ ಹೇಳಬಿಡಬಹುದಾದ ಸಂಗತಿ ಮಗುವಿನ ನಾಮಕರಣದ್ದು. ಮಗುವಿನ ಸೋದರತ್ತೆ ಹುರುಳಿ ಗುಗ್ಗರಿ ಗಂಟು ಹೊತ್ತು ಹೆಸರನ್ನು ಕರೆಯುತ್ತಾಳೆ. ಗುಗ್ಗರಿ ಗಂಟು ಹೊತ್ತು ಮೂರು ಬಾರಿ ಮನೆಯ ಹೊಸ್ತಿಲನ್ನು ದಾಟಿ ಹೆಸರು ಹೇಳುವ ಕ್ರಮ ಅತ್ಯಂತ ಗಮನಾರ್ಹವಾದುದಾಗಿದೆ.

ಋತಿಮತಿ ಆಚರಣೆ : ಋತಿಮತಿ, ಹೆರಿಗೆ ಮೊದಲಾದವು ಕೃಷಿ ಮೂಲ ಸಂಸ್ಕೃತಿಗಳಲ್ಲಿ ಫಲವಂತಿಕೆಯ ಸಂಕೇತಗಳು. ಆದರೆ ಬುಡಕಟ್ಟು ಸಮುದಾಯಗಳಲ್ಲಿ ಇವು ಮೈಲಿಗೆಯ ಸಂಗತಿಗಳು. ಮ್ಯಾಸನಾಯಕರಲ್ಲಿ ಋತಿಮತಿಯಾದ ಹೆಣ್ಣನ್ನು ತಕ್ಷಣವೇ ಹೊರಗೆ ಕಳುಹಿಸಿ, ಹಸಿರು ಸೊಪ್ಪಿನ (ವಿಶೇಷವಾಗಿ ಬೇವು, ಹೊಂಗೆ) ಗುಡಿಸಲು ನಿರ್ಮಿಸಿ ಅದರೊಳಗೆ ಬಿಡುತ್ತಾರೆ. ಒಂಭತ್ತು ಅಥವಾ ಹನ್ನೊಂದು ದಿನಗಳ ಕಾಲ ಋತುಮತಿಯಾದ ಹೆಣ್ಣು ಮಗಳು ಆ ಗುಡಿಸಲಲ್ಲಿ ವಾಸಿಸುತ್ತಾಳೆ. ಈ ಮಧ್ಯೆ ನೆಂಟರಿಷ್ಟರು ರುಚಿ ರುಚಿಯಾದ ಬಗೆಬಗೆಯ ತಿಂಡಿ ತಿನಿಸುಗಳನ್ನು ಆಕೆಗೆ ಒದಗಿಸುವ ಕ್ರಮವಿದ್ದು, ಇದನ್ನು 'ಒಸಗೆ' ಎನ್ನುತ್ತಾರೆ. ಸಮಯ ಮುಗಿದ ದಿನ ಸ್ನಾನ ಮಾಡಿಸಿ, ಸೋದರ ಮಾವನಿಂದ ಬೇವಿನ ಕಡ್ಡಿಯಿಂದ ನಾಲಗೆ ಸುಡಿಸಿ, ಗೋವು ಗಂಜಳವನ್ನು ಪ್ರೋಕ್ಷಿಸಿ ಮನೆಯ ಒಳಗೆ ಕರೆದುಕೊಳ್ಳುತ್ತಾರೆ. ಗಮನಾರ್ಹ ಸಂಗತಿ ಎಂದರೆ – ಕೆಲವು ಮ್ಯಾಸನಾಯಕರ ಪ್ರದೇಶಗಳಲ್ಲಿ ಋತಿಮತಿಯಾದ ತಕ್ಷಣ ಗುಡಿಸಲಿಗೆ ಕೂರಿಸದೆ, ಮದುವೆಯ ಸಂದರ್ಭಕ್ಕೆ ಆ ಸಂಪ್ರದಾಯವನ್ನು ನಡೆಸುತ್ತಾರೆ. ಗುಂಪುಗುಂಪಾಗಿ ಮದುವೆ ಮಾಡುವ ಅಲ್ಲಿನ ಎಲ್ಲಾ ಹೆಣ್ಣುಗಳನ್ನು ಒಂದೇ ಗುಡಿಸಲಿಗೊಳಗೆ ಇರಿಸುತ್ತಾರೆ. ಈ ಗುಂಪು ಗುಡಿಸಲಲ್ಲಿ ಇರುವಾಗ ಬಂಡೆಯಲ್ಲಿ ಆಹಾರ ಸ್ವೀಕರಿಸುವುದು ವಿಶೇಷ. ಬಂಡೆಯಲ್ಲಿ ಆಹಾರ ತಿನ್ನುವುದು ಮಾನವನ ಪ್ರಾಥಮಿಕ ಹಂತದ ಸ್ಥಿತಿಯನ್ನು ಬಿಂಬಿಸುತ್ತದೆ.

ಮದುವೆ ಸಂಪ್ರದಾಯಗಳು: ಬೇಡರ ವಿಶೇಷವಾಗಿ ಮ್ಯಾಸನಾಯಕರಲ್ಲಿ ಸಮುದಾಯದಲ್ಲಿ ಪ್ರಚಲಿತವಿರುವ ಮದುವೆ ಸಂಪ್ರದಾಯಗಳು ಸಮುದಾಯದ ಬುಡಕಟ್ಟು ಅನನ್ಯತೆಯನ್ನು ಪ್ರತಿಪಾದಿಸುತ್ತವೆ. ಮುಖ್ಯವಾಗಿ ಇಲ್ಲಿ ಹೆಣ್ಣಿಗೆ ಪ್ರಾಧ್ಯಾನ್ಯತೆ ಎಂಬುದನ್ನು ವಿಶೇಷವಾಗಿ ಗಮನಿಸಬೇಕು. ಹೆಣ್ಣಿನ ಕಡೆಯವರು ಗಂಡಿನ ಮನೆಗೆ ಬಂದು ಮದುವೆಮಾಡಿಕೊಳ್ಳುವಂತೆ ಕೇಳುವುದು ಈಗಿರುವ ಕ್ರಮ. ಹಾಗೆಯೇ ಹೆಣ್ಣಿನ ಕಡೆಯವರು ವರದಕ್ಷಿಣೆ ಕೊಡಬೇಕಾದುದು ಒಂದು ದೊಡ್ಡ ಸಾಮಾಜಿಕ ಸಮಸ್ಯೆಯಾಗಿದೆ. ಆದರೆ ಈಗಲೂ ಬೇಡರ ಕೆಲವು ಗುಂಪುಗಳಲ್ಲಿ ಇದಕ್ಕೆ ತದ್ವಿರುದ್ಧವಾದ ಸಂಗತಿಗಳಿವೆ. ಹೆಣ್ಣಿದ್ದ ಮನೆಗೆ ಗಂಡಿನ ಕಡೆಯವರು ಔಪಚಾರಿಕವಾಗಿ ಹಾಗೂ ಅನೌಪಚಾರಿಕವಾಗಿ ಮೊದಲು ತೆರಳಿ ಹೆಣ್ಣು ಕೇಳುವ ಕ್ರಮವಿದೆ. ವರದಕ್ಷಿಣೆ ಈಗಿಗ ಸ್ವಲ್ಪ ಪ್ರಮಾಣದಲ್ಲಿ ಚಾಲ್ತಿಗೆ ಬಂದಿದ್ದರೂ ವಧುದಕ್ಷಿಣೆ ಕೊಡುವ ಪದ್ದತಿ ಕಡ್ಡಾಯವಾಗಿದೆ. 'ಸುಖಮಂಚಿ' ಎನ್ನುವ ಹೆಸರಲ್ಲಿ ಗಂಡಿನ ಕಡೆಯವರು ಒಂದಿಷ್ಟು ಧಾನ್ಯವನ್ನು ಊರಿನ ಹಿರಿಯರ ಸಮ್ಮುಖದಲ್ಲಿ ಹೆಣ್ಣಿನ ಕಡೆಯವರಿಗೆ ಅಳೆದು ಕೊಡುವುದು ಒಂದು ಸಂಪ್ರದಾಯವಾಗಿದೆ.

'ಮುಂಜಿ' ಮ್ಯಾಸನಾಯಕರ ಮುದುವೆ ಸಂಪ್ರದಾಯಗಳ ಮತ್ತೊಂದು ವಿಶೇಷ 'ಮುಂಜಿ' ಎನ್ನುವ ಈ ಸಂಪ್ರದಾಯವನ್ನು ಥರ್ಸ್ಟನ್ ಮೊದಲಾದ ಆರಂಭಿಕ ಅಧ್ಯಯನಕಾರರು ಮುಸ್ಲಿಂ ಸಮಾಜಗಳಲ್ಲಿ ಪ್ರಚಲಿತವಿರುವ 'ಮುಂಜಿ ಮಾಡಿಸುವ' ಪದ್ಧತಿಯೊಡನೆ ನಂಟು ಕಲ್ಪಸಿದ್ದಾರೆ. ಆದರೆ ಈಗಿರುವ ಕ್ರಮದಲ್ಲಿ ಅಂಥ ಯಾವ ಅಂಶವು ಕಂಡು ಬರುವುದಿಲ್ಲ. ಮದುವೆಗೆ ಗಂಡನ್ನು ಸಿದ್ದ ಮಾಡುವ ಕ್ರಮ ಇದಾಗಿದೆ. ಮದವೆಯ ಮೊದಲ ಶಾಸ್ತ್ರದ ಮುನ್ನದಿನ ರಾತ್ರಿ ಮದುವೆಯ ಗಂಡಿಗೆ ದೇವರ ನೀರು ಹಾಕಿಸಿಕೊಂಡು ವಿಶಿಷ್ಟ ವೇಷದಲ್ಲಿ (ಬರೀ ಮೈ, ಒಂದು ಚೆಡ್ಡಿ ಧರಿಸಿ, ಮೈಗೆ ಒಂದು ಕಂಬಳಿ ಕೋರಿ ಹೊದ್ದು, ಕೈಯಲ್ಲಿ ಕವೆ ಕಟ್ಟಿಗೆ; ಈ ಕವೆ ಕಟ್ಟಿಗೆಗೆ ಎಲೆ ಅಡಿಕೆ ಬೀಡಿ ಗಂಟು ಕಟ್ಟಿರುತ್ತಾರೆ) ಊರ ಹೊರಗೆ ಹೋಗುತ್ತಾರೆ. ಮರುದಿನ ಬೆಳಗ್ಗೆ ನೆಂಟರಿಷ್ಟರು ಒಸಗೆ ರೂಪದಲ್ಲಿ ತಿಂಡಿ ತಿನಿಸುಗಳನ್ನು ಒಯ್ದು ಕೊಡುತ್ತಾರೆ. ಹೀಗೆ ಸಂಗ್ರಹವಾದ ತಿನಿಸುಗಳನ್ನು ಬೇರೆ ಯಾರು ತಿನ್ನುವುದಿಲ್ಲ. ಹಾದಿಹೋಕರ ಹತ್ತಿರ ಮದುವೆಯ ಗಂಡು ಹಣ ಸಂಗ್ರಹಿಸುತ್ತಾನೆ. ಹೀಗೆ ಒಂದು ದಿನ ಕಳೆದು (ಈಗ ಈ ಸಂಪ್ರದಾಯ ಒಂದು ದಿನ ಮಾತ್ರವಿದ್ದು ಮೊದಲು ಹನ್ನೊಂದು ದಿನ ನಡೆಯುತ್ತಿದ್ದೆಂದು ಹಿರಿಯರು ಹೇಳುತ್ತಾರೆ. ಹನ್ನೊಂದು ದಿನ ಊರಿನಿಂದ ಹೊರಗೆ ಇರುತ್ತಿದ್ದ ಮದುವೆಯ ಗಂಡುಗಳು ಕಾಡಲ್ಲಿ ಬೇಟೆಮಾಡಿ ಮಾಂಸ ಮತ್ತಿತರ ವಸ್ತುಗಳನ್ನು ಸಂಪಾದಿಸಿ ತಿನ್ನುತ್ತಿದ್ದರಂತೆ) ಅಂದು ಸಾಯಂಕಾಲ ಸ್ನಾನ ಮಾಡಿ ಶುದ್ಧರಾಗುತ್ತಾರೆ. ಮದುವೆಯ, ಋತುಮತಿ ಹೆಣ್ಣುಗಳನ್ನು ಗುಡಿಸಲಗೆ ಕೂರಿಸಿ ಒಳಗೆ ಕರೆದುಕೊಳ್ಳುವಾಗ ಮಾಡುವ ಕ್ರಮವನ್ನೇ ಇವರಿಗೂ ಅನುಸರಿಸಿ ಮನೆಯ ಒಳಗೆ ಕರೆದುಕೊಳ್ಳುತ್ತಾರೆ. ಇದನ್ನೆಲ್ಲ ಮುಂಜಿ ಸಂಪ್ರದಾಯ ಎನ್ನುತ್ತಾರೆ.

ಮ್ಯಾಸನಾಯಕರಲ್ಲಿ ಮಧುಮಗ ಕೈಯಲ್ಲಿ ಬಾಕು (ಚಿಕ್ಕ ಕತ್ತಿ) ಹಿಡಿಯುವ ಪದ್ದತಿ ಪ್ರಚಲಿತವಿದ್ದು, ಇದು ಸ್ಪಷ್ಟವಾಗಿ ಇವರ ಲೋಕದೃಷ್ಟಿಯನ್ನು ಬಿಂಬಿಸುತ್ತದೆ. ಇಲ್ಲಿ ಬಾಕನ್ನು

ಮಧುಮಗನ  ಪ್ರತಿನಿಧಿ ಎಂದು ಭಾವಿಸುವುದು ವಿಶೇಷ. ‘ವಿಳ್ಯದ ಎಲೆ’ ಮ್ಯಾಸನಾಯಕರ ಮದುವೆಯಲ್ಲಿ ಅತ್ಯಂತ ಪ್ರಾಮುಖ್ಯತೆ ಪಡೆದ ವಸ್ತುವಾಗಿದೆ. ಇವರಲ್ಲಿ ಮದುವೆಗಳಿಗೆ ಬ್ರಾಹ್ಮಣ ಪುರೋಹಿತರ ಬದಲಿಗೆ ಸಮುದಾಯದ ಹಿರಿಯರೇ ಪುರೋಹಿತ್ಯ ವಹಿಸುವರು.

ಸಾವಿನ ಆಚರಣೆಗಳು: ಮ್ಯಾಸರಲ್ಲಿ ಸಾವಿನ ಸಂದರ್ಭಕ್ಕೆ ನಡೆಯುವ ಆಚರಣೆಗಳಲ್ಲಿ ಬುಡಕಟ್ಟು ಲಕ್ಷಣಗಳ ಹಿನ್ನೆಲೆಯಲ್ಲಿ ಮುಖ್ಯವಾಗುವ ಕೆಲವನ್ನು ಈ ಮುಂದಿನಂತೆ ಹೆಸರಿಸಬಹುದು.

ಅ. ಹೆಣಗಳನ್ನು ಕಲ್ಲು ಪೊಟರುಗಳಲ್ಲಿಟ್ಟು ಕಲ್ಲು ಮುಚ್ಚುವ ಪದ್ಧತಿ ಈ ಸಮುದಾಯದಲ್ಲಿ ಇಂದಿಗೂ ಕಾಣಬಹುದು.

ಆ. ಸತ್ತ ವ್ಯಕ್ತಿಯು ಕಾಗೆಯ ರೂಪದಲ್ಲಿ ಮೂರನೇ ದಿನ ತನ್ನ ಸಮಾಧಿ ಸ್ಥಳದಲ್ಲಿ ಕುಟುಂಬದವರು ಹಾಕಿದ ಕೂಳನ್ನು ತಿನ್ನುತ್ತಾನೆ ಎಂಬ ನಂಬಿಕೆಯ ಹಿನ್ನೆಲೆಯಲ್ಲಿ ‘ಕೂಳುಹಾಕುವ’ ಸಂಪ್ರದಾಯ ಸಾಮಾನ್ಯವಾಗಿ ಕಂಡುಬರುತ್ತದೆ.

ಇ. ಮ್ಯಾಸನಾಯಕ ಸಮುದಾಯದಲ್ಲಿ ‘ದಿವಸ’ ಮಾಡುವಾಗ ಅದರ ಕಾರ್ಯವನ್ನು ‘ಗುಡ್ಡೆಪೂಜಾರಿ’ ಗಳೇ ನೆರವೇರಿಸಬೇಕು. ಇದು ಗುಂಪಿನ ಐಕ್ಯತೆಯ ಭಾವವನ್ನು ಸೂಚಿಸುತ್ತದೆ.

ಹಬ್ಬಗಳು : ಬೇಡರಲ್ಲಿ ಪ್ರಚಲಿತವಿರುವ ಹಬ್ಬಗಳಲ್ಲಿ ಕೆಲವು ಅವರಿಗೆ ಮಾತ್ರ ಸೀಮಿತವಾದಂತಹವುಗಳಿವೆ. ಇನ್ನು ಕೆಲವು ಜನಪ್ರಿಯ ಹಬ್ಬಗಳಾಗಿವೆ. ಆದರೆ ಜನಪ್ರಿಯ ಹಬ್ಬಗಳ ಸಂಪ್ರದಾಯಗಳೊಳಗೆ ತಮ್ಮ ವಿಶಿಷ್ಟ ಸಂಪ್ರದಾಯಗಳನ್ನು ಬೆರೆಸಿ ಆಚರಿಸುತ್ತಿರುವುದು ಇಲ್ಲಿ ಗಮನಾರ್ಹವಾಗುತ್ತದೆ. ಈ ಎರಡೂ ಮಾದರಿಗಳ ಸ್ಪಷ್ಟತೆಗಾಗಿ ಒಂದೆರಡು ಉದಾಹರಣೆಗಳನ್ನು ನೋಡಬಹುದು.

ಪದಿಯಾಗಳ ದೇವರು ಚಳ್ಳಕೆರೆ, ಮೊಳಕಾಲ್ಮುರು ತಾಲ್ಲೂಕುಗಳ ಬೇಡರ ಕೆಲವು ಗುಂಪುಗಳಲ್ಲಿ ಈ ‘ಪದಿಯಾಗಳ ದೇವರು’ ಆಚರಣೆಯಲ್ಲಿದೆ. ದೇವರು, ದೇವರೆತ್ತುಗಳನ್ನು ಮುಂದಿರಿಸಿಕೊಂಡು ಇಡೀ ಹಟ್ಟಿಗೆ ಹಟ್ಟಿಯೇ ಕಾಡಿಗೆ ಹೋಗಿ, ಅಲ್ಲೇ ಮೂರು ದಿನ ವಾಸಿಸುವ ಸಂಪ್ರದಾಯವಿದೆ. ದೇವರಿಗೆ ಹಾಗೂ ಜನರಿಗೆ ತಾತ್ಕಾಲಿಕ ಗುಡಿ ಹಾಗೂ ಕೆಲವು ಮನೆಗಳನ್ನು ನಿರ್ಮಿಸಿ ಊಟ, ವಸತಿ ವ್ಯವಸ್ಥೆಯೊಂದಿಗೆ ಕಾಡಲ್ಲಿ ಮೂರು ದಿನವಿದ್ದ ನಂತರ ಹಟ್ಟಿಗೆ ವಾಪಾಸ್ಸು ಬರುವುದುಂಟು. ಇದು ಈ ಸಮುದಾಯ ಅಲೆಮಾರಿ ಬುಡಕಟ್ಟಾಗಿದ್ದರ ಸೂಚನೆಗಳನ್ನು ನೀಡುತ್ತದೆ. ಬುಡಕಟ್ಟೊಂದು ತನ್ನ ಬದುಕಿನ ಕೆಲವು ಮಹತ್ವದ ಕ್ರಮಗಳನ್ನು ಆಚರಣೆ ರೂಪದಲ್ಲಿ ಉಳಿಸುತ್ತದೆ ಎಂಬುದಕ್ಕೆ ಇದೊಂದು ಸ್ಪಷ್ಟ ಉದಾಹರಣೆ, ಇಂಥ ಪದ್ಧತಿಗಳು ಬೇರೆ ಎಲ್ಲಾ ಸಮುದಾಯಗಳಲ್ಲಿ ದೊರೆಯಲಾರವು.

ಯುಗಾದಿ : ಯುಗಾದಿ ಹಬ್ಬ ಭಾರತದ ಜಾತಿ ಹಾಗೂ ಸಮುದಾಯದ ನಿಯಮಗಳನ್ನು ಕಳಚಿಕೊಂಡು ಎಲ್ಲರೂ ಆಚರಿಸುವ ಒಂದು ಹಬ್ಬ! ಇಂಥ ಹಬ್ಬದಲ್ಲೂ ಈ ಸಮುದಾಯ ತನ್ನ ಗುರುತುಗಳನ್ನು ದಾಖಲಿಸಿದೆ. ಎಂಬುದನ್ನು ಗಮನಿಸಬೇಕು. ಅಂತ ಗುರುತುಗಳು ಹೀಗಿವೆ:

ಅ. ಯುಗಾದಿಯಲ್ಲಿ ಬೇವು ಬೆಲ್ಲದ ಬದಲಿಗೆ ಹುಣಸೇ ರಸಕ್ಕೆ ಬೇವನ್ನು ಬೆರಸಿ ಕುಡಿಯುವುದು ಮ್ಯಾಸನಾಯಕರ' ವಿಶೇಷ. ದೇವರ ಗುಡಿಯ ಮುಂದೆ ಹಿರಿಯರು ಹುಣಸೇ ರಸದ ಜೊತೆ ಬೇವನ್ನು ಸ್ವಲ್ಪ ಬೆಲ್ಲದೊಂದಿಗೆ ಬೆರೆಸಿದ ಪಾನಕವನ್ನು ಸಿದ್ಧಮಾಡುತ್ತಾರೆ. ಅದನ್ನು ಹಟ್ಟಿಯ ಪ್ರತಿಯೊಂದು ಮನೆಯವರು ತಂದು ಮನೆಯಲ್ಲಿ ಸೇವಿಸುತ್ತಾರೆ. ಬೇವು ಬೆಲ್ಲದ ರಸ ಆಧುನಿಕ ಕಲ್ಪನೆಗೆ ಹುಣಸೆ–ಬೇವು ಬೆಲ್ಲದ ಪರ್ಯಾಯ ಕಲ್ಪನೆ ಇವರ ವೈಶಿಷ್ಟತೆಯಾಗಿದೆ.

ಆ. ಯುಗಾದಿಯ ಮೊದಲ ದಿನವೇ ಮ್ಯಾಸನಾಯಕರ' ಗುಂಪುಗಳು ಕಂಪಳ ದೇವರ ಮುಖಂಡತ್ವದಲ್ಲಿ ಬೇಟೆ ಹೊರಡುತ್ತವೆ.

ಇ. ಯುಗಾದಿ ಚಂದ್ರನನ್ನು ದರ್ಶಿಸಿ ಧನ್ಯರಾಗುವುದು, ಜೊತೆಗೆ ಅಂದಿನ ಅರ್ಧ ಚಂದ್ರನ ಮೂಲಕ ವರ್ಷದ ಧನ ಧಾನ್ಯ ಸೌಲಭ್ಯಗಳ ಬಗ್ಗೆ ತಿಳಿಯುವ ಪ್ರಯತ್ನವಿರುವುದು ಗಮನಾರ್ಹವಾಗಿದೆ. ಪಶ್ಚಿಮ ದಿಕ್ಕಿನಲ್ಲಿ ಕಾಣುವ ಅರ್ಧ ಚಂದ್ರ ತೆಂಕ (ದಕ್ಷಿಣ) ದಿಕ್ಕು ಹಣವನ್ನು ಬಡಗ (ಉತ್ತರ) ದಿಕ್ಕು ಧಾನ್ಯವನ್ನು ಪ್ರತಿನಿಧಿಸುತ್ತವೆ ಎಂಬುದು ಇವರ ನಂಬಿಕೆ. ಇದರ ಆಧಾರದ ಮೇಲೆ ಅರ್ಧ ಚಂದ್ರ ಎರಡು ತುದಿಗಳಲ್ಲಿ ಯಾವ ತುದಿ ಎದ್ದಿದೆ ಯಾವ ತುದಿ ಬಿದ್ದಿದೆ ಎನ್ನುವುದನ್ನು ಗಮನಿಸಿ ಪ್ರಸ್ತುತ ವರ್ಷ ಧನ, ಧಾನ್ಯ ಹೆಚ್ಚು / ಕಡಿಮೆ / ಸಮ ಎಂಬುದನ್ನು ನಿರ್ಧರಿಸುತ್ತಾರೆ. ಪ್ರಕೃತಿಯಲ್ಲಿ ಭವಿಷ್ಯ ನೋಡುವ ಬುಡಕಟ್ಟಿನ ವಿಶಿಷ್ಟ ದೃಷ್ಟಿ ಇದಾಗಿದೆ.

ಹೀಗೆ ಮ್ಯಾಸನಾಯಕರು ತಮಗೆ ವಿಶಿಷ್ಟವೆನಿಸುವ ಹಬ್ಬಗಳನ್ನು ಆಚರಿಸುತ್ತಾರೆ. ಹಾಗೆಯೇ ಬೇರೆ ಸಮೂಹಗಳಿಗೂ ಸಾಮಾನ್ಯವಾಗಿರುವ ಹಬ್ಬಗಳಲ್ಲಿ ತಮ್ಮ ವೈಶಿಷ್ಟ್ಯತೆಗಳನ್ನು ದಾಖಲಿಸುತ್ತಾರೆ. ಇನ್ನು ಇವರು ಹಬ್ಬಗಳಲ್ಲಿ ಮಾಡುವ ಆಚರಣೆಗಳು ಇವರಲ್ಲಿ ಇನ್ನು ಗಟ್ಟಿಯಾಗಿರುವ ಬುಡಕಟ್ಟು ಆಸ್ಮಿತೆಗಳನ್ನು ಕಾಣಿಸುತ್ತವೆ.

ಅ. ಹಬ್ಬಗಳಲ್ಲಿ ವಿಶಿಷ್ಟವಾದ ಭರ್ಚಿ, ಛತ್ರಿಗಳ ಬಳಕೆ

ಆ. ದೇವರ ಎತ್ತುಗಳಿಗೆ ಇನ್ನಿಲ್ಲದ ಪ್ರಾಮುಖ್ಯತೆ

ಇ. ದೂಪಾರಾತಿ ಮಾಡುವಾಗ ಬಾಯಿಗೆ ಬಿಳಿ ಬಟ್ಟೆ ಕಟ್ಟಿಕೊಳ್ಳುವುದು

ಈ. ಹಬ್ಬ ಮುಗಿದ ನಂತರ ಕುಣಿಯುವುದು ಇತ್ಯಾದಿ

ವಿಶಿಷ್ಟ ದೈವ ಕಲ್ಪನೆ: ಬುಡಕಟ್ಟುಗಳಲ್ಲಿ ಸಮುದಾಯಕ್ಕೆ ದುಡಿದ ವೀರರು / ಹಿರಿಯರನೆಲ್ಲ ದೇವರೆಂದು ಪರಿಭಾವಿಸುವ ಕ್ರಮವಿದೆ. ಈ ಹಿನ್ನೆಲೆಯಲ್ಲಿ ಮ್ಯಾಸನಾಯಕರ' ಸಾಂಸ್ಕೃತಿಕ ವೀರರ ದೊಡ್ಡ ಪಟ್ಟಿಯೇ

ಇದೆ. ಇಂಥ ನಾಯಕರನ್ನು ದೈವವಾಗಿ ಪೂಜಿಸುವ ಸಂದರ್ಭದಲ್ಲಿ ವೀರರು ಬಳಸಿದ ವಸ್ತುಗಳನ್ನೆ ದೇವರ ಮೂರ್ತಿಗಳಾಗಿಸುವುದು ವಿಶೇಷ. ಈ ಬಗ್ಗೆ ಅಧ್ಯಯನ ನಡೆಸಿದ ಡಿ.ಡಿ. ಕೊಸಾಂಬಿ ಅವರು ಬುಡಕಟ್ಟು ದೈವಗಳಿಗೆ ಯಾವುದೇ ಸ್ಪಷ್ಟ ಮನುಷ್ಯರೂಪವಿಲ್ಲದಿರುವುದರ ಬಗ್ಗೆ ಗಮನ ಸೆಳೆಯುತ್ತಾರೆ. ಇಂದು ಮ್ಯಾಸನಾಯಕರಲ್ಲಿ ಮುಖ್ಯವಾಗಿರುವ ಗಾದ್ರಿಪಾಲನಾಯಕ ದೇವರೆಂದರೆ ಆತ ಬಳಸಿದ ಬಿಲ್ಲು–ಬಾಣ, ಬಡಿಗೆಗಳೇ ಆಗಿವೆ. ಈ ವಸ್ತುಗಳನ್ನು ಕಂಬಳಿಕೋರಿಯಲ್ಲಿ ಸುತ್ತಿಕಟ್ಟಿ ದೇವರಾಗಿಸಿರುವುದು ಗಮನಾರ್ಹ ಸಂಗತಿ. ಹಾಗೇಯೇ ಬೊಮ್ಮದೇವರು. ಒಬಳದೇವರು ಇವೇ ಮೊದಲಾದ ಹನ್ನೆರಡು ಪೆಟ್ಟಿಗೆ ದೇವರುಗಳಲ್ಲಿ ಪುಟ್ಟಿಯ ಒಳಗೆ ಆಯಾ ವೀರರು ಬಳಸಿದ ವಸ್ತುಗಳಿರುವುದನ್ನು ನೋಡಬಹುದಾಗಿದೆ.

ಇವರು ಹಿರಿಯರನ್ನು ಪೂಜಿಸುವಾಗಲೂ ಅವರ ಭಾವಚಿತ್ರವನ್ನು ಈ ಆಧುನಿಕ ಯುಗದಲ್ಲೂ ಬಳಸುವುದಿಲ್ಲ ಎಂಬುದು ವಿಶೇಷ. ಹಿರಿಯರ ಹೆಸರಲ್ಲಿ ಒಂದು ಕಲ್ಲೋ ಅಥವಾ ಮರವೋ ಪೂಜೆಗೊಳ್ಳುತ್ತದೆ. ಮಣ್ಣಿನ ಮಗೆ, ಹಿತ್ತಾಳೆ ಚೆಂಬು, ಬಿದಿರಿನ ಕೋಲು ಮೊದಲಾದವು ಹಿರಿಯರ ಪ್ರತಿನಿಧಿಗಳಾಗಿ ಪೂಜೆಗೊಳ್ಳುತ್ತವೆ.

ಬೆಡಗುಗಳ ವೈಶಿಷ್ಟ : ಮ್ಯಾಸನಾಯಕರ' ಬೆಡಗುಗಳನ್ನು ಸೂರ್ಯವಂಶ, ಚಂದ್ರವಂಶ ಎಂದು ಎರಡು ಮುಖ್ಯ ಭಾಗಗಳನ್ನಾಗಿ ಗುರುತಿಸಲಾಗಿದೆ. ಮತ್ತೆ ಸಂಬಂಧ ಬೆಳೆಸುವ ಕ್ರಮದ ಒಳಗೆ ಎನುಮುಲೋರು, ಮಂದಲೋರು, ಮಳೆಲೋರು ಎಂಬುದಾಗಿ ವಿಂಗಡಿಸಿಕೊಳ್ಳಲಾಗಿದೆ. "ಬೇಡನಾಯಕ ಕುಲಗಳನ್ನೆಲ್ಲ ಗಮನಿಸಿದರೆ ಬಹುಪಾಲು ಕುಲಗಳು ಪ್ರಾಣಿಗಳ ಹೆಸರಿನಲ್ಲಿ ಬರುತ್ತವೆ. ಇದು ಎಲ್ಲಾ ಬುಡಕಟ್ಟಿನ ಕುಲ ಲಕ್ಷಣವೂ ಆಗಿದೆ. ಮುಖ್ಯವಾಗಿ ವೃಕ್ಷಾರಾಧನೆ, ಪ್ರಾಣಿಗಳ ಆರಾಧನೆ ದಕ್ಷಿಣ ಭಾರತದ ದ್ರಾವಿಡ ಸಂಸ್ಕೃತಿಯೇ ಆಗಿದೆ. ನಿಸರ್ಗದಲ್ಲಿ ಅಪರಿಮಿತವಾಗಿ ಹರಡಿರುವ ವಸ್ತುಗಳಲ್ಲಿ ಯಾವುದೋ ಒಂದು ಕಲ್ಲು ಬಂಡೆ, ದೊಡ್ಡಮರ ಅಥವಾ ಪ್ರಾಣಿ ಆದಿಮಾನವ ಗುಂಪಿಗೆ ರಕ್ಷಣೆಯನ್ನು ಒದಗಿಸಿರಬಹುದು ಅಥವಾ ಭಯಕ್ಕೆ ಕಾರಣವಾಗಿರಬಹುದು. ಇಂಥ ಒಂದೊಂದು ವಸ್ತುವು ಆಯಾ ಬುಡಕಟ್ಟು ಗುಂಪಿಗೆ ಯಾವುದೋ ಶಕ್ತಿಯ ಸಂಕೇತವಾಗಿ ಕಂಡಿರಬಹುದು. ಈ ಸಂದರ್ಭದಲ್ಲಿಯೇ ಪ್ರಾಣಿ, ಮರ, ಗುಡ್ಡ, ಬಂಡೆ ಗುಂಪಿನ ಗುರುತಾಗಿ, ಕುಲ ಸಂಕೇತವಾಗಿ ಸ್ವೀಕರಿಸಲ್ಪಟ್ಟು ಅದು ಪೂಜಾರ್ಹ ವಸ್ತುವೂ ಆಗಿ ಬಿಟ್ಟಿತು. ಒಂದೊಂದು ಬುಡಕಟ್ಟಿನ ಒಂದೊಂದು ಕುಲಕ್ಕೆ ಅದೇ ಹೆಸರು ಉಳಿದುಕೊಂಡು ಬಂದಂತೆ ಕಾಣುತ್ತದೆ." (ಹನೂರು ಕೃಷ್ಣಮೂರ್ತಿ ೧೯೯೩: ೯೩)

ಪ್ರತ್ಯೇಕ ನ್ಯಾಯ ಪಂಚಾಯ್ತಿ : ಬೇಡರಲ್ಲಿ ತಮ್ಮ ಸಮುದಾಯಕ್ಕೆ ಮಾತ್ರ ಮೀಸಲಾದ ಪಂಚಾಯ್ತಿ ವ್ಯವಸ್ಥೆ ಇದೆ. ಹಟ್ಟಿ ಪಂಚಾಯ್ತಿ, ಕಟ್ಟೆಮನೆ ಪಂಚಾಯ್ತಿ, ಗುರುಮನೆ ಇವು ಈ ಸಮುದಾಯದ ನ್ಯಾಯಿಕ ವ್ಯವಸ್ಥೆಯ ಮುಖ್ಯ ಹಂತಗಳಾಗಿವೆ. ಯಾವುದೇ ಸಮಸ್ಯೆಯು ಮೊದಲಿಗೆ ಹಟ್ಟಿ ಪಂಚಾಯ್ತಿಗೆ ಬರಬೇಕು. ಇಲ್ಲಿ ಸಮಸ್ಯೆ ಬಗೆ ಹರಿಲಿಲ್ಲ ಅಥವಾ ಹಟ್ಟಿ ಪಂಚಾಯ್ತಿ ನೀಡಿದ ತೀರ್ಮಾನ ಒಪ್ಪಿತವಾಗದಿದ್ದರೆ ಕಟ್ಟೆಮನೆಗೆ, ಮುಂದಕ್ಕೆ ಗುರುಮನೆಗೆ ಹೋಗಬೇಕು. ಮ್ಯಾಸಕಂಪಳಕ್ಕೆ

ಕಂಪಳದೇವರ ಹಟ್ಟಿ 'ಗುರುಮನೆ' ಎಂಬುದಾಗಿ ಹೇಳಲಾಗಿದೆ. ಇನ್ನು ನನ್ನಿವಾಳ, ನಾಯಕನ'ಹಟ್ಟಿ, ಗೋನೂರು ಮೊದಲಾದ ಹನ್ನೆರಡು ಕಟ್ಟಿಮನೆಗಳಿದ್ದವೆಂದು ಅನೇಕ ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ. ಮ್ಯಾಸಬೇಡರಿಗೆ ನನ್ನಿವಾಳ, ನಾಯಕನ'ಹಟ್ಟಿ, ಗೋನೂರು ಕಟ್ಟೆಮನೆಗಳಾಗಿ ಕಾರ್ಯ ನಿರ್ವಹಿಸಿದ್ದರ ಬಗ್ಗೆ ಸಾಕಷ್ಟು ಮಾಹಿತಿಗಳು ದೊರೆಯುತ್ತವೆ. ನನ್ನಿವಾಳ ಕಟ್ಟೆಮನೆ ಈಗಲೂ ಕಾರ್ಯನಿರ್ವಹಿಸುತ್ತಿವೆ ಎಂಬುದು ಗಮನಾರ್ಹ.

ಭಾರತೀಯ ಸಮಾಜ ವ್ಯವಸ್ಥೆಯಲ್ಲಿ ಕಂಡು ಬರುವ ಜಾತಿ ಪಂಚಾಯ್ತಿಗಳಿಗಿಂತ ಭಿನ್ನವಾಗಿರುವ ಈ ನ್ಯಾಯ ವ್ಯವಸ್ಥೆ ಕೇವಲ ಧರ್ಮದ ರಕ್ಷಕ ವ್ಯವಸ್ಥೆಯಾಗಿ ಕೆಲಸ ಮಾಡದೆ ಸಾಮಾಜಿಕ ನ್ಯಾಯಕ್ಕಾಗಿಯೂ ಕಾರ್ಯನಿರ್ವಹಿಸಿರುವುದು ಕಂಡುಬರುತ್ತದೆ.

ಅನನ್ಯ ಮನೆಗಳ ನಿರ್ಮಾಣ: ಬೇಡರಲ್ಲಿ ವಿಶೇಷವಾಗಿ ಮ್ಯಾಸಬೇಡರು ಇತ್ತೀಚಿನವರೆಗೆ ಸಂಪೂರ್ಣ 'ಸುತ್ತು ಗುಡಿಸಲ್ಲೇ' ವಾಸಿಸುತ್ತಿದ್ದರು. ಕೇವಲ ಮರ ಹಾಗೂ ಹುಲ್ಲಿನಿಂದ ದುಂಡಾಗಿ ನಿರ್ಮಿಸುತ್ತಿದ್ದ ಅಂಥ ಮನೆಗಳು ಒಂದು ಕಡೆಯಿಂದ ಮತ್ತೊಂದು ಕಡೆಗೆ ಸ್ಥಳಾಂತರಿಸಲು ಅನುಕೂಲವಾಗಿದ್ದವು. ಮನುಷ್ಯರಿಗಲ್ಲದೆ ದೇವರಿಗೂ ಕೂಡ ಇಂಥ ಸುತ್ತ ಗುಡಿಸಲನ್ನೇ ನಿರ್ಮಿಸಲಾಗುತ್ತಿತ್ತು. (ಈಗಲೂ ಹಲವಾರು ಹಟ್ಟಿಗಳಲ್ಲಿ ಮ್ಯಾಸಬೇಡರ ದೈವಗಳು ಇಂಥ ಗುಡಿಸಲುಗಳಲ್ಲಿ ನೆಲೆಸಿವೆ ಎಂಬುದು ವಿಶೇಷವಾಗಿ ಗಮನಿಸಬೇಕಾದ ಸಂಗತಿ).

ಇವರ ಮನೆಗಳು ಸುತ್ತು ಗುಡಿಸಲಿಂದ, ಸ್ವಲ್ಪ ಪ್ರಮಾಣ ಗೋಡೆ ಎಬ್ಬಿಸಿ ಮೇಲೆ ಕಾಡಿನ ಹುಲ್ಲನ್ನು ಹೊದಿಸುವ ಕ್ರಮದ ಮನೆಗಳಿಗೆ ಬೆಳವಣಿಗೆ ಸಾಧಿಸಿದೆ. ಒಂದು ಕಡೆ ನೆಲೆನಿಂತ ನಂತರ ಗೋಡೆ ಗುಡಿಸಲುಗಳನ್ನು ನಿರ್ಮಿಸಿರುವುದು ನಿರ್ವಿವಾದದ ಸಂಗತಿ. ಈಗ ಮಾಳಿಗೆ ಮನೆಗಳ ನಿರ್ಮಾಣ ಬೇಡರ ವಿಶೇಷವಾಗಿದೆ.

ಬೇಡರ ಮನೆಗಳ ಬಾಗಿಲಿನ ಎತ್ತರ ಅತೀ ಕಡಿಮೆ. ಯಾರೂ ಮನೆಯ ಒಳಗೆ ಹಾಗೆ ನೇರವಾಗಿ ಪ್ರವೇಶಿಸುವಂತಿಲ್ಲ. ಶಿರವನ್ನು ಸಾಕಷ್ಟು ಬಗ್ಗಿಸಿ ಒಳ ಹೋಗಬೇಕು. ಇದು ಬೇಡ ಬುಡಕಟ್ಟಿನ ಲೋಕ ದೃಷ್ಟಿ. ಮನುಷ್ಯರಿಗೆ ಬೇಡವಾದ ಅಹಂಕಾರವನ್ನು ತೊರೆದು ವಿನಯವನ್ನು ಕಲಿಯಬೇಕೆಂಬ ಸರಳ ಸಂದೇಶ ಇಲ್ಲಿನದು.

ಇತ್ತೀಚೆಗೆ ಬೇಡರು ನಿರ್ಮಿಸುತ್ತಿರುವ ಮಾಳಿಗೆ ಮನೆಗಳಲ್ಲಿ ಜಗಲಿ ನಿರ್ಮಾಣ ಸಾಮಾನ್ಯ. ಸಾಮಾನ್ಯವಾಗಿ ಮನೆಯ ಪ್ರವೇಶದ ಬಲಗಡೆಗೆ ಜಗಲಿ ನಿರ್ಮಾಣ ಬೇರೆಯವರಿಗೆ ಜಗಲಿಯ ಪ್ರವೇಶ ತೀರಾ ವಿರಳ.

ಆಹಾರ ಪದ್ಧತಿ : ಬೇಡರ ಆಹಾರ ಪದ್ಧತಿಯ ಕೆಲವು ವಿಶಿಷ್ಟತೆಗಳು ಈ ಮುಂದಿನಂತಿವೆ.

ಅ. ಸಜ್ಜೆ ಅನ್ನ-ಮಜ್ಜಿಗೆ ಇವರಿಗೆ ಬಹುಪ್ರಿಯ.

ಆ. ಬೇಡರ ಕೆಲವು ಬೆಡಗಿನವರು (ಉದಾ: ಬೊಮ್ಮದೇವಡ್ಲು) ನವಣೆ ತಿನ್ನುವುದಿಲ್ಲ. ಮುಟ್ಟುವುದೂ ಇಲ್ಲ; ಬೆಳೆಯುವುದು ಮೊದಲೇ ಇಲ್ಲ. ಆಕಸ್ಮಾತ್ ಮುಟ್ಟಿದರೆ ಶುದ್ಧಿ ಮಾಡಿಕೊಳ್ಳದೆ ಒಳಗೆ ಹೋಗುವಂತಿಲ್ಲ.

ಇ. ಇವರಲ್ಲಿ ಈಚಲು ಚಾಪೆ ಬಳಕೆ ನಿಷೇಧ. ಈಚಲು ಹಣ್ಣು ತಿನ್ನುವುದು ಕೂಡ ನಿಷೇಧ. ತಿಂದರೆ ಶುದ್ಧೀಕರಿಸಿಕೊಂಡು ಮನೆಯ ಒಳಗೆ ಹೋಗಬೇಕು.

ಈ. ಹಂದಿ, ಕೋಳಿಗಳನ್ನು ಸಾಕುವುದು ಹಾಗೂ ತಿನ್ನುವುದು ನಿಷೇಧ.

ಇನ್ನು ಕೆಲವು ಧಾನ್ಯ ಹಾಗೂ ಪ್ರಾಣಿಗಳನ್ನು ತಿನ್ನುವುದನ್ನು ನಿಷೇಧ ಮಾಡಿರುವ ಸಂಗತಿ ಬುಡಕಟ್ಟು ಲಕ್ಷಣಗಳ ಹಿನ್ನೆಲೆಯಲ್ಲಿ ಬಹು ಮುಖ್ಯವಾಗುತ್ತದೆ. "ವಾಸ್ತವವಾಗಿ ಒಂದೊಂದು ಬುಡಕಟ್ಟಿಗೂ ಇಂಥದೊಂದೊಂದು ನಂಬಿಕೆ ಅಥವಾ ನಿಷೇಧವಿದ್ದು ಎಲ್ಲರೂ ಒಂದೊಂದು ಬಗೆಯ ಪ್ರಾಣಿಯನ್ನು ಕೊಂದು ಆಹಾರವಾಗಿ ಉಪಯೋಗಿಸುವುದನ್ನು ಬಿಟ್ಟುಕೊಂಡು ಬಂದಿರುವಂತೆ ತಿಳಿದುಬರುತ್ತದೆ. ಇದು ಬಹುಮಟ್ಟಿಗೆ ಪ್ರಪಂಚದ ಎಲ್ಲಾ ಬುಡುಕಟ್ಟುಗಳಲ್ಲಿಯೂ ಕಂಡುಬರುವ ಸಾಮಾನ್ಯ ಲಕ್ಷಣ (ಕೃಷ್ಣಮೂರ್ತಿ ಹನೂರು : ೧೯೯೩:೪೦).

ವಿಶಿಷ್ಟ ಭವಿಷ್ಯ ಕ್ರಮಗಳು: ಬೇಡರಲ್ಲಿ ವಿಶೇಷವಾಗಿ ಮ್ಯಾಸಬೇಡರಲ್ಲಿ ಅನನ್ಯವೆನಿಸುವ ಭವಿಷ್ಯ ಕೇಳುವ ಕ್ರಮಗಳಿವೆ. ಅವುಗಳಲ್ಲಿ ಮಳೆ ಕುರಿತು ಕೇಳುವ ಭವಿಷ್ಯ ಕ್ರಮಗಳಲ್ಲಿ ಒಂದೆರಡನ್ನು ಇಲ್ಲಿ ಪ್ರಸ್ತಾಪಿಸಬಹುದು.

ಅ. ಕೊಡ ಹಿಡಿಯುವುದು: ದೇವರ ಗುಡಿಯ ಮುಂದೆ ಸಗಣಿಯಲ್ಲಿ ನೆಲ ಬಳಿದು ಅಲ್ಲಿಗೆ ಹಟ್ಟಿಯ ಎಲ್ಲರೂ ಮನೆಗಳಿಂದ ತಂದ ಧಾನ್ಯಗಳನ್ನು ಸುರಿದು ದೊಡ್ಡರಾಶಿ ಮಾಡುತ್ತಾರೆ. ಆ ರಾಶಿ ಮೇಲೆ ತುಂಬಿದ ಮಣ್ಣಿನ ಗಡಿಗೆಯನ್ನು ಇರಿಸುತ್ತಾರೆ. ನಂತರ ದೇವರಿಗೆ ಕೈಮುಗಿದು, ಪ್ರತಿಯೊಂದು ಮಳೆಯ ಹೆಸರು ಹೇಳಿ ಆ ಗಡಿಗೆಯನ್ನು ಇಬ್ಬರು ವ್ಯಕ್ತಿಗಳು ಎದುರಾಗಿ ನಿಂತು ಮುಟ್ಟುತ್ತಾರೆ. ಆಗ ಗಡಿಗೆ ತಿರುಗುವ ಸ್ವರೂಪದ ಮೇಲೆ ಆ ವರ್ಷದ ಮಳೆ ಪ್ರಮಾಣವನ್ನು ನಿರ್ಧರಿಸುತ್ತಾರೆ. ಕೊಡ ಜೋರಾಗಿ ತಿರುಗಿ ನೀರು ಚೆಲ್ಲಿದರೆ ಸಾಕಷ್ಟು ಪ್ರಮಾಣದಲ್ಲಿ ಮಳೆ ಬರುವುದೆಂಬ ನಂಬಿಕೆ ಇದೆ.

ಆ. ಗಣೆ ಊದುವುದು: ಉದ್ದವಾದ ಕೊಳಲನ್ನೇ 'ಗಣಿ' ಎಂದು ಕರೆಯುತ್ತಾರೆ. ದೇವರ ಎರಡು ಗಣಿಗಳನ್ನು ದೇವರಗುಡಿಯ ಮುಂದೆ ಪೂಜಿಸಿ ಹಟ್ಟಿಯ ಹಿರಿಯರ ಸಮ್ಮುಖದಲ್ಲಿ ಇಬ್ಬರು ನುರಿತ ಗಣೆವಾದಕರು ಗಣೆ ಊದುತ್ತಾರೆ. ಮಳೆ ಬರುವುದೆಂದಾದರೆ ಗಣೆ ಸರಾಗವಾಗಿ ನುಡಿಯಬೇಕು ಇನ್ನೊಮ್ಮೆ ನುಡಿಯಬಾರದು ಎಂದು ಕುರುಹು ಕೇಳಲಾಗುತ್ತದೆ. ಅದರಂತೆ ಆ ವರ್ಷದ ಮಳೆಯ ಪ್ರಮಾಣವನ್ನು ತಿಳಿಯಲಾಗುತ್ತದೆ.

೨. ರಕ್ತ ಸಂಬಂಧದ ಅತಿಯಾದ ಅವಲಂಬನೆ : ಬುಡಕಟ್ಟುಗಳ ಜೀವಾಳವೇ ರಕ್ತ ಸಂಬಂಧ. ಇದರ ಹೊರತಾಗಿ ಇವರಿಗೆ ಬೇರೆ ಯಾವುದೇ ಮನುಷ್ಯ ಸಂಬಂಧಗಳಿರುವುದಿಲ್ಲ. ಇವರ ವಿವಾಹಗಳು ರಕ್ತ

ಸಂಬಂಧದ‍ಲ್ಲಿ ಮಾತ್ರ ನಡೆಯಬೇಕು. ಒಳ ಬೆಡಗುಗಳಲ್ಲಿಯೂ ಮದುವೆ ಸಂಬಂಧಗಳು ನಿಷಿದ್ಧ. ಒಂದು ಊರಿಂದ ಮತ್ತೊಂದು ಊರಿಗೆ ಹೆಣ್ಣು ತರುವುದು ಹಾಗೂ ಕೊಡುವುದು ಕೆಲವೆಡೆ ನಿಷೇಧ. ಹೆಣ್ಣು ತರುವುದು ಮತ್ತು ಕೊಡುವುದರಲ್ಲಿ ಸೋದರತ್ತೆ ಹಾಗೂ ಸೋದರ ಮಾವಂದಿರಿಗೆ ವಿಶೇಷ ಹಕ್ಕು ಬಾಧ್ಯತೆಗಳಿರುವುದು ಇಲ್ಲಿಯ ವಿಶೇಷ. ಇವರು ಬೇರೆ ಜಾತಿ–ಸಮುದಾಯಗಳೊಡನೆ ಸಾಮೂಹಿಕ ಸಂಬಂಧ ಬೆಳೆಸುವ ಅನಿವಾರ್ಯತೆ ಬಂದಾಗ ಮಾವ, ಅಣ್ಣ, ಅಕ್ಕ ಅನ್ನುವ ಸ್ವರೂಪದಲ್ಲೇ ಎನ್ನುವುದು ಗಮನಾರ್ಹ.

೩. ಅತಿಯಾದ ಪಾವಿತ್ರ್ಯತೆ : ಮ್ಯಾಸನಾಯಕರ ಪಾವಿತ್ರ್ಯ ಕಲ್ಪನೆ ಎಷ್ಟು ಜಟಿಲವಾದುದು ಎಂಬುದು ಇವರ ಕಟ್ಟೆ ಮನೆಗಳಲ್ಲಿ ನಡೆದಿರುವ ವ್ಯಾಜ್ಯಗಳಿಂದಲೇ ತಿಳಿದು ಬರುತ್ತದೆ. ಈ ಸಮುದಾಯದ ಒಬ್ಬ ವ್ಯಕ್ತಿ ಬೇರೊಂದು ಜಾತಿಯವರ ಮನೆಯ ಒಳಗೆ ಪ್ರವೇಶಿಸಿದ್ದು, ಒಂದು ದೊಡ್ಡ ಅಪರಾಧ ಎಂದು ಭಾವಿಸುವುದು. ಇನ್ನೊಂದು ಜಾತಿಯವರನ್ನು ಸ್ಪರ್ಶಿಸಿದರು ಎಂದು ಸಮುದಾಯದಿಂದ ಹೊರ ಹಾಕುವುದು. ಇಂಥ ಹಲವಾರು ಸಂಗತಿಗಳನ್ನು ಗಮನಿಸಿದರೆ ಬೇಡರ ಪಾವಿತ್ರ್ಯತೆಯ ಸ್ವರೂಪ ಅರ್ಥವಾಗುತ್ತದೆ. ಇದರ ಪಾವಿತ್ರ್ಯತೆಯ ಇನ್ನು ಕೆಲವೊಂದು ಅಂಶಗಳು ಮುಂದಿನಂತಿವೆ.

- ಅ. ಸಮುದಾಯದ ಒಳಗೆ ಒಬ್ಬರ ಎಂಜಲನ್ನು ಇನ್ನೊಬ್ಬರು ತಿನ್ನುವಂತಿಲ್ಲ. 'ಎಂಜಲು ಏಳು ಮನೆ ಕೆಡಿಸಿತು' ಎಂಬ ನಂಬಿಕೆಯಿಂದಾಗ ಇವರಲ್ಲಿ ಒಬ್ಬರ ಎಂಜಲನ್ನು ಇನ್ನೊಬ್ಬರು ತಿನ್ನುವುದು ಕಡ್ಡಾಯವಾಗಿ ನಿಷಿದ್ಧವಾಗಿದೆ.
- ಆ. ಯಾರದೋ ಬೇರೆ ಸಮುದಾಯದ ಮನೆಯಲ್ಲಿ ಊಟ ಮಾಡುವಂತಿಲ್ಲ. ಅಷ್ಟೇ ಅಲ್ಲ ಕಿಲಾರಿಗಳು, ಪೂಜಾರಿಗಳು ಮೊದಲಾದ ಸಾಂಸ್ಕೃತಿಕ ಪುರುಷರು ಅವರ ಸ್ವಂತ ಮನೆಯಲ್ಲೇ ಎಲ್ಲರೂ ಉಣ್ಣುವ ತಟ್ಟೆಗಳಲ್ಲಿ ಉಣ್ಣುವಂತಿಲ್ಲ. ಇವರಿಗೇ ಪ್ರತ್ಯೇಕ ತಟ್ಟೆಯಿರಬೇಕು.
- ಇ. ಇನ್ನೂ ವಿಶೇಷವೆಂದರೆ ಒಂದು ಊರಿನಿಂದ ಇನ್ನೊಂದೂರಿಗೆ ಪ್ರಯಾಣಿಸುವಾಗ ಸಾರ್ವಜನಿಕ ವಾಹನದ ಬಳಕೆ ನಿಷೇಧ ಮಾಡಿಕೊಂಡಿದ್ದು, ಈಗ ಈ ನೀತಿ ಸ್ವಲ್ಪ ಸಡಿಲಗೊಂಡಿದೆ. ಇತ್ತೀಚೆಗೆ ಸಾರ್ವಜನಿಕ ವಾಹನವೇರಿದರೆ ನಾವು ಮಲಿನವಾಗುತ್ತೇವೆ ಎಂದು ಭಾವಿಸಿ ನಡೆದುಕೊಂಡೇ ಪಟ್ಟಣಗಳಿಗೆ ಹೋಗಿ ಬರುತ್ತಿದ್ದವರನ್ನೂ ನಾವೆಲ್ಲರೂ ನೋಡಿದ್ದೇವೆ. ಈಗಲೂ ಈ ಮೊದಲೇ ಹೇಳಿದ ಸಾಂಸ್ಕೃತಿಕ ಪುರುಷರು ಸಾರ್ವಜನಿಕ ಬಸ್‌ಗಳಲ್ಲಿ ಪ್ರಯಾಣಿಸದೇ ಇರುವುದನ್ನು ನೋಡಬಹುದಾಗಿದೆ.

ಇಂಥ ನಿರ್ಬಂಧದ ಹಿನ್ನೆಲೆ ಇರುವ ಈ ಸಮುದಾಯದ ಜನ ಬೇರೊಂದು ಸಮುದಾಯದವರ ಜೊತೆ ವೈವಾಹಿಕ ಮೊದಲಾದ ಸಾಮಾಜಿಕ ಸಂಬಂಧಗಳನ್ನು ಬೆಳೆಸುವುದು ದೂರದ ಮಾತು. ಇಲ್ಲಿ ಗಮನಿಸಬೇಕಾದ ಸಂಗತಿ ಎಂದರೆ ನಡವಳಿಕೆಗಳಲ್ಲಿ ಪಾವಿತ್ರ್ಯತೆ ಕಳೆದುಕೊಂಡವರನ್ನು ಸಮುದಾಯದಿಂದ ಹೊರಹಾಕುವುದು ಸಾಮಾನ್ಯ ಹಾಗೂ ಸಹಜ ಸಂಗತಿ. ಆದರೂ ಎಲ್ಲಾ ತರಹದ

ತಪ್ಪಿಗೂ ಇಲ್ಲಿ ಕ್ಷಮೆ ಇದೆ. ಶಿಕ್ಷೆಗೊಳಗಾದ ವ್ಯಕ್ತಿ ಮರಳಿ ಸಮುದಾಯದೊಳಗೆ ಬರಲು ಇಚ್ಛಿಸಿದರೆ ಆತನನ್ನು ಶುದ್ಧಿ ಮಾಡಿ ಕರೆದುಕೊಳ್ಳುವ ಉದಾರ ಕ್ರಮಗಳೂ ಇಲ್ಲಿವೆ.

**೪.** ಕಾಡಿಗೆ ಹತ್ತಿರವಾದ ಬದುಕು : 'ಬುಡಕಟ್ಟು ಜನ ಸಾಮಾನ್ಯವಾಗಿ ತಮ್ಮ ಸಂತೋಷದ ಅಥವಾ ದುಃಖದ ಸಂದರ್ಭಗಳನ್ನು ಪ್ರಕೃತಿಯ ಮುಂದೆಯೇ ನಿವೇದಿಸಿಕೊಳ್ಳುವುದುಂಟು. ಅಲ್ಲಿ ಪರಿಹಾರ? ದೊರೆಯುವುದೆಂಬ ಖಚಿತ ನಂಬಿಕೆಯೂ ಅವರಿಗೆ ಇದೆ". (ಕೃಷ್ಣಮೂರ್ತಿ ಹನೂರು ೧೯೯೩:೯೮) ಇದಕ್ಕೆಲ್ಲಾ ಕಾರಣ ಬುಡಕಟ್ಟು ಸಮುದಾಯಗಳು ಹುಟ್ಟಿದ್ದು, ಕಾಡಲ್ಲಿ, ಬೆಳೆದುದ್ದು ಕಾಡಲ್ಲಿ, ಈ ಸಮುದಾಯವೂ ಕೂಡ ಕಾಡಿಗೆ ಹತ್ತಿರವಾಗಿ ಬದುಕಿದ ಇಂದಿಗೂ ಬದುಕುತ್ತಿರುವ ಬುಡಕಟ್ಟಾಗಿದೆ. ಮ್ಯಾಸನಾಯಕರ' ಮೂಲ ಪುರುಷ "ಚೆಟ್ಲು ಗೊಟ್ಲು ಮಲ್ಲಿನಾಯಕ" ಹುಟ್ಟಿದ್ದು ಕಾಡಲ್ಲಿ, ಒಂಟಿಕೊಂಬಿನ ಹಸುವಿನ ಗೊರಸಲ್ಲಿ ಬಿದ್ದ ವಿಭೂತಿನ ದೂಳಿನ ಕಣವೊಂದರಿಂದ. ಈತ ತಾಯಿಯ ಹಾಲಿನ ಬದಲಿಗೆ ಜೇನು ತುಪ್ಪವನ್ನು ಕಡಿದು ಬದುಕಿದವನು.

ಇಂದು ಬೇಡರು ವಾಸಿಸುವ ಹಟ್ಟಿಗಳನ್ನೆಲ್ಲ ಸೂಕ್ಷ್ಮವಾಗಿ ಪರಿಶೀಲಿಸಿದರೆ ಹಿಂದೆ ಆ ಪ್ರದೇಶಗಳು ದಟ್ಟ ಕಾಡಿನಿಂದ ಕೂಡಿದ್ದವೆಂಬುದಾಗಿ ತಿಳಿದುಬರುತ್ತದೆ. ಅಷ್ಟೇ ಅಲ್ಲ ಇಂದಿಗೂ ಮ್ಯಾಸಬೇಡರ ಅನೇಕ ಹಟ್ಟಿಗಳು ಅರಣ್ಯದಿಂದ ಸುತ್ತುವರೆದಿವೆ. ಹಾಗೆಯೇ ಇವರ ಬದುಕು ಅರಣ್ಯ ಪರಿಕರಗಳಿಂದ ಸಾಕಷ್ಟು ಪ್ರಭಾವಿತಗೊಂಡಿದೆ ಮತ್ತು ಅವಲಂಬಿತವಾಗಿದೆ.

**೫.** ಪ್ರತ್ಯೇಕ ಭಾಷೆ : ವಿಶೇಷವಾಗಿ ಚಿತ್ರದುರ್ಗ, ದಾವಣಗೆರೆ, ತುಮಕೂರು, ಜಿಲ್ಲೆಗಳ ಸುತ್ತಲಿನ ಮ್ಯಾಸನಾಯಕ'ರ ಸಮುದಾಯಗಳಲ್ಲಿ 'ಕಂದೆಲಗು' ಎಂಬ ಪ್ರತ್ಯೇಕ ಭಾಷೆ ಪ್ರಚಲಿತವಾಗಿದೆ. ತೆಲಗು ಹಾಗೂ ಕನ್ನಡ ಮಿಶ್ರಿತವಾದ ಈ ಭಾಷೆ ಮುಖ್ಯವಾಗಿ ತೆಲಗು. ಈ ತೆಲಗಿಗೆ ಕನ್ನಡ ಮಿಶ್ರಣಗೊಂಡು 'ಕಂದೆಲಗು' ಆಗಿ ಮಾರ್ಪಾಟಾಗಿರುವುದನ್ನು ಅಧ್ಯಯನಕಾರರು ಗುರುತಿಸಿದ್ದಾರೆ.

ಇಷ್ಟೆಲ್ಲಾ ಸಾಂಸ್ಕೃತಿಕ ವೈಶಿಷ್ಟ್ಯತೆಗಳೊಂದಿಗೆ ಬದುಕುತ್ತಿರುವ ಬೇಡರು ಕರ್ನಾಟಕ ಬುಡಕಟ್ಟುಗಳಲ್ಲೇ ಒಂದು ವಿಶಿಷ್ಟ ಸ್ಥಾನ ಉಳಿಸಿಕೊಂಡಿದ್ದಾರೆ. ಆಧುನಿಕ ಕಾಲದ ಈ ಸಂದರ್ಭದಲ್ಲಿ ಬುಡಕಟ್ಟು ಜಾತಿಗಳ ಸ್ಪಷ್ಟಗೆರೆ ಮಾಯವಾಗುತ್ತಿದೆ. ಆದರೂ ಕೆಲವೊಂದು ಸಮುದಾಯಗಳು ಬುಡಕಟ್ಟಾಗಿ ಮುಂದುವರೆಯುವ ಬದ್ಧತೆಯನ್ನು ತೋರ್ಪಡಿಸಿವೆ. ಬುಡಕಟ್ಟೊಂದು ಸಂಪೂರ್ಣ ಜಾತಿಯಾಗಿದೆ ಎಂದು ತೀರ್ಮಾನಿಸುವುದು ಯಾವ ಸಂದರ್ಭಕ್ಕೆ ಎಂಬುದರ ಬಗ್ಗೆ ವಿಚಾರ ಮಾಡುತ್ತಾ, ನಿರ್ಮಲ್ ಕುಮಾರ್ ಬೋಸ್ ಅವರು ಹೇಳಿದ ಮತ್ತೊಂದು ಎಲ್ಲ ಉಲ್ಲೇಖಾರ್ಹ. "ಬುಡಕಟ್ಟಿನ ಹುಟ್ಟು ಮದುವೆ ಸಾವು ಈ ಮೂರು ಸಂದರ್ಭಗಳಲ್ಲಿ ಬ್ರಾಹ್ಮಣರ ಪುರೋಹಿತ್ಯಕ್ಕೆ ಅವಕಾಶ ಕೊಡದೆ ತಾವೇ ನಡೆಸಿಕೊಂಡು ಹೋಗುತ್ತಾರೆ. ಎಲ್ಲಿಯವರೆಗೆ ಈ ಪರಿಸ್ಥಿತಿ ಉಳಿದಿರುವುದೋ ಅಲ್ಲಿಯವರೆಗೆ ಬುಡಕಟ್ಟು ತನ್ನ ಮೂಲ ರೂಪದಲ್ಲಿ ಉಳಿದಿರುತ್ತದೆ. ಹುಟ್ಟು ಮದುವೆ ಹಾಗೂ ಸಾವು ಈ ಸಂದರ್ಭಗಳಲ್ಲಿ ಬ್ರಾಹ್ಮಣರ ಪುರೋಹಿತ್ಯಕ್ಕೆ ಅವಕಾಶ ಕೊಡುವುದೋ ಆಗ ಬುಡಕಟ್ಟು ತನ್ನ ಮೂಲ

ಸ್ವರೂಪವನ್ನು, ಸ್ವಾತಂತ್ರ್ಯವನ್ನು ಕಳೆದುಕೊಂಡು ಜಾತಿಯಾಗಿ ಪರಿವರ್ತಿತವಾಗುತ್ತದೆ." (ಉಲ್ಲೇಖ : ತೀ.ನಂ. ಶಂಕರನಾರಾಯಣ: ೧೯೮೨:೦೨) ಈ ಮಾತನ್ನು ಪ್ರಸ್ತುತ ಮ್ಯಾಸನಾಯ ಸಮುದಾಯಕ್ಕೆ ಅನ್ವಯಿಸಿ ನೋಡಿದರೆ ಫಲಿತಾಂಶ ಸ್ಪಷ್ಟವಾಗಿರುತ್ತದೆ.

ಪರಾಮರ್ಶನ ಗ್ರಂಥಗಳು


೧. ಕ್ಷೇತ್ರಕಾರ್ಯಾಧಾರಿತ ಮಾಹಿತಿಗಳು.
೨. ಬುಡಕಟ್ಟು ಅಧ್ಯಯನ ನೆಲೆಯಲ್ಲಿ ಬೇಡನಾಯಕರು (ಲೇಖನ) ಕೆ.ಎಂ. ಮೈತ್ರಿ (ಇದರಲ್ಲಿ "ಘಟ್ಟಿ ಹೊಸಳ್ಳಿ ಘಟ್ಟಿಗ", ಸಂ. ಲಕ್ಷ್ಮಣ ತೆಲಗಾವಿ, ಹರತಿ ಪ್ರಕಾಶನ, ಹರ್ತಿಕೋಟೆ)
೩. ಮ್ಯಾಸಬೇಡರ ಸಂಸ್ಕೃತಿ, ಕೃಷ್ಣಮೂರ್ತಿ ಹನೂರು, ೧೯೯೩, ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು.
೪. ಮ್ಯಾಸಮಂಡಲ, ಮೀರಾಸಾಬಿಹಳ್ಳಿ ಶಿವಣ್ಣ, ೨೦೦೩, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.
೫. ಕಾಡುಗೊಲ್ಲರ ನಂಬಿಕೆ ಮತ್ತು ಸಂಪ್ರದಾಯಗಳು, ತೀ.ನಂ. ಶಂಕರನಾರಾಯಣ, ೧೯೮೨, ಪ್ರಸಾರಾಂಗ, ಮೈಸೂರು ವಿ.ವಿ.
೬. ಬುಡುಕಟ್ಟು ಸಮಾಜ ಹುಟ್ಟು ಸಾವಿನ ನಡುವೆ, ಗಂಗಾಧರ ದೈವಜ್ಞ, ೨೦೦೦, ಪ್ರಸಾರಾಂಗ, ಕನ್ನಡ ವಿ.ವಿ.ಹಂಪಿ.
೭. ಮನೆ ಸಮಾಜ ಸಂಸ್ಕೃತಿ, ಎಂ.ಪಿ.ವೀಣಾ, ನೆಲಮನೆ ಪ್ರಕಾಶನ, ಬೆಂಗಳೂರು.
೮. ಪ್ರಾಚೀನ ಭಾರತದ ಚರಿತ್ರೆ (ಡಿ.ಡಿ. ಕೊಸಂಬಿಯವರ ಚಿಂತನೆಗಳು) ಮೂಲ: ಬಾಲಗೋಪಾಲ್, ಅನು: ಎಚ್.ಎಸ್.ಶ್ರೀಮತಿ, ೧೯೯೮. ಬೆಳ್ಳಿಚುಕ್ಕಿ ಟ್ರಸ್ಟ್, ಬೆಂಗಳೂರು.

ವಿಳಾಸ

ಡಾ.ಎಸ್.ಎಂ.ಮುತ್ತಯ್ಯ
ಸಹಾಯಕ ಪ್ರಾಧ್ಯಾಪಕರು
ಕನ್ನಡ ವಿಭಾಗ
ಸಹ್ಯಾದ್ರಿ ವಿಜ್ಞಾನ ಕಾಲೇಜು(ಸ್ವಾಯತ್ತ)
ಶಿವಮೊಗ್ಗ – ೫೭೭ ೨೦೩
ಈ ಮೇಲ್ : [illegible]
ದೂರವಾಣಿ : ೯೪೪೮೬ ೪೦೧೧೪